





# ಕ್ರಿಯಾಶೀಲ ಕಲಾವಿದ ಕಮಲಂ ಅರಸು



ಸಾಂದರ್ಭಿಕ ಚಿತ್ರ, ಪ್ರಕೃತಿ ಚಿತ್ರ, ಭಾವ ಚಿತ್ರ, ಭಿತ್ತಿ ಚಿತ್ರ, ಅಮೂರ್ತ ಚಿತ್ರ ಹೀಗೆ ಚಿತ್ರಕಲೆಯ ಎಲ್ಲ ಪ್ರಕಾರಗಳಲ್ಲಿ ಕ್ರಿಯಾಶೀಲರಾಗಿ ತೊಡಗಿಸಿಕೊಂಡ ಕಮಲಂ ಅರಸು ಸದ್ದಿಲ್ಲದೆ ಕಲೆಯ ಕಾಯಕ ಮಾಡುತ್ತಿರುವ ಕಲಾವಿದ. ನಾಡಿನ ಹಲವಾರು ಪ್ರಖ್ಯಾತ ಪತ್ರಿಕೆಗಳಿಗೆ ಹಾಗೂ ಹಲವಾರು ಪ್ರಕಾಶನಗಳ ಪ್ರಕಟಣೆಗಳಿಗೆ ಮುಖಪುಟಗಳ ಚಿತ್ರವಿನ್ಯಾಸ ಮಾಡಿಕೊಟ್ಟ ಕಮಲಂ ಅರಸು ಸ್ನೇಹಜೀವಿ. ಪ್ರಸ್ತುತ ಬೆಂಗಳೂರಿನಲ್ಲಿ ವಾಸಿಸುತ್ತಿರುವ ಇವರು ನಮ್ಮ ನಾಡಿನ ಗಮನಾರ್ಹ ಕಲಾವಿದರಲ್ಲಿ ಒಬ್ಬರು. ಇವರು ಹಲವಾರು ಚುಟುಕಗಳು ಹಾಗೂ ಕವನಗಳನ್ನು ಬರೆಯುವ ಹವ್ಯಾಸ ಹೊಂದಿದ್ದು ಅವು 'ಹೊಸತು' ಮಾಸಪತ್ರಿಕೆಯಲ್ಲಿ ಆಗಾಗ ಪ್ರಕಟಗೊಳ್ಳುತ್ತವೆ.







**ದೇವರು ಇದ್ದಾನೆಯೇ ?** *ಬರ್ಟ್ರಂಡ್ ರಸೆಲ್;*
*ಭಾವಾನುವಾದ : ಎಂ. ಅಬ್ದುಲ್ ರೆಹಮಾನ್ ಪಾಷ* ... ೩೩

**ಸ್ವಾತಂತ್ರ್ಯಾನಂತರದ ಭಾರತ – ೪**
**ಸ್ವಾವಲಂಬನೆಯ ಕನಸು, ಸಾರ್ವಜನಿಕ ಕ್ಷೇತ್ರ ಉದ್ಯಮಗಳು**
*ಸಿ. ಆರ್. ಕೃಷ್ಣರಾವ್* ... ೧೨

**ಋಗ್ವೇದ ಪ್ರವೇಶಿಕೆ : ಐತಿಹ್ಯ ಮತ್ತು ವಾಸ್ತವ** *ಜಿ. ರಾಮಕೃಷ್ಣ* ... ೧೫

**ಜಿ. ಎಸ್. ಶಿವರುದ್ರಪ್ಪ ಮತ್ತು ಚೆನ್ನವೀರ ಕಣವಿ** *ಅಶೋಕ ಜಿ. ಎಸ್.* ... ೪೭

**ರಾಷ್ಟ್ರೀಕೃತ ಬ್ಯಾಂಕುಗಳ ಕೆಟ್ಟ ಸಾಲಗಳು** *ಕೊಳಲೂರು ರಾಧೇಯ* ... ೬೦
**ರೂಪಾಯಿ ಸೊರಗುತ್ತಿರುವದೇಕೆ ?** *ಪ್ರೊ॥ ಆರ್. ಪಿ. ಪುನಗಿನ* ... ೩೯

**ಬೆಳ್ಳಿ ಕೋಲು** *ಶಿವಮೊಗ್ಗ ರಮೇಶ್* ... ೨೫

**ಕಾವ್ಯಧಾರೆ :** ೨೯, ೩೭, ೪೩, ೫೦, ೬೨

**ಅಫ್ಘಾನಿಸ್ತಾನಕ್ಕೆ ಮರುಜೀವ ತುಂಬುವುದು ನಮ್ಮ ಕಾರ್ಯ**
*ವಿನಾಯಕ ಕುಲಕರ್ಣಿ* ... ೪೧
**ಆಮ್ ಆದ್ಮಿ ಪಕ್ಷ : ಕೆಲವು ಅಭಿಪ್ರಾಯಗಳು** *ಮ. ಶ್ರೀ. ಮುರಳಿ ಕೃಷ್ಣ* ... ೧೯
**ಜಾಗತೀಕರಣದ ಪರ್ವದಲ್ಲಿ ಹೆಚ್ಚುತ್ತಿರುವ ನಿರುದ್ಯೋಗ**
*ಬಿ. ರಾಜಶೇಖರಮೂರ್ತಿ* ... ೨೩

**ಎಡಚನೊಬ್ಬನ ಒಂದಿಷ್ಟು ಅಳಲುಗಳು** *ವಿನಾಯಕ ಎಲ್. ಪಟಗಾರ* ... ೫೩
**ಕನ್ನಡ ಭಾಷೆ – ಸಂಸ್ಕೃತಿ ಮತ್ತು ಡಬ್ಬಿಂಗ್** *ಶಶಿಕಾಂತ ಯಡಹಳ್ಳಿ* ... ೫೭
**ನಮ್ ಸ್ಕೂಲೂ ಮತ್ತು ನಮ್ ಮೇಷ್ಟ್ರುಗಳೂ !**
*ಸಂತೆಬೆನ್ನೂರು ಫೈಜ್ನಟ್ರಾಜ್* ... ೩೧

**ನಾನು ಓದಿದ ಪುಸ್ತಕ : 'ಸಾಮ್ರಾಟ್ ಅಶೋಕನ್'** *ಶೇಷನಾರಾಯಣ* ... ೫೫
**ವಿಶ್ವ ವೀಕ್ಷಣೆ : ಯುಕ್ರೇನ್ ಬಿಕ್ಕಟ್ಟು ಮತ್ತೊಂದು ಶೀತಯುದ್ಧಕ್ಕೆ ನಾಂದಿಯೇ ?**
*ಸೀಯಾರ್ಕೆ* ... ೫೨
**ನಭಾವಲೋಕನ : ಕಾಣದ ಗ್ರಹಣಗಳು** *ಡಾ॥ ಬಿ. ಎಸ್. ಶೈಲಜಾ* ... ೩೮
**ಹೊಸ ಓದು** *ಇಂದಿರಾಕುಮಾರಿ ಮತ್ತಿತರರು* ... ೩೦
**ಕ್ಷ–ಕಿರಣ** *ಪ್ರಕಾಶ್ ಎಸ್.* ... ೨೨

**ಚಿತ್ರಗಳು :** ಶ್ರೀಹರಿ, ಷಣ್ಮುಖ, ರವಿ ಹೆಗ್ಗಡಿ, ತನು,
ಕಮಲಂ ಅರಸು, ವಿ. ಗೋಪಾಲ್, ವಿ. ಆರ್. ಸಿ. ಶೇಖರ್, ಜಿಎಂಬೊ,
ಗೋಪಿ, ವಿಜಯಾನಂದ ಕಾಲವಾಡ

**ಮುಖಪುಟ :** ಲೋಕಸಭಾ ಚುನಾವಣಾ ವಿಶೇಷ

**ವಿನ್ಯಾಸ :** ನವಕರ್ನಾಟಕ ವಿನ್ಯಾಸ

**ಕಚೇರಿ ಸಹಕಾರ :** ಜಿ. ವಿ. ತೇಜೋವತಿ

## ಈ ತಿಂಗಳು



ಪ್ರತಿಸಲ ಚುನಾವಣೆಗಳು ಬಂದಾಗಲೂ ರಾಜಕೀಯ ಪಕ್ಷಗಳಲ್ಲಿ ಎಲ್ಲಿಲ್ಲದ ಚಟುವಟಿಕೆ ಕಂಡುಬರುತ್ತದೆ. ಒಂದು ಬಗೆಯ ಸಂಚಲನ ಮೂಡುತ್ತದೆ. ಈ ಸಲದ ಹದಿನಾರನೇ ಲೋಕಸಭಾ ಚುನಾವಣೆಯಂತೂ ಅತ್ಯಂತ ಕುತೂಹಲಕಾರಿ. ಒಂದೊಂದು ಚುನಾವಣೆ ಸಮಯದಲ್ಲೂ ಒಂದೊಂದು ಹೊಸ ರಾಜಕೀಯ ಪಕ್ಷ ಉದಯವಾಗುತ್ತದೆ. ೧೯೫೨ರಿಂದ ನಡೆದಿರುವ ಎಲ್ಲ ಚುನಾವಣೆಗಳ ಸಂದರ್ಭದಲ್ಲೂ ಇದನ್ನು ಗಮನಿಸಬಹುದು. ಚುನಾವಣೆಗೆ ಮುಂಚೆ ಹೊಸ ಪಕ್ಷವೊಂದು ಹುಟ್ಟಿ ಕೆಲ ದಿನಗಳ ನಂತರ ಹೆಸರಿಲ್ಲದೆ ಹೋಗಿದೆ. ಸಮ್ಮಿಶ್ರ ಅಥವಾ ಕಿಚಡಿ ಸರಕಾರದ ಯುಗ ಪ್ರಾರಂಭವಾದಾಗಿನಿಂದ ಹೊಂದಾಣಿಕೆಯ ಸರ್ಕಸ್ಸು ನಡೆಯುತ್ತಿದೆ. ಗೆದ್ದ ಕುದುರೆ ಇಲ್ಲ ಗೆಲ್ಲುವ ಕುದುರೆಯ ಬಾಲ ಹಿಡಿದುಹೋಗುವುದು ರೂಢಿಯಾಗಿಬಿಟ್ಟಿರುತ್ತದೆ ಕೆಲವರಿಗೆ. ಟಿಕೇಟಿಗಾಗಿ ಪರದಾಟ, ಪಕ್ಷಾಂತರ, ದ್ರೋಹ, ವಂಚನೆ ಎಲ್ಲ ನಡೆದದ್ದೆ. ಸೋಲುವುದು ಖಚಿತ ಎಂದು ಮೊದಲೇ ಗೊತ್ತಿದ್ದರೂ ಸ್ಪರ್ಧಿಸುವವರಿಗೇನೂ ಕಮ್ಮಿ ಇಲ್ಲ. ಈಗ ಲೋಕಸಭೆಗೆ ಸ್ಪರ್ಧಿಸಲು ರೂ. ೨೫,೦೦೦ ಠೇವಣಿ ಹಣ ಕಟ್ಟಬೇಕಂತೆ, ಮೊದಲು ಅಷ್ಟಿರಲಿಲ್ಲ. ಮೊನ್ನೆ ಪ್ರಕಟವಾದ ಅಂಕಿ–ಅಂಶಗಳೊಂದರ ಪ್ರಕಾರ ಠೇವಣಿ ಕಳೆದುಕೊಳ್ಳುವವರ ಸಂಖ್ಯೆ ಏರುತ್ತಲೇ ಇದೆ. ಇದನ್ನು ಕುದುರೆ ರೇಸ್‌ಗೆ ಹೋಲಿಸಬಹುದೇನೊ. ಇನ್ನು ಚುನಾವಣೆಗಳಿಗೆ ನಿಲ್ಲುವ ಅಭ್ಯರ್ಥಿಗಳು ಹಣ ಎಲ್ಲಿಂದ ತರುತ್ತಾರೆ ಎಂಬುದು ನಿಗೂಢ. ದೊಡ್ಡ ರಾಜಕೀಯ ಪಕ್ಷಗಳಾದ ಕಾಂಗ್ರೆಸ್, ಭಾಜಪಗಳಿಗೆ ಕಾರ್ಪೊರೇಟ್ ವಲಯದಿಂದ ಹಣದ ಹೊಳೆಯೇ ಹರಿಯುತ್ತದೆ. ಚುನಾವಣಾ ಆಯೋಗ ನಿಗದಿಪಡಿಸುವ ಮಿತಿಯಲ್ಲಿ ಖರ್ಚು ಮಾಡಿ ಗೆಲ್ಲುವ ಅಭ್ಯರ್ಥಿಗಳು ಅಪರೂಪ. ಈ ಸಲ ಚುನಾವಣೆಗಳಲ್ಲಿ ಕೋಟಿಗಟ್ಟಲೆ ಖರ್ಚು ಪ್ರತಿ ಕ್ಷೇತ್ರದಲ್ಲೂ ಖರ್ಚಾಗುವುದಂತೂ ಖಚಿತ. ಇದು ಎಲ್ಲ ಚುನಾವಣೆಗಳಲ್ಲೂ ಇದ್ದದ್ದೆ. ಒಂದು ಸಮಾಧಾನದ ಸಂಗತಿ ಎಂದರೆ ಒಂದಷ್ಟು ಜನ ನಿರುದ್ಯೋಗಿಗಳಿಗೆ ಒಂದೆರಡು ತಿಂಗಳಾದರೂ ಕೈಯಲ್ಲಿ ಕಾಸು ಓಡಾಡುತ್ತದೆ. ಇನ್ನಷ್ಟು ಜನರಿಗೆ ಒಳ್ಳೆ ಊಟ ಸಿಗುತ್ತದೆ. ಈಗ ಜನಸಂಪರ್ಕಕ್ಕೆ ಆಧುನಿಕ ಸಲಕರಣೆಗಳ ಬಳಕೆ ಬೇರೆ. ಟೆಲಿಫೋನ್, ಮೊಬೈಲ್, ಇ–ಮೇಲ್, ಫೇಸ್‌ಬುಕ್, ಟ್ವಿಟ್ಟರ್ ಇತ್ಯಾದಿಗಳ ಬಳಕೆ. ಇದಕ್ಕೆಲ್ಲ ಜನ ಬೇಕಲ್ಲ. ಮೊದಲ ಚುನಾವಣೆಗಳಲ್ಲಿ ಅರವತ್ತೆರಡು ವರ್ಷಗಳ ಕೆಳಗೆ ಊಟ ಕೊಟ್ಟು ಐದು ರೂಪಾಯಿ ಕೊಡುತ್ತಿದ್ದರು. ಈಗ ಅದು ಎಷ್ಟಾಗಿರಬಹುದು ಊಹಿಸಿಕೊಳ್ಳಿ. ಅಂದ ಹಾಗೆ ಚುನಾವಣೆಗೆ ಹಣ ಸಂಗ್ರಹಿಸಲು ಹೊಸದಾಗಿ ಬಿಳಿ ಟೋಪಿ ಹಾಕಹೊರಟಿರುವ ಆಮ್ ಆದ್ಮಿ ಪಾರ್ಟಿ – ಜನಸಾಮಾನ್ಯರ ಪಾರ್ಟಿ – ಅಮೆರಿಕ ಮಾದರಿಯಲ್ಲಿ ಅಡಿಯಿರಿಸಿದೆ. ಅಮೆರಿಕ ಅಧ್ಯಕ್ಷ ಚುನಾವಣೆಗಳಲ್ಲಿ ತಾರಾ ಹೋಟೆಲಿನಲ್ಲಿ ಭೋಜನಕೂಟ ಏರ್ಪಡಿಸುತ್ತಾರೆ, ದುಬಾರಿ ವಂತಿಗೆ ತೆಗೆದುಕೊಂಡು. ಹಾಗೇ ಆಮ್ ಆದ್ಮಿ ಪಾರ್ಟಿ ಬೆಂಗಳೂರಿನಲ್ಲಿ ಪ್ರತಿ ಊಟಕ್ಕೆ ರೂ. ೨೦,೦೦೦ ನಿಗದಿಪಡಿಸಿತ್ತು. ೨೦೦ ಜನ ಭಾಗವಹಿಸಿದ್ದರಂತೆ, ಅವರು ಯಾರು ಎನ್ನುವುದು ನಿಮಗೆ ಗೊತ್ತಿರಬೇಕು – ಎಲ್ಲ ಆಮ್ ಆದ್ಮಿಗಳೆ. ಭಾಜಪಾದಿಗಳಿಗೆ ಭಿನ್ನವಾಗಿ ಇವರು ಪ್ರತಿ ಕಾಸಿನ ಲೆಕ್ಕ ಕೊಡುತ್ತಾರಂತೆ.

* * *

ನರೇಂದ್ರ ಮೋದಿಯನ್ನು ಪ್ರಧಾನಿ ಪಟ್ಟಕ್ಕೇರಿಸಲು ಹೊರಟಿರುವ ಭಾಜಪ ಗೆಲ್ಲುವ ಕುದುರೆಗಳ ಆಯ್ಕೆಯಲ್ಲಿ ಮುಂದಿದೆ ಎನ್ನಬೇಕು. ಪಟ್ಟಿಗಳ ಮೇಲೆ ಪಟ್ಟಿಗಳನ್ನು ಕಾಂಗ್ರೆಸ್ ಮತ್ತು ಭಾಜಪಗಳು ಒಂದಾದ ಮೇಲೊಂದು ಬಿಡುಗಡೆ ಮಾಡುತ್ತಿವೆ. ಎಲ್ಲ ಹಳೆ ಮುಖಗಳೇ, ಅಲ್ಲೊಂದು ಇಲ್ಲೊಂದು ಹೊಸ ಮುಖ ಅಷ್ಟೆ. ಸುರಕ್ಷಿತವಾದ ರೀತಿಯಲ್ಲಿ ವ್ಯವಹಾರ. ಕರ್ನಾಟಕದಲ್ಲಿ ಯಡಿಯೂರಪ್ಪ ಮತ್ತು ಅವರ ಬೆಂಬಲಿಗರಲ್ಲಿ ಕೆಲವರನ್ನು ಭಾಜಪಗೆ ತೆಗೆದುಕೊಂಡು ಅವರಿಗೆ ಟಿಕೇಟು ಹಂಚಿದ್ದು ಗೊತ್ತಿರುವ ವಿಷಯ. ಈ ನಾಟಕೀಯ ಬೆಳವಣಿಗೆಯಲ್ಲಿ ಯಡಿಯೂರಪ್ಪನವರೇ ಹುಟ್ಟುಹಾಕಿದ್ದ ಕರ್ನಾಟಕ ಜನತಾ ಪಕ್ಷವನ್ನು ನಡುನೀರಿನಲ್ಲಿ ಮುಳುಗಿಸಿ ಕೈ ತೊಳೆದುಕೊಂಡಿದ್ದಾರೆ. ಈಗ ಅವರ ಮೇಲಿದ್ದ

(೬ನೇ ಪುಟಕ್ಕೆ)




ಸಂಪುಟ-೧೫ ಸಂಚಿಕೆ-೯ ಏಪ್ರಿಲ್ ೨೦೧೪

ಜಿ. ರಾಮಕೃಷ್ಣ

ಸಿದ್ದನಗೌಡ ಪಾಟೀಲ

ಇಂದಿರಾ ಕುಮಾರಿ
ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ರಾಮಲಿಂಗಪ್ಪ ಟಿ. ಬೇಗೂರು
ಎಸ್. ಸುರೇಂದ್ರ

ಎ. ಆರ್. ಉಡುಪ

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೩೯೭೪೨೬




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೩೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
**e-mail : navakarnataka@gmail.com**
**hosathu@gmail.com**
**hosathu.nkp@gmail.com**
**URL : www.navakarnataka.com**
**http : //navakarnataka.blogspot.in**
**http : //hosathumonthly.blogspot.in**



# ಸಂಪಾದಕೀಯ

## ರಾಜಕೀಯವಿಲ್ಲದ ರಾಜಕಾರಣ

ಸ್ವಾತಂತ್ರ್ಯೋತ್ತರ ಭಾರತದಲ್ಲಿ ನಮ್ಮ ಸಂಸತ್ತಿಗೆ ನಡೆದ ಚುನಾವಣೆಗಳಲ್ಲಿ ಇಷ್ಟು ನೀರಸವಾದ, ವಿಷಯರಹಿತ, ರಾಜಕೀಯವೇ ಇಲ್ಲದ ಚುನಾವಣೆ ಯಾವತ್ತೂ ನಡೆದಿರಲಿಲ್ಲ. ಬಹುಶಃ ರಾಜಕೀಯವೇ ಇಲ್ಲದ ರಾಜಕಾರಣ ಅಂದರೆ ಇದೇ. ಇಂದು ಬಹುತೇಕ ರಾಜಕೀಯ ಪಕ್ಷಗಳು ತಮ್ಮ ಧೋರಣೆಗಳನ್ನು ಹೇಳದೆ ಕೇವಲ ಅಧಿಕಾರದ ಗುರಿ ಹೊತ್ತು ಮುನ್ನಡೆಯುತ್ತಿವೆ. ಇದರರ್ಥ ಅಧಿಕಾರದಾಸೆ ಇಲ್ಲದ ರಾಜಕಾರಣ ಇರಬೇಕೆಂದಲ್ಲ. ರಾಜಕೀಯ ಪಕ್ಷಗಳಿರುವುದೇ ರಾಜ್ಯಭಾರ ಮಾಡಲು. ಆದರೆ ಆ ರಾಜಕೀಯ ಪಕ್ಷಗಳಿಗೆ ಒಂದು ರಾಜಕೀಯ ನೀತಿ ಬೇಕಾಗುತ್ತದೆ. ತಮ್ಮನ್ನು ಚುನಾಯಿಸಿ ಜನಪ್ರತಿನಿಧಿಗಳನ್ನಾಗಿಸುವ ಜನರ ಮುಂದೆ ತಮ್ಮ ರಾಜ್ಯನೀತಿಗಳನ್ನು ಘೋಷಿಸಬೇಕಾಗುತ್ತದೆ. ಅವರ ನೀತಿಗಳಲ್ಲಿ ತಮ್ಮನ್ನು ಚುನಾಯಿಸಿದ ಜನತೆಯ, ದೇಶದ, ಹಿತಾಸಕ್ತಿಯನ್ನು ಒಳಪಡಿಸಬೇಕಾಗುತ್ತದೆ. ಇಂದು ಸ್ಪರ್ಧೆಯಲ್ಲಿರುವ ಆಡಳಿತ ಪಕ್ಷದ ಮೈತ್ರಿಕೂಟವಾಗಲೀ, ವಿರೋಧಪಕ್ಷದ ಮೈತ್ರಿಕೂಟವಾಗಲೀ ಇಂಥ ಜನಪರವಾದ ಧೋರಣೆಗಳನ್ನು ಜನತೆಯ ಮುಂದಿಡದೆ ಚುನಾವಣೆಗೆ ಹೋಗುತ್ತಿರುವುದು ನಮ್ಮ ಪ್ರಜಾಸತ್ತೆಯ ದುರಂತ. ಈ ಪಕ್ಷಗಳು ಘೋಷಣೆಗಳನ್ನೇ ಕೊಡುತ್ತಿಲ್ಲವೆಂದಲ್ಲ. ಇವರ ಪ್ರಥಮ ಘೋಷಣೆ ಎದುರು ಪಕ್ಷವನ್ನು ಟೀಕಿಸುವುದು, ಎರಡನೇ ಘೋಷಣೆ ತಮ್ಮ ಹುಸಿ ಘೋಷಣೆಗಳನ್ನು ವೈಭವೀಕರಿಸುವುದು.

ಇಂದು ಕಾಂಗ್ರೆಸ್, ಬಿ.ಜೆ.ಪಿ. ಮೈತ್ರಿಕೂಟಗಳ ಹೇಳಿಕೆಗಳು ಯಾವುದೇ ರೀತಿಯ ಸಂಚಲನವನ್ನೂ ಮೂಡಿಸಲಾಗದ ಹಂತ ತಲುಪಿವೆ. ಕಾಂಗ್ರೆಸ್ ಬಿ.ಜೆ.ಪಿ.ಯನ್ನು ಕೋಮುವಾದಿಯೆಂದು ಹೇಳಿ ತನ್ನ ಹುಸಿ ಜಾತ್ಯತೀತತೆಯನ್ನು ವೈಭವೀಕರಿಸುತ್ತದೆ. ಬಿ.ಜೆ.ಪಿ., ಕಾಂಗ್ರೆಸ್ ಭ್ರಷ್ಟ ಪಕ್ಷವೆಂದು ಹೇಳುತ್ತ ತನ್ನ ಹುಸಿ ಅಭಿವೃದ್ಧಿ ಪರಿಕಲ್ಪನೆಯನ್ನು ವೈಭವೀಕರಿಸುತ್ತಿದೆ. ಕಾಂಗ್ರೆಸ್ ನಾಯಕತ್ವದ ಮೈತ್ರಿಕೂಟ ತನ್ನ ಆಡಳಿತಾವಧಿಯಲ್ಲಿ ನಡೆಸಿದ ಭ್ರಷ್ಟಾಚಾರಗಳಿಂದಾಗಿ ಜನತೆಯ ಮುಂದೆ ನಿಲ್ಲುವ ಹಕ್ಕನ್ನು ಕಳೆದುಕೊಂಡಿದೆ. ಕಾಂಗ್ರೆಸ್ ಮೈತ್ರಿಕೂಟದ ಭ್ರಷ್ಟಾಚಾರದ ಬಗ್ಗೆ ಮಾತನಾಡುವ ಬಿ.ಜೆ.ಪಿ. ತನ್ನ ರಾಷ್ಟ್ರೀಯ ಅಧ್ಯಕ್ಷ ನಿತಿನ್ ಗಡ್ಕರಿ ರಾಜೀನಾಮೆ ಕೊಟ್ಟಿದ್ದೇಕೆ ಎನ್ನುವುದನ್ನು ಪ್ರಶ್ನಿಸಿಕೊಳ್ಳುತ್ತಿಲ್ಲ. ಕರ್ನಾಟಕದಲ್ಲಿ ಭ್ರಷ್ಟಾಚಾರದಿಂದ ಕುಸಿದ ಬಿ.ಜೆ.ಪಿ. ಇಂದು ಆ ಕುಸಿತಕ್ಕೆ ಕಾರಣರಾದ ಭ್ರಷ್ಟರು, ಗಣಿಗಳ್ಳರನ್ನು ಮತ್ತೆ ಪಕ್ಷದೊಳಗೆ ಸೇರಿಸಿಕೊಂಡಿದೆ. ಹೀಗಾಗಿ ಬಿ.ಜೆ.ಪಿ. ಭ್ರಷ್ಟಾಚಾರದ ವಿರುದ್ಧ, ಅಭಿವೃದ್ಧಿ ಪರವಾಗಿ ಹೇಳುವ ಘೋಷಣೆಗಳನ್ನು ಜನ ನಂಬುವ ಸ್ಥಿತಿಯಲ್ಲಿಲ್ಲ. ಒಂದು ಅಂಶವನ್ನು ಈ ಸಂದರ್ಭದಲ್ಲಿ ಗಮನಿಸಬೇಕು. ಬಿ.ಜೆ.ಪಿ. ಈ ಬಾರಿ ಕೋಮು ಆಧಾರಿತ ಘೋಷಣೆಗಳಾದ ರಾಮಮಂದಿರ, ಅಯೋಧ್ಯೆ ಮುಂತಾದ ಹಳಸಲು ಪದಪುಂಜಗಳನ್ನು ಬಳಸುತ್ತಿಲ್ಲ. ಅಂದ ಮಾತ್ರಕ್ಕೆ ಅವರು ಆ ಕಾರ್ಯಕ್ರಮವನ್ನು ಕೈಬಿಟ್ಟಿದ್ದಾರೆಂದಲ್ಲ. ಕಳೆದ ಚುನಾವಣೆಗಳಲ್ಲಿ ಈ ಕೋಮು ಆಧಾರಿತ ಘೋಷಣೆಗಳು ಅವರಿಗೆ ಕೆಲವೆಡೆ ಕೆಲ ಸ್ಥಾನಗಳನ್ನು ಪಡೆಯಲು ಸಹಾಯಕವಾಗಿರಬಹುದೇ ಹೊರತು ಏಕಪಕ್ಷ ಅಧಿಕಾರಕ್ಕೆ, ಬರಲು ಸಹಕಾರಿಯಾಗಲಿಲ್ಲ. ಹೀಗಾಗಿ ಈ ಬಾರಿ ಹಿಂದುತ್ವ ಅವರ ಗುಪ್ತ ಕಾರ್ಯಸೂಚಿ. ಕರ್ನಾಟಕದ, ದೇಶದ ದೇವಸ್ಥಾನಗಳು ನಿರಾತಂಕವಾಗಿ ಬಿ.ಜೆ.ಪಿ.ಯ, ಮೋದಿಯವರ ಪ್ರಚಾರಕ್ಕೆ ಬಳಕೆಯಾಗುತ್ತಿರುವುದನ್ನು ಗಮನಿಸಿದರೆ ಈ ಗುಪ್ತ ಕಾರ್ಯಸೂಚಿ ಅರ್ಥವಾಗುತ್ತದೆ.

ಇನ್ನು ಯು.ಪಿ.ಎ. ಆಗಲೀ ಎನ್.ಡಿ.ಎ. ಆಗಲೀ ಕಳೆದ ಐದು ವರ್ಷಗಳಲ್ಲಿ ಆಡಳಿತ ಮತ್ತು ವಿರೋಧ ಪಕ್ಷಗಳಾಗಿ ಮಾಡಿದ ಕೆಲಸವೆಂದರೆ ಬಹುರಾಷ್ಟ್ರೀಯ ಕಂಪನಿಗಳಿಗೆ ತಮ್ಮ ತಮ್ಮ ಸ್ಥಾನಬಲದಿಂದ ಅನುಕೂಲ ಮಾಡಿಕೊಡುವುದು. ಆ ಕಾರಣಕ್ಕೆ ಈಗಿರುವ ಎಲ್ಲ ಹಗರಣಗಳನ್ನೂ ಮೀರಿಸಬಲ್ಲ ಹಗರಣವಾಗಿರುವ ಅಂಬಾನಿಯ 'ಅನಿಲ' ಹಗರಣ ಕುರಿತು ಎರಡೂ ಕೂಟದವರೂ ಮಾತನಾಡುವುದಿಲ್ಲ. ಇದೊಂದು ಉದಾಹರಣೆ ಮಾತ್ರ. ಈ ಕುರಿತು ಸಿ.ಪಿ.ಐ.ನ ಸಂಸದ ಗುರುದಾಸ್ ದಾಸ್‌ಗುಪ್ತಾ ಸಂಸತ್ತಿನ ಒಳಗೆ–ಹೊರಗೆ ಸಾಕಷ್ಟು ಹೋರಾಟ ಮಾಡಿದರೂ ಕಾರ್ಪೊರೇಟ್ ಮಾಧ್ಯಮ ಜಗತ್ತು ಅದಕ್ಕೆ ಪ್ರಚಾರ ಕೊಡಲಿಲ್ಲ. ಈಗ ಅರವಿಂದ ಕೇಜ್ರಿವಾಲ ಆ ವಿಷಯ ಮಾತನಾಡುತ್ತಿದ್ದಾರೆ.

ಒಟ್ಟಿನಲ್ಲಿ ಯು.ಪಿ.ಎ. ಮತ್ತು ಎನ್.ಡಿ.ಎ., ಅದರಲ್ಲೂ ಪ್ರಮುಖವಾಗಿ ಕಾಂಗ್ರೆಸ್ ಮತ್ತು ಬಿ.ಜೆ.ಪಿ. ಮಾಡುತ್ತಿರುವುದು ಜನಪ್ರತಿನಿಧಿ ರಾಜಕಾರಣವಲ್ಲ. ಅದು ಕಾರ್ಪೊರೇಟ್ ಪ್ರಾತಿನಿಧ್ಯದ ರಾಜಕಾರಣ. ದುಡ್ಡು ಅವರದು, ಮಾಧ್ಯಮಗಳು ಅವರವು, ಅಧಿಕಾರವೂ ಅವರಿಗೆ, ಮತ ಮಾತ್ರ ಜನರದು. ಆ ಮತ ಪಡೆಯಲು ಎರಡು ಮುಖ ಬೇಕು. ಒಂದು ಗೆಲುವಿಗೆ, ಒಂದು ಸೋಲಿಗೆ. ಅದು ನರೇಂದ್ರ ಮೋದಿ ಮತ್ತು ರಾಹುಲ್ ಗಾಂಧಿ ಮೂಲಕ ಈಡೇರುತ್ತದೆ. ಇವರಲ್ಲಿ ಯಾರೇ ಗೆದ್ದರೂ ಸೋಲುವುದು ಪ್ರಜಾಸತ್ತೆ; ಯಾರೇ ಗೆದ್ದರೂ ಅವರು ಜನವಿರೋಧಿಯಾಗಿರುತ್ತಾರೆ, ಬಹುರಾಷ್ಟ್ರೀಯ ಕಂಪನಿಗಳ ಪರವಾಗಿರುತ್ತಾರೆ.

ಭಾರತದ ಏಕಸೂತ್ರದ ಎರಡು ಒಕ್ಕೂಟಗಳ ರಾಜಕೀಯ ವ್ಯವಸ್ಥೆಗೆ ಪರ್ಯಾಯ ನೀತಿ ರೂಪಿಸಲು ಎಡಪಕ್ಷಗಳೇನೋ ಪ್ರಯತ್ನಪಟ್ಟವು. ಆದರೆ ಅಸ್ತಿತ್ವ, ಅಧಿಕಾರದ ಸುತ್ತ ನಡೆವ ಪ್ರಾದೇಶಿಕ ಪಕ್ಷಗಳಿಗೆ ಈ

ಪರ್ಯಾಯ ನೀತಿಯ ಮಹತ್ವ ಅರಿವಾಗಲಿಲ್ಲ. ಅವರಿಗೆ ಅದು ಬೇಕೂ ಆಗಿರಲಿಲ್ಲ. ಇಂಥ ಸಮಯ ಸಾಧಕತನದ ಕಾರಣದಿಂದಲೇ ಪ್ರಾದೇಶಿಕ ಪಕ್ಷಗಳು ಫೆಡರಲ್ ವ್ಯವಸ್ಥೆಗೆ ಅಪಾಯಕಾರಿಯಾಗಿ ಗೋಚರಿಸುತ್ತಿರುವುದು. ಏನೇ ಆದರೂ ಮುಂಬರುವ ಚುನಾವಣೆಯಲ್ಲಿ ಯಾವ ಪಕ್ಷವೂ ಬಹುಮತ ಪಡೆಯದೇ ಈ ಕೂಟ ರಾಜಕಾರಣ ಅನಿವಾರ್ಯವಾಗುತ್ತದೆ. ಆಗ ಮತ್ತೆ ಪ್ರಾದೇಶಿಕ ಪಕ್ಷಗಳ ನಡೆ ಮಹತ್ವ ಪಡೆಯುತ್ತದೆ. ಆಗ ಈಗಿರುವ ಎರಡೂ ಕೂಟಗಳ ಘೋಷಣೆ ಮುಖ್ಯವಾಗದೆ ಅಧಿಕಾರವೊಂದೇ ಮುಖ್ಯವಾಗುತ್ತದೆ. ಆಗಲೂ ಈಗ ಮತದಾರರನ್ನು ಖರೀದಿಸಲು ನೆರವು ನೀಡಿದಂತೆ ಪಕ್ಷಗಳನ್ನು ಖರೀದಿಸಲು ಕಾರ್ಪೊರೇಟ್ ಕಂಪನಿಗಳು ಹಣ ಹರಿಸುತ್ತವೆ. ತಮಗೆ ಬೇಕಾದ ಸರಕಾರವನ್ನು ತಮಗೆ ಬೇಕಾದ ರೀತಿಯಲ್ಲಿ ಪಡೆಯುತ್ತವೆ. ಅದಕ್ಕಾಗಿ ಈ ಚುನಾವಣೆ ನಡೆಯಬೇಕು. ಇಂಥ ಚುನಾವಣೆಗೆ ರಾಜಕೀಯ ಪಕ್ಷ, ರಾಜನೀತಿ, ರಾಜಕಾರಣ ಬೇಕಾಗಿಲ್ಲ. ಅದಕ್ಕಾಗಿಯೇ ಇದನ್ನು ರಾಜಕೀಯವಿಲ್ಲದ ರಾಜಕಾರಣ ಎನ್ನಬೇಕು. ಇಲ್ಲಿ ಕಾಂಗ್ರೆಸ್, ಬಿ.ಜೆ.ಪಿ., ಜೆ.ಡಿ.ಎಸ್. ಯಾವುದೇ ಪಕ್ಷವಿರಲಿ ಎಡಪಕ್ಷಗಳನ್ನು ಹೊರತುಪಡಿಸಿದರೆ ನೀತಿರಹಿತ ರಾಜಕಾರಣವೇ ಜಾರಿಯಲ್ಲಿರುವುದು. ಇಂದು ಜನತೆ ತಮ್ಮ ಪರವಾದ ರಾಜಕಾರಣವನ್ನು ತಾವೇ ರೂಪಿಸಬೇಕಿದೆ. ಅದಕ್ಕಾಗಿ ಜನಾಂದೋಲನಗಳು ನಡೆಯಬೇಕಾಗಿವೆ. ಈಗಾಗಲೇ ವಿಶ್ವದಾದ್ಯಂತ ಇಂಥ ಜನಾಂದೋಲನಗಳು ರೂಪುಗೊಳ್ಳುತ್ತಿವೆ. ಈ ಆಂದೋಲನಗಳು ಕೇವಲ ಆಕ್ರೋಶವಾಗದೆ ಪರ್ಯಾಯವಾಗಿ ಜನಪರ ರಾಜಕೀಯ ವೇದಿಕೆಯಾಗುವಂತಾಗಬೇಕು.

ಪಶ್ಚಿಮ ಏಷ್ಯದಲ್ಲಿ ನಡೆದ ಕೇವಲ ಆಕ್ರೋಶದ ಆಂದೋಲನಗಳು, ಪ್ರಭುತ್ವ ವಿರೋಧಿ ಹೋರಾಟಗಳು ಒಂದು ನಿರ್ದಿಷ್ಟ ಜನಪರ ಪರ್ಯಾಯದ ಪರಿಕಲ್ಪನೆ ಇಲ್ಲದೆ ಇನ್ನೊಂದು ಜನವಿರೋಧಿ ಆಡಳಿತಕ್ಕೋ, ಅರಾಜಕತೆಗೋ ಸಿಲುಕಿದ ಉದಾಹರಣೆಗಳು ನಮ್ಮ ಕಣ್ಣಮುಂದಿವೆ. ಇದೇ ಸಂದರ್ಭದಲ್ಲಿ ದಕ್ಷಿಣ ಅಮೆರಿಕದಲ್ಲಿ ನಡೆದ ರಾಜಕೀಯ ಬದಲಾವಣೆಗಳು ನೀತಿ ಪರ್ಯಾಯದ ಮಾರ್ಗ ಅನುಸರಿಸಿ ಏಕಕಾಲದಲ್ಲಿ ಪ್ರತಿಕ್ರಿಯೆ ಹಾಗೂ ಕ್ರಿಯಾಮೂಲ ರಾಜಕಾರಣಕ್ಕೆ ಮಾದರಿಗಳನ್ನು ಒದಗಿಸಿವೆ. ಇಂಥ ಸನ್ನಿವೇಶದಲ್ಲಿ ನಮ್ಮ ದೇಶದಲ್ಲಿ ನಡೆಯುತ್ತಿರುವ ಅಸಂಖ್ಯಾತ ರೈತ ಹೋರಾಟಗಳು, ದಲಿತ ಚಳುವಳಿಗಳು, ಕಾರ್ಮಿಕ ಚಳುವಳಿಗಳು, ಭ್ರಷ್ಟಾಚಾರ ವಿರೋಧಿ ಹೋರಾಟಗಳು, ಒಟ್ಟಾರೆ ಸಾಮಾಜಿಕ ಆರ್ಥಿಕ, ಮೂಲಭೂತ ಸೌಲಭ್ಯಗಳಿಗಾಗಿ ನಡೆಯುವ ಆಂದೋಲನಗಳು ಇವತ್ತಿನ ಸಂದರ್ಭದಲ್ಲಿ ಒಂದು ರಾಜಕೀಯ ಶಕ್ತಿಯಾಗಿ ಹೊರಹೊಮ್ಮಬೇಕಿದೆ. ಇಂಥ ಒಂದು ಮಾದರಿ ಇಂದು ನಮ್ಮ ಮುಂದಿದೆ. ಭ್ರಷ್ಟಾಚಾರ ವಿರೋಧಿ ಆಂದೋಲನದಿಂದ ಹೊರಹೊಮ್ಮಿದ ಆಮ್ ಆದ್ಮಿ ಪಕ್ಷ ಇಂದು ಕೇವಲ ಪ್ರತಿಕ್ರಿಯೆಯನ್ನೇ ತನ್ನ ಕ್ರಿಯೆಯನ್ನಾಗಿಸಿಕೊಂಡಿದೆ. ಇಂಥ ರಾಜಕೀಯ ನಡೆಗಳು ಕೇವಲ ಪ್ರತಿಕ್ರಿಯೆಗೆ ಸೀಮಿತವಾಗುತ್ತವೆಯೇ ಹೊರತು ಪರ್ಯಾಯ ಚಿಂತನೆಗೆ ತೊಡಗಿಸುವುದಿಲ್ಲ.

ಭಾರತದ ಪ್ರಜಾಸತ್ತೆ ಸಂಕ್ರಮಣ ಸ್ಥಿತಿಯಲ್ಲಿದೆ. ಪ್ರಜಾಸತ್ತೆಯನ್ನು ಜೀವಂತವಾಗಿಡುವ ಚುನಾವಣೆಗಳು ರಾಜಕೀಯ ವಿಡಂಬನೆಗಳಂತೆ ಗೋಚರಿಸುತ್ತಿವೆ. ಇಂಥ ಪರಿಸ್ಥಿತಿ ಜನವಿರೋಧಿ, ಜೀವವಿರೋಧಿ ಶಕ್ತಿಗಳಿಗೆ, ಭ್ರಷ್ಟರಿಗೆ ಅನುಕೂಲಕರವಾಗಿ ದೇಶ ಅರಾಜಕ ಸ್ಥಿತಿಗೆ ತಳ್ಳಲ್ಪಡುವ ಅಪಾಯವಿದೆ. ಈ ಸಂದರ್ಭದಲ್ಲಿ ನಮ್ಮ ದೇಶದ ಪ್ರಜೆ, ಮತದಾರ ತನ್ನ ರಾಜಕೀಯ ಜವಾಬ್ದಾರಿಯನ್ನು ಅರ್ಥಮಾಡಿಕೊಳ್ಳಲಿ ಎಂದು ಮಾತ್ರ ಆಶಿಸಬಹುದು.

## ಕಾರ್ಪೊರೇಟುಗಳು – ಚುನಾವಣೆಗಳು

"ನಾನು ಕಾನೂನು ಮುರಿಯುವುದಿಲ್ಲ. ನಾನು ಕಾನೂನನ್ನು ಮಾಡುತ್ತೇನೆ." – ಈ ಮಾತನ್ನು ಹೇಳಿದ್ದು ದಿವಂಗತ ಧೀರೂಭಾಯಿ ಅಂಬಾನಿ. ಹತ್ತಾರು ಸಾವಿರ ಕೋಟಿಯ ರಿಲಯನ್ಸ್ ಉದ್ಯಮ ಸಂಸ್ಥೆಯ ಸಂಸ್ಥಾಪಕ ಧೀರೂಭಾಯಿ ಜೀವನ ಚರಿತ್ರೆ ಬರೆದಿರುವಾತ ಇದನ್ನು ಉದ್ಧರಿಸಿದ್ದಾನೆ. ಪ್ರಾಯಶಃ ಧೀರೂಭಾಯಿ ಇವತ್ತು ಇದ್ದಿದ್ದರೆ "ನಾನು, ಯಾರು ಪ್ರಧಾನಿ ಆಗಬೇಕೆಂಬುದನ್ನು ನಿರ್ಧರಿಸುತ್ತೇನೆ, ನೀವಲ್ಲ" ಎಂದು ಹೇಳುತ್ತಿದ್ದನೇನೊ. ಅದೇನೇ ಇದ್ದರೂ ಧೀರೂಭಾಯಿಯ ಮಕ್ಕಳು ಈಗ ಆ ಕೆಲಸ ಮಾಡಲು ಹೊರಟಿದ್ದಾರೆ. ತಮ್ಮ ಊರಿನವರೇ ಆದ ನರೇಂದ್ರ ಮೋದಿಯನ್ನು ಪ್ರಧಾನಿಯಾಗಿಸಲು ಹೊರಟಿದ್ದಾರೆ; ಅವರ ಒಡೆತನದಲ್ಲಿರುವ ಟೆಲಿವಿಷನ್ ಚಾನೆಲ್‌ಗಳನ್ನು ನೋಡಿದರೆ ಸಾಕು, ಅದು ಗೊತ್ತಾಗುತ್ತದೆ.

ಚುನಾವಣೆಗಳಲ್ಲಿ ಕಾರ್ಪೊರೇಟ್ ಸಂಸ್ಥೆಗಳು ತಮಗೆ ಅನುಕೂಲವಾಗುವ ಪಕ್ಷಕ್ಕೆ ಬೆಂಬಲ ನೀಡುವುದು, ಸಾಕಷ್ಟು ದೊಡ್ಡ ಪ್ರಮಾಣದಲ್ಲಿ ಅದಕ್ಕೆ ಕಪ್ಪು, ಬಿಳುಪು ಹಣ ಒದಗಿಸುವುದು ಹೊಸದೇನಲ್ಲ. ಇದು ಎಲ್ಲ ಬಂಡವಾಳಶಾಹಿ ಪ್ರಜಾಪ್ರಭುತ್ವ ರಾಷ್ಟ್ರಗಳಲ್ಲೂ ನಡೆದದ್ದೆ. ಅಮೆರಿಕದಲ್ಲಿ ಕಾರ್ಪೊರೇಟ್ ವಲಯ ಮುಂದಿನ ರಾಷ್ಟ್ರಾಧ್ಯಕ್ಷ ಯಾರಾಗಬೇಕು ಎಂಬುದನ್ನು ನಿರ್ಧರಿಸುತ್ತದೆ. ಇದರಲ್ಲಿ ಮುಚ್ಚುಮರೆ ಏನಿಲ್ಲ. ಅಮೆರಿಕದ ವ್ಯವಸ್ಥೆಯಲ್ಲಿ ಕಾರ್ಪೊರೇಟ್ ಹಿಡಿತ ಎಷ್ಟು ಪ್ರಬಲವಾಗಿದೆಯೆಂದರೆ ಶಾಸಕರನ್ನೂ ಖರೀದಿಸಿ ಇರಿಸಿಕೊಂಡಿರುತ್ತಾರೆ. ರಾಜಕೀಯ ಪ್ರಭಾವ ಬೀರಲು ತಮ್ಮದೇ ಲಾಬಿಯನ್ನು ನಿರ್ಮಿಸಿಕೊಂಡಿರುತ್ತಾರೆ. ಹಾಗೆ ಲಾಬಿ ಮಾಡುವವರಿಗೆ ಸಂಬಳ ವಗೈರೆ ಸೌಲಭ್ಯಗಳನ್ನು ಕೊಡುತ್ತಾರೆ. ಅಂತೂ ಕಾರ್ಪೊರೇಟ್ ಬಂಡವಾಳ ಹಿತರಕ್ಷಣೆ



ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ





| | |
|---|---|
| ಬಿಡಿ ಸಂಚಿಕೆ | ರೂ. ೧೫/- |
| ವಾರ್ಷಿಕ ಚಂದಾ | ರೂ. ೨೦೦/- |
| ಮೂರು ವರ್ಷಕ್ಕೆ | ರೂ. ೪೫೦/- |



೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ ೦೮೨೪-೨೪೪೧೦೦೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು - ೫೭೫ ೦೦೧
✆ ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ ೦೮೨೧-೨೪೨೪೦೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ ೦೮೪೭೨-೨೨೪೩೦೨

ಅವರಿಗೆ ಮುಖ್ಯ. ನಮ್ಮಲ್ಲಿ ಅಷ್ಟು ಬಹಿರಂಗವಾಗಿಯಲ್ಲದೇ ಹೋದರೂ ನೀರಾ ರಾಡಿಯಾಗಳಿಗೆ ಕೊರತೆ ಏನಿಲ್ಲ. ಯಾವುದೇ ಪಕ್ಷ ಅಧಿಕಾರಕ್ಕೆ ಬರಲಿ, ಯುಪಿಎಯೋ, ಎನ್‌ಡಿಎಯೋ, ಅಮೆರಿಕದಲ್ಲಿ ಡೆಮಾಕ್ರಾಟರೋ, ರಿಪಬ್ಲಿಕನ್ನರೋ, ಬ್ರಿಟನ್ನಿನಲ್ಲಿ ಕನ್ಸರ್‌ವೇಟಿವ್‌ಗಳೋ, ಲೇಬರೈಟ್‌ಗಳೋ ಬಂಡವಾಳಶಾಹಿಗಳ ಹಿತರಕ್ಷಣೆಗೆ ಟೊಂಕ ಕಟ್ಟಿ ನಿಂತಿರುತ್ತವೆ. ಜನಪರವಾದ ಕ್ರಮಗಳನ್ನು ಅಷ್ಟೋ ಇಷ್ಟೋ ಮಾಡಿ, ಕಾರ್ಪೊರೇಟ್ ಬಂಡವಾಳಗಾರರಿಗೆ ನೋವಾಗದಂತೆ ನೋಡಿಕೊಳ್ಳುತ್ತಾರೆ.

ಈ ಕಾರ್ಪೊರೇಟ್ ಸಂಸ್ಥೆಗಳೂ ಕೂಡ ತಮಗೆ ಹತ್ತಿರ ಇರುವ ರಾಜಕೀಯ ಪಕ್ಷಗಳನ್ನು, ರಾಜಕಾರಣಿಗಳನ್ನು ಚೆನ್ನಾಗಿ ಪೋಷಿಸುತ್ತವೆ. ಅವರು ಅಧಿಕಾರದಲ್ಲಿ ಇರಲಿ ಇಲ್ಲದಿರಲಿ ಅವರಿಗೆ ಕೊರತೆಯಾಗದ ಹಾಗೆ ಹಣ ಒದಗಿಸುತ್ತವೆ. ಚುನಾವಣೆಗಳು ಬಂದಿತೆಂದರೆ ಈ ಬಂಡವಳಿಗರು ಎಲ್ಲರಿಗೂ ಒಳ್ಳೆಯವರೆ. ತಮ್ಮ ಪರವಾಗಿರುವ, ತಾವು ಬೆಂಬಲಿಸುವ ರಾಜಕೀಯ ಪಕ್ಷಗಳಿಗೆ, ಅಭ್ಯರ್ಥಿಗಳಿಗೆ ಉದಾರವಾಗಿ ದೇಣಿಗೆ ನೀಡುತ್ತಾರೆ. ಇತರರು ಯಾವುದಾದರೂ ಉಪಯೋಗಕ್ಕೆ ಬಂದಾರೆಂದು ಮುನ್ನೆಚ್ಚರಿಕೆ ಯಿಂದ ಯಥಾಶಕ್ತಿ ದೇಣಿಗೆ ಕೊಡುತ್ತಾರೆ. ಕಾನೂನಿನ ಮಿತಿಯನ್ನು ಈ ವಿಚಾರದಲ್ಲಿ ಅವರು ಕಟ್ಟುನಿಟ್ಟಾಗಿ ಪಾಲಿಸುತ್ತಾರೆ. ಇಲ್ಲದಿದ್ದರೆ ಹೇಗೂ ಕಪ್ಪು ಹಣದ ಥೈಲಿ ಇದ್ದೇ ಇರುತ್ತದೆ. ಇದು ನಮ್ಮ ದೇಶದಲ್ಲೊಂದರಲ್ಲೇ ಅಲ್ಲ, ಎಲ್ಲ ಬಂಡವಾಳಶಾಹಿ ದೇಶಗಳಲ್ಲೂ ನಡೆಯುವಂಥದ್ದೆ. ಕಾರ್ಪೊರೇಟ್‌ಗಳ ಮಟ್ಟದ್ದೆ. ಇದೂ ಕೂಡ ಲಾಭ ತರುವ ಬಂಡವಾಳ ಹೂಡಿಕೆಯೆ.

ಸ್ವಾತಂತ್ರ್ಯ ಹೋರಾಟದ ಕಾಲದಲ್ಲಿಯೇ ಟಾಟಾ, ಬಿರ್ಲಾರಂಥ ಬಂಡವಳಿಗರು ಕಾಂಗ್ರೆಸ್ಸಿಗೆ ಎಲ್ಲ ರೀತಿಯ ಬೆಂಬಲ ನೀಡುತ್ತಿದ್ದರು. ಅದು ಎಷ್ಟು ಬೇಕೋ ಅಷ್ಟು ಮಾತ್ರ ಆಗಿತ್ತು. ಬ್ರಿಟಿಷ್ ಸಾಮ್ರಾಜ್ಯಶಾಹಿಗಳನ್ನು ಎದುರುಹಾಕಿಕೊಳ್ಳದೆ ಇರುತ್ತಿದ್ದರು. ಸ್ವಾತಂತ್ರ್ಯಾನಂತರ ಕಾಂಗ್ರೆಸ್ಸಿನ ಬೆಂಬಲಕ್ಕೆ ನಿಂತರು. ಈಗ ಪರಿಸ್ಥಿತಿಯೇ ಬೇರೆ. ರಾಜಕೀಯ ಪಕ್ಷಗಳು ದೇಶೀಯವಾಗಿ, ಪ್ರಾದೇಶಿಕವಾಗಿ ಹಲವು ಶಾಖೆಗಳಾಗಿ ಬೆಳೆದಿವೆ. ಹಾಗೆಯೇ ದೇಸೀ ಬಂಡವಳಿಗರೂ ಯದ್ವಾತದ್ವಾ ಬೆಳೆದಿದ್ದಾರೆ. ಇದರ ಜೊತೆಗೆ ವಿದೇಶೀ ಬಂಡವಾಳವೂ ಸೇರಿದೆ. ಹಾಗಾಗಿ ಚುನಾವಣೆಗಳಲ್ಲಿ ತಮಗೆ ಹಿತವಾಗಿರುವವರನ್ನು ಬೆಂಬಲಿಸಲು ಅವರು ಸಿದ್ಧವಾಗಿದ್ದಾರೆ. ಹಾಗಾಗಿ, ಚುನಾವಣೆಗಳಲ್ಲಿ ಮತದಾರರು ಬರಬರುತ್ತ ನಿಮಿತ್ತ ಮಾತ್ರ ಆಗುತ್ತಿದ್ದಾರೆ. ಆಯ್ಕೆಯೇ ಇಲ್ಲವೇನೋ ಎನ್ನುವಂತಾಗಿದೆ ಪರಿಸ್ಥಿತಿ. ಕಾರ್ಪೊರೇಟ್ ವಲಯ ಮಾತ್ರ ಪರಿಸ್ಥಿತಿಯ ಪೂರ್ಣ ಲಾಭ ಪಡೆದುಕೊಳ್ಳುತ್ತಿದೆ. ಏಕೆಂದರೆ ಯಾವುದೇ ಗುಂಪು ಅಧಿಕಾರಕ್ಕೆ ಬಂದರೂ ಅದನ್ನು ತಮ್ಮ ಪರವಾಗಿರುವಂತೆ ಒಲಿಸಿ ಕೊಳ್ಳುವ ಜಾಣತನ ಅವರಿಗಿದೆ. ಚುನಾವಣಾ ಆಯೋಗ ಏನೇ ನಿಯಮ ತಂದು ಒದ್ದಾಡಿದರೂ ಅಕ್ರಮವನ್ನು ತಡೆಯುವುದು ಮಾತ್ರ ಸಾಧ್ಯವಾಗದ ಮಾತು. ಸದ್ಯ ಈ ಚುನಾವಣೆಗಳಲ್ಲಿ ಮತದಾರರಿಗೆ ತಮ್ಮ ಕ್ಷೇತ್ರದಲ್ಲಿರುವ ಅಭ್ಯರ್ಥಿಗಳ ಪೈಕಿ ಯಾರೂ ಇಷ್ಟವಾಗದಿದ್ದರೆ ನಕಾರಾತ್ಮಕ ಬಟನ್ ಒತ್ತಲು ಅವಕಾಶವಿದೆ. ಇದನ್ನು ಉಪಯೋಗಿಸಿಕೊಳ್ಳುವವರು ಎಷ್ಟು ಮಂದಿ ಇರುತ್ತಾರೊ ಕಾದು ನೋಡಬೇಕು. ಏನಿದ್ದರೂ ಹೆಂಡ, ಹಣ ಬಲವೇ ಮತಬಲ ವಾಗಿರುವುದು ವಿಷಾದನೀಯ. ಹಾಗಿರುವಾಗ ಎಂಥ ಸರಕಾರ ಬಂದರೂ, ದುಷ್ಟ ಸರಕಾರ ಹುಲಿಗಿಂತಲೂ ಕ್ರೂರ. ಆಳುವ ವರ್ಗ ಸಿಂಹದಂತೆ ಕ್ರೂರಿ, ಮೊಲದಂತೆ ಪುಕ್ಕಲು, ನರಿಯಂತೆ ಕುತಂತ್ರಿ! ಎಲ್ಲೋ ಓದಿದ ನೆನಪು. ಇದು ಎಷ್ಟು ಸತ್ಯ!

*ಈ ತಿಂಗಳು (೩ನೇ ಪುಟದಿಂದ)*

ಎಲ್ಲ ಭ್ರಷ್ಟಾಚಾರ ಪ್ರಕರಣಗಳನ್ನೂ ಭಾಜಪ ನುಂಗಿ ಅರಗಿಸಿಕೊಂಡಿದೆ ಎಂದು ಕಾಣುತ್ತದೆ. ಬಳ್ಳಾರಿ ಶ್ರೀರಾಮುಲುಗೆ ಭಾಜಪ ಟಿಕೇಟು ಖಚಿತ. ಅವರನ್ನೇ ನಂಬಿ ಹೊಸ ಪಕ್ಷ ಕಟ್ಟಲು ಹೊರಟವರ ಗತಿ ಏನೋ! ಅದಿರಲಿ, ಬಳ್ಳಾರಿಯ ಗಣಿ ಧಣಿಗಳಾದ ರೆಡ್ಡಿ ಸಹೋದರರನ್ನು, ಶ್ರೀರಾಮುಲುಅನ್ನು ಸಾಕಿ ಬೆಳೆಸಿದವರೇ ಭಾಜಪ ನಾಯಕಿ ಸುಷ್ಮಾ ಸ್ವರಾಜ್. ಈಕೆಯ ಮೇಲೆ ಅವರು ತೋರಿರುವ ಲಕ್ಷ್ಮೀಕಟಾಕ್ಷಕ್ಕೆ ಲೆಕ್ಕವಿಲ್ಲ. ಪ್ರತಿವರ್ಷ ಈಕೆ ವರಮಹಾಲಕ್ಷ್ಮಿ ವ್ರತವನ್ನು ಆಚರಿಸುತ್ತಿದ್ದುದು ರೆಡ್ಡಿ ಸಹೋದರರ ಬಂಗಲೆಯಲ್ಲೆ. ಆಗ ಯಾವ ಅಳುಕೂ ಇಲ್ಲದೆ 'ಪ್ರಸಾದ' ಸ್ವೀಕರಿಸಿದ ಸುಷ್ಮಾ ಸ್ವರಾಜ್ ಈಗ ಪವಿತ್ರಾತ್ಮರಾಗಿದ್ದಾರೆ. ಶ್ರೀರಾಮುಲುಗೆ ಟಿಕೇಟ್ ನೀಡಿಕೆಗೆ ಅಡ್ಡಗಾಲು ಹಾಕಿದ್ದಾರೆ. ಇದನ್ನೇ ಚುನಾವಣೆಯ ಸ್ವಾರಸ್ಯ ಎನ್ನುವುದು. ಜೇಟ್ಲಿ–ಸುಷ್ಮಾ ಜಟಾಪಟಿ ನಡೆದಿದೆ. ಇಬ್ಬರೂ ಪ್ರಧಾನಿ ಪಟ್ಟದ ಆಕಾಂಕ್ಷಿಗಳಾಗಿದ್ದವರು. ಕೊನೆಗೂ ಮೋದಿ ಕೈ ಮೇಲಾಗಿದೆ ಭಾಜಪದಲ್ಲಿ. ವಾರಾಣಸಿ ಸೀಟು ದೊರಕಿಸಿಕೊಂಡಿದ್ದೇ ಅದಕ್ಕೆ ಸಾಕ್ಷಿ. ಪಾಪ, ಪ್ರಧಾನಿ ಅಭ್ಯರ್ಥಿ ಎರಡು ಕಡೆಗಳಲ್ಲಿ ಸ್ಪರ್ಧೆಗಿಳಿದಿದ್ದಾರೆ. ಏಕೊ ?

ಕಾಂಗ್ರೆಸ್ಸಿನಲ್ಲಿ ಮೊಯ್ಲಿ, ಖರ್ಗೆ, ಧರ್ಮಸಿಂಗ್, ಮುನಿಯಪ್ಪ, ಪೂಜಾರಿ ಎಲ್ಲ ಹಳೇ ಮುಖಗಳೆ. ಅಂದಹಾಗೆ ಮೊಯ್ಲಿಗೆ ಟಿಕೇಟು ಲಭಿಸಿದ್ದು ಸಾಕಷ್ಟು ಮೀನಾಮೇಷ ಎಣಿಸಿದ ಮೇಲೆ. ಅಂಬಾನಿಗಳ ನಂಟು, ಇಂಧನಾನಿಲ ಬೆಲೆ ನಿಷ್ಕರ್ಷೆ ಅಪವಾದ ಅವರ ಮೇಲಿದೆ. ಅಂಬಾನಿಗಳನ್ನು ಎದುರುಹಾಕಿಕೊಳ್ಳಲು ಕಾಂಗ್ರೆಸ್ ಹೈಕಮಾಂಡಿಗೆ ಧೈರ್ಯ ಎಲ್ಲಿ ಬಂದೀತು! ಅಂಬಾನಿಗಳು ಈ ಸಲ ಮೋದಿಯನ್ನು ಬೆಂಬಲಿಸುತ್ತಿರುವುದು ರಹಸ್ಯವೇನಲ್ಲ. ಈ ಕಾರ್ಪೊರೇಟ್ ಪ್ರಭೃತಿಗಳ ಒಡೆತನದಲ್ಲಿರುವ ಟಿವಿ ಚಾನೆಲ್‌ಗಳನ್ನು ವೀಕ್ಷಿಸಿದರೆ ಅದು ಗೊತ್ತಾಗುತ್ತದೆ. ಏನೇ ಆದರೂ 'ನಮೋ ನಮ್ಮವರು' ಎಂಬುದೇ ಅಂಬಾನಿಗಳ ಲೆಕ್ಕಾಚಾರ. ಐವತ್ತು ವರ್ಷಗಳಲ್ಲಿ ಐದುನೂರು ರೂಪಾಯಿ ಬಂಡವಾಳದಿಂದ ಈಗ ಲಕ್ಷ ಲಕ್ಷ ಕೋಟಿ ಬಂಡವಾಳದ ಅತ್ಯಂತ ಶ್ರೀಮಂತರು ಎನಿಸಿಕೊಂಡಿರುವ ಅಂಬಾನಿಗಳು ನಡೆಸಿರುವ ವ್ಯವಹಾರಗಳ ಕಥೆ ಬೇರೆ. ಇಲ್ಲಿ ಅದು ಬೇಕಿಲ್ಲ. ಆದರೆ ಕಾರ್ಪೊರೇಟ್ ವಲಯದ ಒಲವು ಯಾವ ಕಡೆಗಿದೆ ಎನ್ನುವುದು ಈಗಾಗಲೆ ಗೊತ್ತಾಗಿದೆ. ಕಾಂಗ್ರೆಸ್, ಭಾಜಪಗಳನ್ನು ಬಿಟ್ಟರೆ ಬೇರೆ ಆಯ್ಕೆಗೆ ಅವಕಾಶವೇ ಇಲ್ಲದಾಗಿರುವ ಇಂದು ಮೂರನೇ ರಂಗ ಎನ್ನುವುದು ಮೇಲೇಳದೇ ಇರುವುದು ವಿಷಾದನೀಯ. ಇದುವರೆಗೆ ಕಾಂಗ್ರೆಸ್ಸಿನಲ್ಲೇ ಇದ್ದು ಎಲ್ಲ ಅನುಕೂಲಗಳನ್ನೂ ಅಧಿಕಾರವನ್ನೂ ಅನುಭವಿಸಿದ ಬೆಂಗಳೂರಿನ ಜಾಫರ್ ಷರೀಫ್ ಸಾಹೇಬರು ಜೆಡಿಎಸ್ ಬಾಗಿಲಿಗೆ ಬಂದಿರುವುದು ತಾಜಾ ಸಮಾಚಾರ. ಹೇಗಿದೆ ನೋಡಿ ಪಕ್ಷದಲ್ಲಿ ನಿಷ್ಠೆ ಎನ್ನುವುದು! ಅಂತೂ ಇಂತೂ ಈ ಸಲದ ಚುನಾವಣೆಗಳು ಅತ್ಯಂತ ಕುತೂಹಲಕಾರಿ. ಯಾರೇ ಬಂದರೂ ರಾಗಿ ಬೀಸೋದು ತಪ್ಪೋದಿಲ್ಲ. ಇದು ನಿಜ ತಾನೆ.

* * *

ಕಾರ್ಪೊರೇಟ್ ವಲಯದಲ್ಲಿ ಅಂಬಾನಿಗಳದ್ದೇ ಕಾರುಬಾರು. ತನ್ನವರೇ ಆದ ನರೇಂದ್ರ ಮೋದಿಯವರನ್ನು ಪ್ರಧಾನಿ ಪೀಠಕ್ಕೆ ತರಲು ಅವರು ಹೊರಟಿದ್ದಾರೆ ಎಂದು ವದಂತಿ. ಹಾಗಂತ ಅವರೇನೂ ಕಾಂಗ್ರೆಸ್ಸನ್ನೂ ಅಲಕ್ಷಿಸಿಲ್ಲ. ಹೊಸದಾಗಿ ರಾಜಕೀಯ ರಂಗ ಪ್ರವೇಶಿಸಿರುವ ಆಮ್ ಆದ್ಮಿ ಪಾರ್ಟಿ ನಾಯಕ ಅರವಿಂದ ಕೇಜ್ರಿವಾಲ್ ಕಾಂಗ್ರೆಸ್ ಮತ್ತು ಭಾಜಪಗಳು ಅಂಬಾನಿಗಳ ಜೇಬಿನಲ್ಲಿವೆ ಎಂದು ನೇರವಾಗಿ ಆಪಾದಿಸಿದ್ದಾರೆ. ಅಂಬಾನಿ ಕುಟುಂಬದವರು ಸ್ಥಾಪಿಸಿರುವ 'ರಿಲಯನ್ಸ್ ಕಂಪೆನಿ' ಪೆಟ್ರೋ ಕೆಮಿಕಲ್ಸ್, ಇಂಧನಾನಿಲದಿಂದ ಹಿಡಿದು ತರಕಾರಿ ಮಾರಾಟ ಮಾಡುವವರೆಗೆ ಎಲ್ಲ ಕ್ಷೇತ್ರಗಳನ್ನೂ ಆವರಿಸಿಕೊಂಡಿದೆ ಭಾರತಾದ್ಯಂತ. ಯಾವುದೇ ದೊಡ್ಡ ನಗರಕ್ಕೆ ಹೋದರೂ ರಿಲಯನ್ಸ್ ಬೋರ್ಡುಗಳು ಕಣ್ಣಿಗೆ ಬಡಿಯುತ್ತವೆ. ಅಲ್ಲದೆ ಈಗ ಅಂಬಾನಿ ಸಹೋದರರು ಭಾರತದಲ್ಲೇ ಅತ್ಯಂತ ಶ್ರೀಮಂತರು ಎನಿಸಿಕೊಂಡಿದ್ದಾರೆ. ಕಳೆದ ಐವತ್ತು ಚಿಲ್ಲರೆ ವರ್ಷಗಳಲ್ಲಿ ಇವರ ಬೆಳವಣಿಗೆ ಅಗಾಧ, ಆಶ್ಚರ್ಯಕರ. ಒಂದು ಬಗೆಯಲ್ಲಿ ದಿಢೀರ್ ಶ್ರೀಮಂತರಾದವರು. 'ರಿಲಯನ್ಸ್ ಕಂಪೆನಿ'ಯ ಸ್ಥಾಪಕ ಧೀರೂಭಾಯಿ ಅಂಬಾನಿಯ ಏಳಿಗೆಯ ಕತೆಯ ಒಂದು ಕಿರುನೋಟ ಇಲ್ಲಿದೆ.

ಗುಜರಾತಿ ಸೌರಾಷ್ಟ್ರ ಭಾಗದ ಗ್ರಾಮವೊಂದರ ಶಾಲಾಮಾಸ್ತರರ ಮಗ ಧೀರೂಭಾಯಿ, ಶಾಲೆಯಲ್ಲಿ ಕಲಿಯುತ್ತಿರುವಾಗಲೇ ಊರು ಬಿಟ್ಟು ಮಧ್ಯಪ್ರಾಚ್ಯದಲ್ಲಿರುವ ಏಡನ್‌ಗೆ ಹೋಗಿ ಸೋದರನ ಜೊತೆಗೂಡಿ ಕೆಲಸ ಮಾಡತೊಡಗಿದ. ಆಗಲೇ ಈತನಿಗೆ ವ್ಯಾಪಾರೀ ಬುದ್ಧಿ. ಏಡನ್‌ನ ಬೆಳ್ಳಿ ನಾಣ್ಯ ರಿಯಾಲ್ ಕರಗಿಸಿ ಬೆಳ್ಳಿಯನ್ನು ಇಂಗ್ಲೆಂಡಿನಲ್ಲಿ ಮಾರಾಟ ಮಾಡುತ್ತಿದ್ದ. ಎಂಟು ವರ್ಷ ಇದ್ದು ಇಂಡಿಯಾಗೆ ವಾಪಸ್ಸು ಬಂದಾಗ ಕೈಲಿದ್ದುದು ರೂ. ೫೦೦. ಆಗಲೇ ಬಂಡವಾಳ ಬಂಧು ಓರ್ವನ ಜೊತೆಗೂಡಿ ನೂಲು, ಸಂಬಾರ ಪದಾರ್ಥಗಳ ವ್ಯಾಪಾರ ಪ್ರಾರಂಭಿಸಿದ. ಅಹ್ಮದಾಬಾದಿನಲ್ಲಿ ಜವಳಿ ಗಿರಣಿಯೊಂದನ್ನು ಖರೀದಿಸಿದ, ಕೆಲವೇ ತಿಂಗಳಲ್ಲಿ. ಅಲ್ಲಿಂದ ಹತ್ತು ವರ್ಷಗಳಲ್ಲಿ ರಿಲಯನ್ಸ್ ವಹಿವಾಟು ರೂ. ೭೦ ಕೋಟಿಗೇರಿತು. ೧೯೯೨ರಲ್ಲಿ ಅದು ೩೦೦೦ ಕೋಟಿ ರೂಗಳಿಗೆ, ೨೦೦೦ದ ಹೊತ್ತಿಗೆ ೬೦,೦೦೦ ಕೋಟಿಗೆ ಏರಿತು. ಈಗ ರಿಲಯನ್ಸ್ ಕಂಪೆನಿ ಹೆಚ್ಚುಕಡಿಮೆ ಒಂದು ಲಕ್ಷ ಕೋಟಿಗೂ ಮೀರಿದ ಕಾರ್ಪೊರೇಟ್ ಸಾಮ್ರಾಜ್ಯವಾಗಿದೆ. ಇಷ್ಟೆಲ್ಲ ಹೇಗೆ

ಸಾಧ್ಯವಾಯಿತು ? ಅದು ನಿಗೂಢವೇನಲ್ಲ. ರಾಜಕೀಯ ನಂಟು, ಲೈಸನ್ಸ್ ಪರ್ಮಿಟ್ ರಾಜ್ಯದ ಅವ್ಯವಹಾರ. ಅಂಬಾನಿಗೂ ಲಾಭ, ಮೊಯ್ಲಿಗೂ ಲಾಭ !

✶ ✶ ✶

ಮಾಧ್ಯಮಗಳ ಕಾರ್ಯವೈಖರಿಯನ್ನು ಕಟುವಾಗಿ ಟೀಕಿಸಿದ ಅರವಿಂದ ಕೇಜ್ರಿವಾಲ್ ಬಗ್ಗೆ ತೀವ್ರ ಪ್ರತಿಕ್ರಿಯೆ ವ್ಯಕ್ತವಾಗಿದೆ. ಪ್ರೆಸ್ ಕೌನ್ಸಿಲ್‌ನ ಅಧ್ಯಕ್ಷ ಮಾರ್ಕಂಡೇಯ ಕಟ್ಜು ಸಹ ಕೇಜ್ರಿವಾಲ್‌ಗೆ 'ನೋಟೀಸ್' ಕೊಡುವುದಾಗಿ ತಿಳಿಸಿದ್ದರು. ಕೇಜ್ರಿವಾಲ್ ನುಡಿದದ್ದನ್ನೆಲ್ಲಾ ಅಂತಿಮ ಜ್ಞಾನವೆಂದು ಯಾರೂ ಸ್ವೀಕರಿಸುವುದಿಲ್ಲ, ಆದರೆ ಮಾಧ್ಯಮಗಳನ್ನು ಕುರಿತ ಅವರ ಟೀಕೆಯನ್ನು ಬೇಕೆಂದೇ ಅಪಾರ್ಥಕ್ಕೀಡುಮಾಡಿ ಕೆಲವು ವಲಯಗಳಲ್ಲಿ ಅವರಿಗೆ ಛೀಮಾರಿ ಹಾಕಲಾಗಿದೆ. ಆತನ ಟೀಕೆಯು ಅರ್ಥವಾಗದ ಭಾಷೆಯಲ್ಲೇನೂ ಇರಲಿಲ್ಲ. ಕೆಲವು ಮಾಧ್ಯಮಗಳು ತಮ್ಮ ಮೂಲ ಲಕ್ಷಣವಾಗಿರಬೇಕಾದ ವಸ್ತುನಿಷ್ಠತೆಯನ್ನು ಗಾಳಿಗೆ ತೂರಿ ಕೆಲವು ರಾಜಕೀಯ ವ್ಯಕ್ತಿಗಳ ಕೈಗೊಂಬೆಗಳಂತೆ ವರ್ತಿಸುತ್ತಿವೆ, ಕೆಲವು ನಾಯಕರಿಗೆ ಪರಾಕ್ ಹೇಳುವ ಸಂಭ್ರಮದಲ್ಲಿ ಜನಪರವಾದ ತತ್ವಗಳನ್ನು ಮೂಲೆಗುಂಪಾಗಿಸಲಾಗಿದೆ, ಇದು ಕ್ಷಮಾರ್ಹವಲ್ಲ, ಬದಲಿಗೆ ಖಂಡನಾರ್ಹ ಎಂಬುದು ಅವರ ಹೇಳಿಕೆಯ ಸಾರ. ಇದರಲ್ಲಿ ಹೊಸದೇನೂ ಇಲ್ಲ, ಬಹಳ ಕಾಲದಿಂದ ಮಾಧ್ಯಮಗಳ ಮತ್ತು ಅವುಗಳ ವಕ್ತಾರರ ಅವ್ಯವಹಾರಗಳು ಬಯಲಿಗೆ ಬರುತ್ತಲೇ ಇವೆ. ಹಲವು ಪತ್ರಿಕೆಗಳ ಮುಖಪುಟದ ವರದಿಗಳಿಗೆ ಸಹ ಹಣ ತೆರುವವರಿದ್ದಾರೆಂಬ ಆಕ್ಷೇಪ ಕೆಲವು ವರ್ಷಗಳಿಂದ ಕೇಳಿಬಂದಿದೆ ಮತ್ತು ಅದಕ್ಕೆ ಪುರಾವೆಗಳೂ ದೊರೆತಿವೆ. ಪತ್ರಿಕಾಧರ್ಮದ ಅಥವಾ ಮಾಧ್ಯಮ ಧರ್ಮದ ಮೂಲಭೂತ ಅಂಶಗಳನ್ನು ಪಾಲಿಸದವರಿಗೆ ತಾವು ಬುದ್ಧಿ ಕಲಿಸುವುದಾಗಿ, ಕಾರಾಗೃಹಕ್ಕೆ ತಳ್ಳುವುದಾಗಿ, ಕೇಜ್ರಿವಾಲ್ ಹೇಳಿದ್ದಾರೆ. ಅದರರ್ಥ ದೇಶದ ಎಲ್ಲ ಮಾಧ್ಯಮ ಉದ್ಯೋಗಿಗಳನ್ನು ಸದೆಬಡಿಯುವುದೆಂದಲ್ಲ, ಮಾಧ್ಯಮಗಳ ಮಾಲೀಕರುಗಳಿಗೆ ಎಚ್ಚರಿಕೆಯ ಮಾತದು, ಅಷ್ಟೆ. ನಮ್ಮ ದೇಶದ ಜನರ ಸ್ವಾತಂತ್ರ್ಯ ಮತ್ತು ಏಳಿಗೆಗೆ ಸಾಧನವಾಗಬೇಕಾದ ನೀತಿಗಳನ್ನು ಪ್ರತಿಪಾದಿಸದಿರುವ ಮಾಧ್ಯಮಗಳನ್ನು ಟೀಕಿಸಬಾರದೆ ? ಎಲ್ಲವನ್ನೂ ಮೋದಿ ಇಲ್ಲವೆ ಒಬಾಮ ಕಣ್ಣುಗಳಿಂದಲೇ ನೋಡುವ ಮಾಧ್ಯಮಗಳಿಗೆ ಧಿಕ್ಕಾರ ಹೇಳುವುದು ಜನತೆಯ ಹಕ್ಕು. ಬೇರೊಂದು ಪ್ರಸಂಗವನ್ನು ಗಮನಿಸೋಣ : ರಷ್ಯದ ಸೇನೆಯು ಕ್ರಿಮಿಯಾದ ಮೇಲೆ ಆಕ್ರಮಣ ನಡೆಸಿ ಯುಕ್ರೇನ್ ಛಿದ್ರಗೊಳ್ಳಲು ಕಾರಣವಾಗುತ್ತಿದೆ ಎಂದು ಒಬಾಮ ಮತ್ತು ಆತನ ವಿದೇಶಾಂಗ ಸಚಿವ ಗುಲ್ಲೆಬ್ಬಿಸಿದ್ದಾರೆ. ಈ ವಿಷಯವನ್ನು ವರದಿ ಮಾಡುವಾಗ ಮತ್ತು ವಿಶ್ಲೇಷಿಸುವಾಗ ಭಾರತದ ಮಾಧ್ಯಮಗಳಿಂದ ನಿರೀಕ್ಷಿಸಬೇಕಾದ್ದೇನು ? ಕೇವಲ ಒಬಾಮ ಮತ್ತು ನ್ಯೂಯಾರ್ಕ್ ಟೈಮ್ಸ್ ಏನು ಹೇಳುತ್ತಾರೋ ಅದನ್ನು ಅಕ್ಷರಶಃ ಪುಷ್ಟೀಕರಿಸುವುದನ್ನೆ ? ಅಥವಾ ಅಸೋಸಿಯೇಟೆಡ್ ಪ್ರೆಸ್ ಹೊರಹಾಕುವ ತಥಾಕಥಿತ ವಿಶ್ಲೇಷಣೆ ಮತ್ತು 'ಕಾಣ್ಕೆ'ಗಳನ್ನು ಯಾವ ಸಂಕೋಚವೂ ಇಲ್ಲದೆ ಪ್ರಕಟಿಸುವುದನ್ನೆ ? ಅಂದರೆ, ಮಾಧ್ಯಮಗಳ ಒಂದು ವಿಭಾಗವು ತನ್ನ 'ಆತ್ಮ'ವನ್ನು ಒಬಾಮ ಬಣಕ್ಕೆ ಮಾರಿಕೊಂಡಿದೆ. ಅಂತೆಯೇ ನಮ್ಮ ದೇಶದ ಮಾಧ್ಯಮಗಳ ಒಂದು ದೊಡ್ಡ ವಿಭಾಗವು ತನ್ನ ಆತ್ಮ ಮತ್ತು ದೇಹವನ್ನು ಅಂಬಾನಿ–ಮೋದಿ–ಮೊಯ್ಲಿ ಅಂಥವರಿಗೆ ಮಾರಿಕೊಂಡಿದೆ. ಜನರ ಸಮಸ್ಯೆ ಅವಕ್ಕೆ ಪ್ರಸ್ತುತವಲ್ಲ; ಅದು ಮಾಧ್ಯಮ ಧರ್ಮಕ್ಕೆ ಯೋಗ್ಯವಲ್ಲ. ಕೇಜ್ರಿವಾಲ್ ಹೇಳಿರುವುದರಲ್ಲಿ ಅಧಿಕ ಪ್ರಸಂಗ ಎನ್ನಬಹುದಾದ್ದೇನೂ ಇಲ್ಲ. ಬೇಕೆಂದೇ 'ಕುಂಬಳಕಾಯಿ ಕಳ್ಳರು' ಹೆಗಲು ಮುಟ್ಟಿ ನೋಡಿಕೊಳ್ಳುತ್ತಿದ್ದಾರೆ. ಜನರು ಮಾಧ್ಯಮಗಳ ಕುತಂತ್ರವನ್ನು ಅರ್ಥಮಾಡಿಕೊಳ್ಳಬೇಕಾದ ಅವಶ್ಯಕತೆ ಹಿಂದೆಂದಿಗಿಂತಲೂ ಇಂದು ಹೆಚ್ಚಾಗಿದೆ. ದಿನಂಪ್ರತಿ ನರೇಂದ್ರ ಮೋದಿ ಪಕ್ಷದ ಪಾರ್ಲಿಮೆಂಟ್ ಸ್ಥಾನಗಳು ಒಂದಲ್ಲ ಒಂದು ಹೊಸ ಸರ್ವೇಕ್ಷಣದಿಂದ ಹೆಚ್ಚುತ್ತಲೇ ಇವೆ. ಅದರ ಮರ್ಮವಾದರೂ ಏನು ? ಸರ್ವೇಕ್ಷಣಗಳ ವಿಶ್ಲೇಷಕರನ್ನು ನಂಬುವುದಾದರೆ ಚುನಾವಣೆಯನ್ನು ರದ್ದುಗೊಳಿಸಿ ಒಂದಷ್ಟು ಕೋಟಿ ರೂಪಾಯಿಗಳ ವೆಚ್ಚವನ್ನು ನಿಲ್ಲಿಸಿ ಮೋದಿಗೆ ಮುನ್ನೂರೋ ನಾಲ್ಕು ನೂರೋ ಸ್ಥಾನಗಳನ್ನು ಕೊಟ್ಟು ಹಾಯಾಗಿರಬಹುದು. ಆದರೆ ಜನರ ತೀರ್ಮಾನವು ಸರ್ವೇಕ್ಷಣಗಳ ತೀರ್ಮಾನದಂತೆಯೇ ಇರಬೇಕಾಗಿಲ್ಲವಲ್ಲ !

✶ ✶ ✶

"ವಂಶಪಾರಂಪರ್ಯವಾಗಿ ಆಡಳಿತದ ಸೂತ್ರವನ್ನು ತಮ್ಮ ಏಕಸ್ವಾಮ್ಯದಲ್ಲಿ ಇರಿಸಿಕೊಂಡಿದ್ದಾರೆ, ಇದು ಕಾಂಗ್ರೆಸ್‌ನ ಬಳುವಳಿ" ಎಂದು ಹೇಳುತ್ತಿದ್ದ ಕಾಲವೊಂದಿತ್ತು. ಈಗ ಅದು ಅನೇಕ ಪಕ್ಷಗಳ ನಾಯಕರ ಪದ್ಧತಿಯಾಗಿದೆ. ಹಾರ್ವರ್ಡ್‌ನಲ್ಲಿ ಕಾನೂನು ಪರಿಣತಿ ಪಡೆದ ಪಿ. ಚಿದಂಬರಂ ಸಹ ಅದೇ ಚೆಟ್ಟಿಯಾರ್ ಲೆಕ್ಕಾಚಾರದಲ್ಲಿದ್ದಾರೆ. ತಾನು ಜಯಲಲಿತಾ ಇಲ್ಲವೆ ಕರುಣಾನಿಧಿ ಆಸರೆ ಇಲ್ಲದೆ ಗೆಲ್ಲುವುದು ಅಸಾಧ್ಯವೆಂದು ತಿಳಿದ ಈತ ಲೋಕಸಭಾ ಚುನಾವಣೆಯಿಂದ ಹಿಂದೆ ಸರಿಯುತ್ತಾರಂತೆ, ರಾಜ್ಯಸಭೆಗೆ ಅವರನ್ನು ನಾಮಕರಣ ಮಾಡಬೇಕಂತೆ, ಅವರ ಮಗ ಕಾರ್ತಿಗೆ ಲೋಕಸಭಾ ಟಿಕೇಟ್ ಕೊಡಬೇಕಂತೆ. ಸರಿ, ಕೊಟ್ಟಾಯಿತು. ಇಂತಹ ಪ್ರಚಂಡಬುದ್ಧಿಯ ಪಾತಕಿಗಳು ನಮ್ಮ ದೇಶದ ಆಳುವ ವರ್ಗದ ಬೆನ್ನೆಲುಬು. ಹಾಗಿರುವಾಗ ದೇಶವು ಕುಸಿಯದೆ ಉಳಿಯಲು ಸಾಧ್ಯವೆ ! ಇನ್ನು ಮುಂದೆ ಚಿದಂಬರಂ ಗಾಂಧೀಜಿಯಂತೆ "ಸೇವೆ" ಮಾಡುತ್ತಾರಂತೆ ! ದೇವೇಗೌಡ, ಮುಲಾಯಂ ಸಿಂಗ್ ಯಾದವ್, ಲಾಲೂ ಪ್ರಸಾದ್ ಯಾದವ್, ಪ್ರಮೋದ ಮಹಾಜನ್, ಬಾಳ ಠಾಕ್ರೆ, ಜಾಫರ್ ಷರೀಫ್, ಹೀಗೆ ಎಷ್ಟು ಹೆಸರುಗಳು ಬೇಕು ? ಎಲ್ಲಾ ವಂಶೋದ್ಧಾರಕರೇ, ಅಂದರೆ ಶರದ್ ಪವಾರ್‌ರಂತೆ ತಮ್ಮ ಕುಡಿಗಳನ್ನು ಮುನ್ನಡೆಸುವವರೇ. ನಮ್ಮದು 'ಅತಿದೊಡ್ಡ ಪ್ರಜಾಪ್ರಭುತ್ವ' ಮತ್ತು ಅದರಲ್ಲಿ ಪ್ರಭುತ್ವವು ಒಂದು ಕಡೆ ಅಂಬಾನಿ ಮುಂತಾದವರದು, ಇನ್ನೊಂದು ಕಡೆ ಕೆಲವು ಕುಟುಂಬಗಳ ಸ್ವತ್ತು. ಆದರೆ ಇವರೆಲ್ಲಾ ರಾಜಕೀಯ ನೀತಿಯ ಪಾಠಗಳನ್ನು ಗಟ್ಟಿ ಹೊಡೆದು ಉಚ್ಚರಿಸುತ್ತಾರೆ : ಸುಷ್ಮಾ ಸ್ವರಾಜ್ ಅವರು ಶ್ರೀರಾಮುಲು ಬಗ್ಗೆ ಉದ್ಗಾರವೆತ್ತುತ್ತಿರುವಂತೆ. ಮಹಾಲಕ್ಷ್ಮಿ ವ್ರತಕ್ಕೆ ಬಳ್ಳಾರಿಗೆ ದಯಮಾಡಿಸಿ ಪೂಜೆಯ ನಂತರ ಸ್ವರಾಜ್ ಅವರು ಕೋಟಿ ಗಂಟು ತೆಗೆದುಕೊಂಡು ಹೋಗುವಾಗ ಶ್ರೀರಾಮುಲು ಸಭ್ಯನಾಗಿದ್ದ; ಈಗ ಆತನನ್ನು ಮುಟ್ಟಿಕೊಳ್ಳಲು ಇವರಿಗೆ ಅಂಜಿಕೆ. ಸುಷ್ಮಾ ಅವರು ಒಂದು ಕಾಲದಲ್ಲಿ ಲೋಹಿಯಾ ಸಮಾಜವಾದವನ್ನು ಪುರಸ್ಕರಿಸುತ್ತಿದ್ದರಂತೆ, ಅದರಿಂದೇನಾದರೂ ಭ್ರಷ್ಟರ ಕಪ್ಪುಹಣದ ಬಗ್ಗೆ ಔದಾಸೀನ್ಯ ಬಂದಿದೆಯೋ ಏನೊ ! ಅವರಿಗೆ ಪ್ರಧಾನಿ ಪಟ್ಟ ಸಿಗುವುದಿಲ್ಲವೆಂದು ಹಲವು 'ಪ್ರಗತಿಪರರು' ನೊಂದುಕೊಂಡಿದ್ದಾರೆ. ಮಾಯಾವತಿಯವರಿಗೆ ಆ ಸ್ಥಾನ ದಕ್ಕದಿದ್ದರೆ ಪರವಾಗಿಲ್ಲ, ಆದರೆ ಸುಷ್ಮಾ ಅವರಿಗೆ ಅದು ದೊರೆಯದಿದ್ದರೆ ನಾಗರಿಕರೆಲ್ಲ ದುಃಖ ತೋಡಿಕೊಳ್ಳಬೇಕು ! ಹೀಗಿದೆ ನಮ್ಮ "ಪ್ರತಿಷ್ಠಿತರ" ಪ್ರಜಾಪ್ರಭುತ್ವ.

✶ ✶ ✶

ದೇಶಭಕ್ತಿಯ ಪಾಠ ಕಲಿಯುವುದು ಹೇಗೆ ? ಸುಭಾಷ್ ಚಂದ್ರ ಬೋಸರ ಐಎನ್‌ಎ ಹಾಡುಗಳನ್ನು ಕಲಿಯುವುದರಿಂದಲೆ ? ಅಥವಾ ಗಾಂಧೀಜಿ 'ಸರ್ವೋದಯ' ಮಂತ್ರವನ್ನು ಪಠಿಸುವುದರಿಂದಲೆ ? ಇಲ್ಲವೆ, ಸಂವಿಧಾನವನ್ನು ಬಾಯಿಪಾಠ ಮಾಡುವುದರಿಂದಲೊ ? ಯಾವುದೂ ಅಲ್ಲ, ಕೋಟಿ ಹಣ ಪಡೆದು ಭಾರತದ (ಅಥವಾ ಭಾರತಕ್ಕೆ ಭಾರವಾದ) ಕ್ರಿಕೆಟ್ ಆಟಗಾರರು ಕೆಟ್ಟದ್ದಾಗಿ ಆಡಿ ಸೋತಾಗ ಅರ್ಧಗಂಟೆ ಕಣ್ಣೀರು ಸುರಿಸುವುದರ ಮೂಲಕ ದೇಶಭಕ್ತಿ ಕಲಿಯಬೇಕು; ಈ ಕ್ರಿಕೆಟಿಗರು ಸೋತರೆ ನಾವು ಮುಸುಕು ಹಾಕಿಕೊಂಡು ಓಡಾಡಿ ದೇಶಭಕ್ತಿ ಪ್ರದರ್ಶಿಸಬೇಕು. ಹಾಗೆಂದು ಪ್ರಭುತ್ವದ ಅಂಗಸಂಸ್ಥೆಗಳು ಹೇಳುತ್ತಿವೆಯೆಂದರೆ ನಾವು ಯಾವ ಶತಮಾನದ ಆಟಪಾಟದ ನೀತಿಯನ್ನು ಪೋಷಿಸುತ್ತಿದ್ದೇವೆ ? "ಉತ್ತಮ ಕ್ರೀಡಾಪಟುಗಳು ಗೆಲ್ಲಲಿ" ಎಂದು ಹೇಳುವುದು ಕ್ರೀಡೆಗಳ ಸಂದರ್ಭದಲ್ಲಿ ಯಾವಾಗಲೂ ಇರುವಂಥದೆ. ಆದರೆ ಕ್ಯಾಶಿಯಸ್ ಕ್ಲೆ ಬಾಕ್ಸಿಂಗ್‌ನಲ್ಲಿ ಗೆದ್ದರೆ ನಾವು ಚಪ್ಪಾಳೆ ತಟ್ಟಕೂಡದು, ಏಕೆಂದರೆ ಅವನು ಮೊಹಮ್ಮದ್ ಆಲಿ ಎಂಬ ಹೆಸರನ್ನು ಇಟ್ಟುಕೊಂಡುಬಿಟ್ಟ. ಪ್ರಸ್ತುತ ಲೇಖಕನಿಗೆ ಕ್ರಿಕೆಟ್‌ನ ಅವ್ಯವಹಾರಗಳು ಮತ್ತು ವಾಣಿಜ್ಯೀಕರಣ ಎಷ್ಟು ಬಾಧಿಸುತ್ತದೆಂದರೆ ಧೋನಿ ಪಡೆ ಸೋತಾಗ ಕಷ್ಟಪಟ್ಟರೂ ಕಣ್ಣೀರು ಸುರಿಯುವುದಿಲ್ಲ. "ನಾಲ್ಕು ಕೋಟಿ ಅಲ್ಲವೆ ನಿಮ್ಮ ಹಾಳು ಬೆಲೆ, ಹಾಗೇ ಸೋಲಬೇಕು ನೀವು" ಎಂಬ ಭಾವನೆ ಹಾದುಹೋಗುತ್ತದೆ. ಇಂಗ್ಲೆಂಡ್‌ನ ಹೆಸರಿನಲ್ಲಿ ಬರುವ ಹನ್ನೊಂದು ಮಂದಿ ಯಾವಾಗಲೂ ಸೋಲುತ್ತಿರಬೇಕು, ವೆಸ್ಟ್ ಇಂಡೀಸ್ ಪಂಗಡ ಆಗಾಗ್ಗೆ ಗೆಲ್ಲುತ್ತಿರಬೇಕು, ಬಂಗ್ಲಾದೇಶ ಯಾವಾಗ ಗೆದ್ದರೂ ಒಳ್ಳೆಯದೆ, ಹೀಗೆ ಕೆಲವು ಸೂತ್ರಗಳನ್ನು ಕಟ್ಟಿಕೊಳ್ಳುವುದೂ ಉಂಟು. ಪಾಕಿಸ್ತಾನದ ಒಬ್ಬ ಆಟಗಾರ ಸಿಕ್ಸರ್ ಬಾರಿಸಿದರೆ ನಾವು ದೇಶಭಕ್ತಿಯಿಂದಾಗಿ ಕುಸಿದುಬೀಳಬೇಕಂತೆ; ಇಲ್ಲದಿದ್ದರೆ ಕಾಶ್ಮೀರದ ಕೆಲವು ವಿದ್ಯಾರ್ಥಿಗಳ ಅನುಭವವು ನಮ್ಮದೂ ಆಗುತ್ತದಂತೆ ! ದೇಶದಲ್ಲಿ ನೂರಾರು ಜನ ಹೊಟ್ಟೆಗಿಲ್ಲದೆ, ಸೂರಿಲ್ಲದೆ, ವಿದ್ಯೆಯಿಲ್ಲದೆ, ಪರಿತಪಿಸುತ್ತಿದ್ದರೆ ದೇಶಭಕ್ತಿ ಏನನ್ನೂ ಮಾಡಬೇಕಾಗಿಲ್ಲ; ಆದರೆ ಕ್ರಿಕೆಟ್‌ನಲ್ಲಿ ಧೋನಿಪಡೆ ಗೆಲ್ಲದಿದ್ದರೆ ಮೂಗು ಹಿಡಿದು ಗಂಗೆಯಲ್ಲಿ ಮೂರು ಮುಳುಗು ಹಾಕಬೇಕು. ಅದು ದೇಶಭಕ್ತಿ. ಇದೆಲ್ಲಾ ಕೇಳಿದರೆ 'ಅಯ್ಯೋ, ನನ್ನ ದೇಶವೆ' ಎನ್ನಬೇಕೆನಿಸುತ್ತದೆ. ●




**ಸರ್ಕಾರಿ ಕನ್ನಡ ಶಾಲೆಗಳನ್ನು ಉಳಿಸಿ ಬೆಳೆಸುವ ಬಗೆ**

✉ ಸರ್ಕಾರಿ ಕನ್ನಡ ಶಾಲೆಗಳನ್ನು ಉಳಿಸಿ ಬೆಳೆಸುವ ತುರ್ತು ಇದೆ. ಈ ದಿಶೆಯಲ್ಲಿ ಕನ್ನಡ ಶಾಲೆಗಳನ್ನು (ಸರ್ಕಾರಿ) ಉಳಿಸಲು, ರಕ್ಷಿಸಿ ಬೆಳೆಸಲು ನನಗೆ ಅನಿಸಿದ ಅಂಶಗಳನ್ನು ಮುಕ್ತವಾಗಿ ಹಂಚಿಕೊಳ್ಳಲು ಬಯಸುತ್ತೇನೆ:

೧. ಪ್ರಸ್ತುತ ಇರುವ ವಿದ್ಯಾರ್ಥಿ–ಶಿಕ್ಷಕರ ನಡುವಿನ ಅನುಪಾತವು ಕಿರಿಯ ಮತ್ತು ಹಿರಿಯ ಪ್ರಾಥಮಿಕ ಶಾಲೆಗಳಲ್ಲಿ (೨೦:೧ ಮತ್ತು ೩೦:೧) ಮಕ್ಕಳ ಕಲಿಕೆಯು ಕುಂಟುವಂತೆ ಮಾಡಿದೆ. ತರಗತಿಗೊಬ್ಬ ಶಿಕ್ಷಕ/ಶಿಕ್ಷಕಿಯ ನೇಮಕವಾಗಬೇಕು. ಏಕಕಾಲಕ್ಕೆ ಬಹುವರ್ಗ ಬೋಧನೆ ಮತ್ತು ನಿಯಂತ್ರಣ ನಿಲ್ಲಬೇಕು.

೨. ಹೊಸ ಪಠ್ಯವಸ್ತುವಿಗನುಗುಣವಾಗಿ ಉತ್ತಮ ತರಬೇತಿಯು ಶಿಕ್ಷಕ ವರ್ಗಕ್ಕೆ ಸಿಗಬೇಕು.

೩. ಖಾಸಗಿ ಶಾಲೆಗಳಲ್ಲಿರುವಂತೆ ಪೂರ್ವ ಪ್ರಾಥಮಿಕ ಶಿಕ್ಷಣ (ಎಲ್.ಕೆ.ಜಿ. ಮತ್ತು ಯು.ಕೆ.ಜಿ. ತರಗತಿಗಳು) ಸರ್ಕಾರಿ ಕನ್ನಡ ಶಾಲೆಗಳಲ್ಲಿಯೂ ಸಿಗುವಂತಾಗಬೇಕು. ಇದರಿಂದ ಒಂದನೇ ತರಗತಿಗೆ ದಾಖಲಾತಿ ಸುಧಾರಿಸುತ್ತದೆ.

೪. ಒಂದನೇ ತರಗತಿಯಿಂದಲೇ ಇಂಗ್ಲಿಷ್‌ಅನ್ನು ಒಂದು ಭಾಷೆಯಾಗಿ ಕಲಿಸಲು ಅವಕಾಶ ನೀಡಬೇಕು, ಮಾಧ್ಯಮವಾಗಿ ಅಲ್ಲ. ಇದು ಸರ್ಕಾರಿ ಮತ್ತು ಖಾಸಗಿಯ ಎಲ್ಲಾ ಶಾಲೆಗಳಿಗೂ ಅನ್ವಯವಾಗಬೇಕು.

೫. ಆರ್.ಟಿ.ಇ. ಉದ್ದೇಶ ಉತ್ತಮವಾಗಿದ್ದರೂ ಶೇ. ೨೫ರಷ್ಟು ಮಕ್ಕಳ ವಾರ್ಷಿಕ ಬೋಧನಾ ಶುಲ್ಕವನ್ನು ಖಾಸಗಿ ಶಾಲೆಗಳಿಗೆ ಸರ್ಕಾರವೇ ತುಂಬುತ್ತಿದೆ. ಆ ಮಕ್ಕಳಿಗೆ ಸರ್ಕಾರಿ ಶಾಲೆಗಳಲ್ಲಿಯೇ ಈ ಸೌಲಭ್ಯ ವನ್ನೇಕೆ ನೀಡಬಾರದು ?

೬. ಖಾಸಗಿ ಶಾಲೆಗಳಲ್ಲಿರುವಂತೆ, ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿಯೂ ಗುಮಾಸ್ತರು ಮತ್ತು 'ಡಿ' ದರ್ಜೆ ನೌಕರರ ನೇಮಕ ಕಡ್ಡಾಯವಾಗಿ ಆಗಬೇಕು.

೭. ಮಕ್ಕಳಿಗೆ ಅಗತ್ಯವಿರುವ ಪೀಠೋಪಕರಣಗಳು ಮತ್ತು ಕಲಿಕಾ ಸಾಮಗ್ರಿಗಳನ್ನು ಎಲ್ಲಾ ಸರ್ಕಾರಿ ಶಾಲೆಗಳಿಗೆ ಇಲಾಖೆಯೇ ಒದಗಿಸಿಕೊಡಬೇಕು.

೮. ಪ್ರಾಥಮಿಕ ಶಿಕ್ಷಣದ ಸಂವರ್ಧನೆಗಾಗಿಯೇ ಇರುವ ಬಿ.ಇ.ಒ., ಇ.ಸಿ.ಒ., ಬಿ.ಆರ್.ಪಿ., ಸಿ.ಆರ್.ಪಿ. ಮತ್ತು ಡಿ.ಐ.ಇ.ಟಿ.ನಲ್ಲಿರುವ ಅಧಿಕಾರಿಗಳ ಗುಂಪಿಗೆ ಸರ್ಕಾರಿ ಶಾಲೆಗಳನ್ನು ಶೈಕ್ಷಣಿಕವಾಗಿ ದತ್ತು ನೀಡಿ, ಮುನ್ನಡೆಸಬೇಕು. ಅವರು ಅಧಿಕಾರಿಗಳಂತೆ ವರ್ತಿಸದೆ, ಮಾರ್ಗದರ್ಶಿಗಳಾಗಿರಬೇಕು.

೯. ಪ್ರತಿಯೊಂದು ಹಿರಿಯ ಪ್ರಾಥಮಿಕ ಶಾಲೆಗೆ ಕಡ್ಡಾಯವಾಗಿ ದೈಹಿಕ ಶಿಕ್ಷಣ ಶಿಕ್ಷಕರು, ಗಣಕ ಶಿಕ್ಷಣ ಶಿಕ್ಷಕರು, ವೃತ್ತಿ ಶಿಕ್ಷಣ ಶಿಕ್ಷಕರು (ಚಿತ್ರಕಲೆ, ಸಂಗೀತ, ನಾಟಕ, ನೃತ್ಯ... ಇತ್ಯಾದಿ) ನೇಮಕವಾಗಬೇಕು.

೧೦. ಶಾಲೆ ಬಿಡುವ ಇಲ್ಲವೆ ಶಿಕ್ಷಣದಿಂದ ವಂಚಿತರಾಗುವ ಮಕ್ಕಳನ್ನು ಮುಖ್ಯವಾಹಿನಿಗೆ ತರಲು ಗ್ರಾಮ ಮಟ್ಟದ ಎಲ್ಲಾ ಇಲಾಖೆಗಳ ನೌಕರರು ಮತ್ತು ಜನ ಪ್ರತಿನಿಧಿಗಳನ್ನೊಳಗೊಂಡ ಜಂಟಿ ಕ್ರಿಯಾ ಸಮಿತಿಯನ್ನು ರಚಿಸಬೇಕು. ಕಡ್ಡಾಯ ಪ್ರಾಥಮಿಕ ಶಿಕ್ಷಣ ಕಾಯ್ದೆಯನ್ನು ಬಲಪಡಿಸಿ, ಅದನ್ನು ಉಲ್ಲಂಘಿಸಿದ ಪೋಷಕರನ್ನು ವಿಚಾರಣೆಗೆ ಮತ್ತು ಶಿಕ್ಷೆಗೆ ಒಳಪಡಿಸುವಂತಾಗಬೇಕು.

೧೧. ಗ್ರಾಮ ಪಂಚಾಯಿತಿಗೊಂದರಂತೆ ಹಾಲಿ ಇರುವ ಶಾಲೆಗಳಲ್ಲಿಯೇ ಒಂದನ್ನು 'ಮಾದರಿ ಶಾಲೆ' ಯನ್ನಾಗಿ ಆಯ್ಕೆ ಮಾಡಿಕೊಂಡು ಅಲ್ಲಿ ಒಂದನೇ ತರಗತಿಯಿಂದ ಹನ್ನೆರಡನೇ ತರಗತಿಯವರೆಗೆ (ಪಿ.ಯು.ಸಿ.) ಗುಣಮಟ್ಟದ ಶಿಕ್ಷಣವನ್ನು ನೀಡುವಂತಾಗಬೇಕು.






೧೨. ಎಲ್ಲಾ ಸರ್ಕಾರಿ ಶಾಲೆಗಳಲ್ಲಿ, ಖಾಸಗಿ ಶಾಲೆಗಳಲ್ಲಿರುವಂತೆ, ಸಿಬ್ಬಂದಿ ಕೊಠಡಿ, ವಾಚನಾಲಯ ಕೊಠಡಿ, ಕ್ರೀಡಾ ಕೊಠಡಿ, ಪ್ರಯೋಗಾಲಯ, ಗಂಡು ಮತ್ತು ಹೆಣ್ಣುಮಕ್ಕಳಿಗೆ ಗುಣಮಟ್ಟದ ಪ್ರತ್ಯೇಕ ಶೌಚಾಲಯ, ಕುಡಿಯುವ ನೀರು ಮತ್ತು ಸಭಾಭವನ ಇರುವಂತಾಗಬೇಕು. ಇವೆಲ್ಲಾ ಎಷ್ಟೋ ಖಾಸಗಿ ಶಾಲೆಗಳಲ್ಲೂ ಇಲ್ಲ.

೧೩. ವಿವಿಧ ಜಯಂತಿಗಳಂದು ಶಾಲೆಗಳಿಗೆ ರಜೆ ನೀಡುವ ಪದ್ಧತಿ ಕೊನೆಯಾಗಬೇಕು.

೧೪. 'ಪ್ರಾದೇಶಿಕ ಭಾಷಾ ಬೋಧನೆ' ಮತ್ತು 'ಜೀವನ ಮೌಲ್ಯ'ಗಳಿಗೆ ಪಠ್ಯವಸ್ತುವಿನಲ್ಲಿ ಹೆಚ್ಚು ಒತ್ತು ನೀಡಬೇಕು.

೧೫. ತೃತೀಯ ಭಾಷೆಯ ಕಲಿಕೆಯು ಆರನೇ ತರಗತಿಯಿಂದ ಆರಂಭವಾಗಿ ೧೦ನೇ ತರಗತಿಯಲ್ಲಿ ಕೊನೆಗೊಳ್ಳುತ್ತದೆ. ವಿದ್ಯಾರ್ಥಿಗಳು, ಪೋಷಕರು, ಇಲಾಖೆ ಸಹಿತ ಈ ವಿಷಯಕ್ಕೆ ಹೆಚ್ಚು ಒತ್ತು ಕೊಡುತ್ತಿಲ್ಲ. ಇದು ಸರ್ವವಿದಿತ. ಆದುದರಿಂದ ತೃತೀಯ ಭಾಷೆಯ ಕಲಿಕೆ ವಿದ್ಯಾರ್ಥಿಗೆ ಕಡ್ಡಾಯವಾಗಬಾರದು.

೧೬. ವಿವಿಧ ಸೌಲಭ್ಯ/ಸವಲತ್ತುಗಳನ್ನು ಎಳೆಯ ವಯಸ್ಸಿನಲ್ಲಿರುವ, ಅರಳಬೇಕಾದ ಮಕ್ಕಳಿಗೆ ಜಾತಿ–ಧರ್ಮವಾರು ನೀಡುವುದನ್ನು ನಿಲ್ಲಿಸಬೇಕು. ಶಾಲಾ ಪ್ರವೇಶ, ವಿದ್ಯಾರ್ಥಿ ವೇತನ, ಪ್ರವಾಸ, ಶಾಲಾ ಬ್ಯಾಗ್, ನೋಟ್‌ಬುಕ್... ಇತ್ಯಾದಿ ಸೌಲಭ್ಯ ನೀಡುವಲ್ಲಿ ಈ ತಾರತಮ್ಯ ನಿವಾರಣೆಯಾಗಿ ಸಮಾನತೆ ಸ್ಥಾಪಿತವಾಗಬೇಕು. ಮಕ್ಕಳಲ್ಲಿ 'ವಿಶ್ವ ಮಾನವ ಪ್ರಜ್ಞೆ' ಬೆಳೆಯಲು ನೆರವಾಗಬೇಕು.

೧೭. 'ಅಕ್ಷರ ದಾಸೋಹ' ನೌಕರರಿಗೆ ಸೇವಾ ಭದ್ರತೆ ದೊರೆಯಬೇಕು. ನಿರ್ವಹಣೆಯು ಆ ಸಿಬ್ಬಂದಿಗೇ ಇರಲಿ. ಮುಖ್ಯ ಶಿಕ್ಷಕರ ಮೇಲ್ವಿಚಾರಣೆ ಮಾತ್ರ ಇರಲಿ.

೧೮. ಬಹುತೇಕ ಖಾಸಗಿ ಶಾಲೆಗಳು ಪ್ರಭಾವಿ ಮುಖಂಡರ ಹಿಡಿತದಲ್ಲಿವೆ. ಸರ್ಕಾರಿ ಶಾಲೆಗಳ ಸುಧಾರಣೆಯನ್ನು ಅವರು ಬೆಂಬಲಿಸುವುದಿಲ್ಲ. ಆದುದರಿಂದ 'ಬುದ್ಧಿಜೀವಿಗಳು', 'ಶಿಕ್ಷಣಾಸಕ್ತರು' ಮತ್ತು ಪ್ರಮುಖವಾಗಿ 'ಮಾಧ್ಯಮ'ಗಳಿಂದ ವಿಚಾರಾಂದೋಲನ ಏರ್ಪಾಡಾಗುವಂತಾಗಬೇಕು.

ಈ ಮೇಲ್ಕಂಡ ಅಂಶಗಳು ನನ್ನ ವೈಯಕ್ತಿಕ ಅಭಿಪ್ರಾಯಗಳು. ಸರ್ಕಾರಿ ಶಾಲೆಯೊಂದರ ಮುಖ್ಯ ಶಿಕ್ಷಕಿಯಾಗಿ ಕಾರ್ಯ ನಿರ್ವಹಿಸುತ್ತಿರುವ ನನಗೆ ಅನುಭವದ ಹಿನ್ನೆಲೆಯಲ್ಲಿ ವೇದ್ಯವಾಗಿರುವವು. ಜನಮಾನಸದಲ್ಲಿ ಅಡಗಿರುವ ಮತ್ತಷ್ಟು ಅಂಶಗಳನ್ನು ಹೊರತೆಗೆದು ಅವುಗಳಿಗೊಂದು ಅಂತಿಮ ರೂಪ ಕೊಟ್ಟು, ಈ ದಿಶೆಯಲ್ಲಿ ಕಾರ್ಯ ನಿರ್ವಹಿಸುವಂತೆ ಸರ್ಕಾರಿ ವ್ಯವಸ್ಥೆಯನ್ನು ಒತ್ತಾಯಿಸಿದಲ್ಲಿ ಖಂಡಿತವಾಗಿ 'ಸರ್ಕಾರಿ ಕನ್ನಡ ಪ್ರಾಥಮಿಕ ಶಾಲೆ'ಗಳನ್ನು ಉಳಿಸಿ, ಬೆಳೆಸಬಹುದಾಗಿದೆ. ಇಲ್ಲವಾದಲ್ಲಿ ಕೇವಲ 'ತೋರಿಕೆಯ

ಕಾಳಜಿ'ಯಾಗಿ ಸರ್ಕಾರಿ ಶಾಲೆಗಳು ಕ್ರಮೇಣ ಮರೆಯಾಗುವುದರಲ್ಲಿ ಯಾವುದೇ ಸಂದೇಹವಿಲ್ಲ.

*ಬೆಂಗಳೂರು* **ಗಾಯತ್ರಿ ದೇವಿ**

ಮಾರ್ಚ್ ತಿಂಗಳ 'ಹೊಸತು'ನಲ್ಲಿ ಪ್ರಕಟವಾಗಿರುವ ಡಾ॥ ಕಾಂ. ವೆಂ. ಶ್ರೀನಿವಾಸಮೂರ್ತಿ ಅವರ 'ಕನ್ನಡ ಶಾಲೆಗಳ ಅಳಿವು-ಉಳಿವಿನ ಸುತ್ತ' ಲೇಖನಕ್ಕೆ ಈ ಪ್ರತಿಕ್ರಿಯೆ.

ಕನ್ನಡ ಶಾಲೆಗಳು ಹೆಚ್ಚಿನ ಸಂಖ್ಯೆಯಲ್ಲಿರುವುದು ಹಳ್ಳಿಗಳಲ್ಲಿ. ಈ ಹಳ್ಳಿಯ ಶಾಲೆಗಳು ಮುಚ್ಚುವ ಸ್ಥಿತಿಯಲ್ಲಿಲ್ಲ. ಆದರೆ ಸೊರಗುತ್ತಿವೆ. ಸಮವಸ್ತ್ರ, ಬಿಸಿಯೂಟ, ಹಾಲು ಮುಂತಾದ ಉಚಿತ ಪೂರೈಕೆಗಳು ತುಂಬ ಆಕರ್ಷಕವಾಗಿದ್ದರೂ ಈ ಶಾಲೆಗಳು ಸೊರಗುತ್ತಿರುವುದೇಕೆ ?

ಮೊದಲು ಹಳ್ಳಿಗಳಲ್ಲಿ ವರ್ಗಭೇದ ಅಷ್ಟೊಂದಿರಲಿಲ್ಲ. ಊರಲ್ಲಿ ನಾಲ್ಕಾರು ಶ್ರೀಮಂತ ಕುಟುಂಬಗಳಿರುತ್ತಿದ್ದವು. ಉಳಿದವರೆಲ್ಲ ಸಾಮಾನ್ಯರೇ. ಅಂದರೆ ಬಡವರೇ. ಎಲ್ಲರ ಮಕ್ಕಳೂ ಊರಿನ ಕನ್ನಡ ಶಾಲೆಯಲ್ಲಿ ಓದುತ್ತಿದ್ದರು. ಈಗ ಹಳ್ಳಿಗಳ ಆರ್ಥಿಕ ಸ್ಥಿತಿ ಬದಲಾಗಿದೆ. ಬಡವರೆಲ್ಲ ಮಧ್ಯಮವರ್ಗದವರಾಗಿದ್ದಾರೆ, ಮೇಲ್ಮಟ್ಟಕ್ಕೇರಿದ್ದಾರೆ. ತಮ್ಮ ಮಕ್ಕಳು ಒಳ್ಳೆಯ ಶಿಕ್ಷಣ ಪಡೆಯಬೇಕೆಂಬುದು ಅವರ ಸಹಜ ಆಸೆ. ಕನ್ನಡ ಶಾಲೆಗಳಲ್ಲಿ ಕಲಿಕೆ ತೀರಾ ನಿರ್ಲಕ್ಷಿಸಲ್ಪಟ್ಟಿದೆ. ಯಾವ ಮಗುವನ್ನೂ ಫೇಲ್ ಮಾಡುವಂತಿಲ್ಲ. ಮಕ್ಕಳು ತರಗತಿಯಿಂದ ತರಗತಿಗೆ ದೂಡಲ್ಪಡುತ್ತಾರೆ. ಕನಿಷ್ಠ ಅಕ್ಷರ ಜ್ಞಾನವಿಲ್ಲದ, ಓದಲು ಬಾರದ ಮಕ್ಕಳು ಉನ್ನತ ಶಿಕ್ಷಣದಿಂದ ವಂಚಿತರಾಗುತ್ತಿದ್ದಾರೆ. ಈ ಪರಿಸ್ಥಿತಿಯನ್ನು ಮನಗಂಡ ಪೋಷಕರು ಕನ್ನಡ ಶಾಲೆಗಳಿಗೆ ತಮ್ಮ ಮಕ್ಕಳನ್ನು ಕಳಿಸಲು ಹಿಂದೇಟು ಹಾಕುತ್ತಾರೆ. ಇದೇ ಸಂದರ್ಭದಲ್ಲಿ ಹಳ್ಳಿ ಹಳ್ಳಿಗಳಲ್ಲಿ "ಕಾಲಮೆಂಟ್" (ಕಾನ್ವೆಂಟ್) ಶಾಲೆಗಳು ಹುಟ್ಟಿಕೊಳ್ಳುತ್ತಿವೆ. ಅಲ್ಲಿ ಇಂಗ್ಲಿಷ್ ಕಲಿಸಲಾಗುತ್ತಿದೆ. ಪಾಠಗಳು ನಿಯಮಿತವಾಗಿ ನಡೆಯುತ್ತವೆ. ಆಕರ್ಷಕ ಸಮವಸ್ತ್ರ, ಬೂಟು, ಟೈ ಧರಿಸಿ ಆ ಶಾಲೆಗಳಿಗೆ ಹೋಗುವ ಮಕ್ಕಳನ್ನು ಕಂಡು ಪೋಷಕರು ಪುಳಕಗೊಳ್ಳುತ್ತಾರೆ. ಪಕ್ಕದ ಹಳ್ಳಿಯಲ್ಲಿರುವ ಕಾನ್ವೆಂಟ್ ಶಾಲೆಗೆ ಶಾಲಾ ವಾಹನದಲ್ಲಿ ಮಕ್ಕಳನ್ನು ಕಳಿಸಲು ಆರ್ಥಿಕ ಸ್ಥಿತಿ ಅಡ್ಡಿಯಾಗದು. ಇಂಥ ಶಾಲೆಗಳು ಹೆಚ್ಚಾದಂತೆಲ್ಲ ಕನ್ನಡ ಶಾಲೆಗಳ ಮಕ್ಕಳ ಸಂಖ್ಯೆ ಗಣನೀಯವಾಗಿ ಇಳಿಮುಖವಾಗುತ್ತಿದೆ. ಇದು ವಾಸ್ತವ ಸ್ಥಿತಿ.

*ಹೊಸಪೇಟೆ* **ಡಾ॥ ಬಸವರಾಜ ಮಲಶೆಟ್ಟಿ**

ಪ್ರತಿ ತಿಂಗಳೂ 'ಸಂಪಾದಕೀಯ'ದಿಂದ ಆರಂಭಿಸಿ 'ತಿಳಿವು' ಪುಟದವರೆಗೆ ಆಸಕ್ತಿಯಿಂದ ಓದುವ ಹಲವು ವೈವಿಧ್ಯಮಯ ವಿಷಯಗಳನ್ನು ಹೊತ್ತು ತರುತ್ತಿರುವ 'ಹೊಸತು' ಈ ಮಾರ್ಚ್ ತಿಂಗಳಲ್ಲಿ ಮಾತ್ರ ಒಂದಷ್ಟು ಎಡವಟ್ಟು ಎನಿಸುವ ಒಣ ತೌಡು ಕುಟ್ಟುವಂತಹ ಲೇಖನಗಳನ್ನು ಉಣಬಡಿಸಿದ್ದು ಅಕ್ಷಮ್ಯ.

'ಬರ ಅಂದ್ರೆ ಎಲ್ಲರಿಗೂ ಇಷ್ಟ – ಭಿನ್ನ ಹಾದಿಯ ಪಯಣ' ಎಂಬ ಡಾ॥ ವಿನಯಾ ಅವರ ಪುಸ್ತಕ ಪರಿಚಯ ಸಾಯಿನಾಥ್ ಅವರ ಒಕ್ಕಣಿಕೆಯನ್ನು ಹೊಗಳುವ ಭರದಲ್ಲಿ ಕನ್ನಡಕ್ಕೆ ತರುವಾಗ ಆಗಿರುವ ಅವಘಡಗಳನ್ನು ಗಮನಿಸಿದಂತಿಲ್ಲ. ಮೂಲ ಕೃತಿಯ ಶೀರ್ಷಿಕೆಯಲ್ಲಿ 'ಗುಡ್' ಎಂಬ ಪದ ಇದೆ. 'ಎವರಿಬಡಿ ಲವ್ಸ್ ಅ ಗುಡ್ ಡ್ರಾಟ್' ಎಂಬಲ್ಲಿನ 'ಗುಡ್' ಪದ ಪ್ರಸ್ತುತ ಸನ್ನಿವೇಶದ ವಿಡಂಬನೆ ಮಾಡುವುದಕ್ಕಾಗಿ ಬಳಸಲ್ಪಟ್ಟಿದ್ದು, ಅದರ ಹೂರಣವನ್ನೇ ಅರಿಯದೆ ಸರಳವಾದ ಅನುವಾದವೆನಿಸುವಂತಹ ಕನ್ನಡದ ಶೀರ್ಷಿಕೆ ನೀಡಿದ್ದು, ಮೂಲ ಲೇಖಕರ ಆಶಯವನ್ನು ಸಮರ್ಥವಾಗಿ ಬಿಂಬಿಸುವಲ್ಲಿ ಅನುವಾದವು ಸೋತಿದೆ.

'ಕನ್ನಡ ಶಾಲೆಗಳ ಅಳಿವು ಉಳಿವಿನ ಸುತ್ತ' ಎಂಬ ಲೇಖನದಲ್ಲಿ ಡಾ॥ ಕಾ. ವೆಂ. ಶ್ರೀನಿವಾಸಮೂರ್ತಿ ಅವರು, "ಹೀಗೆ ಮಾಡಿದಲ್ಲಿ ಕನ್ನಡ ಶಾಲೆಗಳು ಉಳಿಯುವ ಸಾಧ್ಯತೆಗಳಿವೆ" ಎಂದು ಸೂಚಿಸಿದ್ದಾರೆ. ಅವರಿಗೆ ಕಳೆದ ೧೨ ವರ್ಷಗಳಿಂದ ಕನ್ನಡ ಶಾಲೆಗಳಲ್ಲಿ ಕಲಿಸಿಕೊಡಲಾಗುತ್ತಿರುವ ಕನ್ನಡ ಭಾಷಾ ಪಾಠ ಯಾವ ರೀತಿ ಇದೆ ಎಂಬುದು ಗೊತ್ತಿರಲಿಕ್ಕಿಲ್ಲ. ಕಲಿ-ನಲಿ ಪದ್ಧತಿಯಲ್ಲಿ ಕೆಲವು ಪುಸ್ತಕಗಳು ಇದ್ದವು. ಇದೀಗ ನಲಿ-ಕಲಿ ಪದ್ಧತಿಯಲ್ಲಿ ೧, ೨, ೩ನೇ ತರಗತಿಗಳ ಮಕ್ಕಳಿಗೆ ಕನ್ನಡ ಪಠ್ಯಪುಸ್ತಕಗಳು ಇಲ್ಲವೇ ಇಲ್ಲ! ಕೇವಲ ಕಾರ್ಡುಗಳಿವೆ. 'ರ.ಗ.ಸ.ದ.ಅ...' ಎಂಬ ಅತ್ಯಂತ ನಿಸ್ಸಾರವಾದ, ಧ್ವನಿಭಾಷೆಗೆ ಹೊಂದದಂತಹ ವಿಧಾನದ ಮೂಲಕ ಮಕ್ಕಳಿಗೆ ಕನ್ನಡ ಭಾಷೆಯನ್ನು ಬೋಧನೆ ಮಾಡುವ ಆತುರದಲ್ಲಿ 'ಕನ್ನಡ ಅಕ್ಷರ ಮಾಲೆ'ಯನ್ನೇ ಕೊಂದಿದ್ದು ಇದೀಗ 'ಅಕಾರಾದಿ' ಎಂದರೆ ಏನು ಎಂದೇ ವಿದ್ಯಾರ್ಥಿಗಳಿಗೆ ಗೊತ್ತಿಲ್ಲ! ತಮ್ಮ ಹತ್ತಿರದ ಪ್ರಾಥಮಿಕ ಶಾಲೆಗೆ ಹೋಗಿ ಒಮ್ಮೆ ತರಗತಿಗಳು ಹೇಗೆ ನಡೆಯುತ್ತಿವೆ, ಭಾಷೆ ಹೇಗೆ ಸಾಯಿಸಲ್ಪಟ್ಟಿದೆ ಎಂಬುದನ್ನು ನೋಡಿದ್ದರೆ ಅವರ ಲೇಖನಕ್ಕೆ ಬೇರೆಯೇ ಒಗರು, ಖದರು, ಬರಬಹುದಿತ್ತು. ಅಲ್ಲಿನ ಶಿಕ್ಷಕರಿಗೇ 'ರಗಸದಅ'ದಲ್ಲಿ 'ಅ' ಏಕೆ ಕೊನೆಯಲ್ಲಿಡಲಾಗಿದೆ ? ಎಂದು ಕೇಳಿದರೆ ಉತ್ತರ ಗೊತ್ತಿಲ್ಲ. ಹಾಗೆಯೇ ಮುಂದಿನ 'ಅಕ್ಷರಗಳ ಗುಂಪು' ಯಾವುದು ಎಂದರೆ ಕಾರ್ಡು ನೋಡಿ ಹೇಳುವ ಪರಿಸ್ಥಿತಿ ಇದೆ! ಕಂಡವರ ಮಕ್ಕಳನ್ನು ಬಾವಿಗೆ ಇಳಿಸಿ ಆಳ ನೋಡುವ ಸನ್ನಿವೇಶದ ಬಗ್ಗೆ ಮಾತಾಡುವುದಕ್ಕಿಂತ ಶಿಕ್ಷಣತಜ್ಞರ ಹೆಸರಿನಲ್ಲಿ ಹಣ ಮಾಡುತ್ತಿರುವ ಇಲಾಖೆಯ ಹೆಗ್ಗಣಗಳು ಅಕ್ಷರ ಲಿಪಿಯ ಪಟ್ಟಿಕೆಗಳನ್ನು, ಕಾರ್ಡುಗಳನ್ನು ಮುದ್ರಿಸುವ ನೆಪದಲ್ಲಿ ಕೋಟಿಗಟ್ಟಲೆ ಕಬಳಿಸಿರುವುದು ಗಮನಕ್ಕೆ ಬಂದೀತು. ಹಿರಿಯ ಅಧಿಕಾರಿಗಳ ಕೆಂಗಣ್ಣಿನ ನೋಟವನ್ನು ಎದುರಿಸಲಾಗದೇ ಈ 'ರಗಸದಅ' ಪದ್ಧತಿಯನ್ನು ಚಕಾರ ಎತ್ತದೆ ತುರುಕುತ್ತಿರುವ ಕರ್ಮ ಶಿಕ್ಷಕರದ್ದಾಗಿದೆ.

'ಪಶುವೈದ್ಯನ ಆತ್ಮಕಥನಗಳು' ಶೀರ್ಷಿಕೆಯಡಿ ಎಚ್. ಕೆ. ರಾಮಚಂದ್ರಮೂರ್ತಿಯವರು ಜೇಮ್ಸ್ ಹೆರಿಯೆಟ್‌ನ ಜೀವನದ ಅನುಭವಗಳನ್ನು ಕಟ್ಟಿಕೊಡಲು ಪ್ರಯತ್ನಿಸಿದ್ದಾರೆ. ಕನ್ನಡದಲ್ಲಿ ಈಗಾಗಲೇ 'ಡೇರಿ ಡಾಕ್ಟರ್ – ಹೋರಿ ಮಾಸ್ತರ್' ಎಂಬ ಹೆಸರಿನಲ್ಲಿ ಶಿರಸಿಯ ಡಾ॥ ಗಣೇಶ್ ಹೆಗಡೆಯವರು ಹೆರಿಯಟ್‌ನ ಅನುಭವ ಕಥನಗಳನ್ನು ಅಚ್ಚುಕಟ್ಟಾಗಿ, ಕನ್ನಡದ ಪರಿಸರಕ್ಕೆ ಹೊಂದುವ ರೀತಿಯಲ್ಲಿ ಅನುವಾದಿಸಿದ್ದಾರೆ.

'ನಾಡೋಜ ಎಂದರೇನು ? ಯಾರು ನಾಡೋಜ !' ಎಂಬ ಕೋ. ಚೆ.ಯವರ ಲೇಖನ 'ಅರ್ಹತೆ' ಇಲ್ಲದ ನಾಡೋಜರ ಮರ್ಮಕ್ಕೆ ತಾಕುವಂತಿತ್ತು! ಮಾರಿಯಾ ಜೊಸಿಫಿಯಾ ಗೇಬ್ರಿಯಾಲಾ ಕರಿನೋ ಸಿಲಾಂಗ್ ಎಂಬ ಹೋರಾಟಗಾರ್ತಿಯನ್ನು ಪರಿಚಯಿಸಿದ್ದು, ಮಹಿಳಾ ಹೋರಾಟ ಆರಂಭಗೊಂಡದ್ದು ಪಾಶ್ಚಾತ್ಯ ದೇಶಗಳಿಗಿಂತ ಮೊದಲು ಪೌರಸ್ತ್ಯ ದೇಶಗಳಲ್ಲಿ ಎಂಬುದನ್ನು ತಿಳಿಸಿಕೊಟ್ಟಿದ್ದು, ಮಹಿಳಾ ದಿನಾಚರಣೆಯ ವಿಶೇಷವೇ ಆಗಿತ್ತು. ಪ್ರತಿ ಬಾರಿಯೂ ಒಬ್ಬ ಕಲಾವಿದನನ್ನು ಪರಿಚಯಿಸುವ 'ಹೊಸತು' ಈ ಬಾರಿ ಅದನ್ನು ಯಾಕೋ ಮರೆತಿದೆ. ಮಹಿಳೆಯರಲ್ಲಿಯೂ ಅತ್ಯುತ್ತಮ ಕಲಾವಿದೆಯರಿದ್ದಾರೆ. ಅವರ ಪರಿಚಯ ಬರಬೇಕಿತ್ತು, ಅಲ್ಲವೇ ?

ಹಾಸನ **ಬೇದ್ರೆ ಎನ್. ಮಂಜುನಾಥ**

ವಿಶೇಷ ಸಂಚಿಕೆಯಲ್ಲಿ ಪ್ರಕಟವಾಗಿರುವ ಸಂದರ್ಶನಗಳು, ಲೇಖನಗಳು, ವಿಶ್ಲೇಷಣೆ ಇತ್ಯಾದಿ ಪತ್ರಿಕೆಯ ವೈಶಿಷ್ಟ್ಯತೆಗೆ ಅನುಗುಣವಾಗಿ ಮೂಡಿ ಬಂದಿದ್ದು ಸಂಪಾದಕರ ಅಪಾರ ಆಸಕ್ತಿ ಮತ್ತು ಶ್ರಮಕ್ಕೆ ಹಿಡಿದ ಕನ್ನಡಿಯಾಗಿದೆ. ಪತ್ರಿಕೆಯನ್ನು ಓದಿದ ನಂತರ ಮನಸ್ಸನ್ನು ಚಿಂತನೆಗಳು ಕಾಡುತ್ತವೆ. ಗಂಭೀರ ವಿಷಯಗಳ ಓದಿನೊಂದಿಗೆ, ಸರಾಗವಾಗಿ ಓದಿಸಿಕೊಂಡು ಹೋಗುವ ಕೆಲವು ಮಹತ್ವದ

ಪ್ರಕಟಣೆ

## ಚಿಣ್ಯ ಕುಟುಂಬ ನಿಧಿ

ಕನ್ನಡದ ಹಿರಿಯ ಪತ್ರಕರ್ತ ದಿವಂಗತ ಸಿ. ವಿ. ರಾಜಗೋಪಾಲ್ ಸಾವಿರದ ಒಂಬೈನೂರ ಐವತ್ತು - ಅರವತ್ತರ ದಶಕಗಳಲ್ಲಿ 'ಪ್ರಜಾವಾಣಿ' ದಿನಪತ್ರಿಕೆಯಲ್ಲಿ ಅನೇಕ ವರ್ಷಗಳು ವರದಿಗಾರರಾಗಿ, ಮುಖ್ಯ ವರದಿಗಾರರಾಗಿ, ಸೇವೆ ಸಲ್ಲಿಸಿದವರು. ನಿವೃತ್ತರಾದ ಮೇಲೆ ಅಂಕಣಕಾರರಾಗಿ ಹಲವು ಕನ್ನಡ ಪತ್ರಿಕೆಗಳಿಗೆ ಲೇಖನಗಳನ್ನು ಬರೆಯುತ್ತಿದ್ದವರು. ಜನಪರ ಪುರೋಗಾಮಿ ಧೋರಣೆಗಳ ಇವರು ಕನ್ನಡ ಪತ್ರಿಕಾರಂಗದಲ್ಲಿ ತಮ್ಮದೇ ಆದ ಛಾಪು ಮೂಡಿಸಿದವರು. ಅವರ ಸ್ಮರಣಾರ್ಥ ಚಿಣ್ಯ ಕುಟುಂಬದವರು ಸ್ಥಾಪಿಸಿರುವ ನಿಧಿಯಿಂದ 'ಹೊಸತು' ಪತ್ರಿಕೆಯ ಎರಡು ಉತ್ತಮ ಲೇಖನಗಳಿಗೆ ತಲಾ ರೂ. ೫೦೦೦ ಪುರಸ್ಕಾರಗಳನ್ನು ನೀಡಲು ನಿರ್ಧರಿಸಿದ್ದಾರೆ. ಪತ್ರಿಕೆಯ ಒಂದು ವರ್ಷದಲ್ಲಿ ಪ್ರಕಟವಾದ (ಆಗಸ್ಟ್‌ನಿಂದ ಜುಲೈವರೆಗೆ) ಲೇಖನಗಳನ್ನು ಪರಿಶೀಲಿಸಿ ತಲಾ ರೂ. ೫೦೦೦ದಂತೆ ಎರಡು ಪುರಸ್ಕಾರ ನೀಡಲಾಗುವುದು. ಸಂಪಾದಕ ಮಂಡಳಿಯ ತೀರ್ಮಾನದ ಮೇರೆಗೆ ಈ ಯೋಜನೆ ೨೦೧೩-೨೦೧೪ರಿಂದ ಪ್ರಾರಂಭವಾಗುತ್ತದೆ.

- ***ಸಂಪಾದಕ***

ಕಾದಂಬರಿಗಳನ್ನು, 'ಋಗ್ವೇದ ಪ್ರವೇಶಿಕೆ'ಯಂತೆ ಧಾರಾವಾಹಿಯಾಗಿ ಪ್ರಕಟಿಸಿದರೆ ಒಳ್ಳೆಯದೆಂದು ನನ್ನ ಭಾವನೆ. ಓದುಗರಿಗೆ ವೈಚಾರಿಕತೆ ಹಾಗೂ ವೈವಿಧ್ಯತೆಗಳನ್ನು ದೊರಕಿಸಿಕೊಡುವ ದೃಷ್ಟಿಯಿಂದ ೬೦-೭೦ರ ದಶಕಗಳ ಜನಪ್ರಿಯ ಕಾದಂಬರಿಗಳಾದ ತರಾಸುರವರ "ಕೇದಿಗೆ ವನ", ಕಟ್ಟೀಮನಿಯವರ "ಜನಿವಾರ-ಶಿವದಾರ", ಕುವೆಂಪುರವರ "ಮಲೆಗಳಲ್ಲಿ ಮದುಮಗಳು" ಇವೇ ಮುಂತಾದ ಕಾದಂಬರಿಗಳೂ ಈ ಸಾಲಿಗೆ ಸೇರುತ್ತವೆ. ಅವು ಇಂದಿಗೂ ತಮ್ಮ ಪ್ರಸ್ತುತತೆಯನ್ನು ಕಳೆದುಕೊಂಡಿಲ್ಲವೆಂದು ನನ್ನ ಭಾವನೆ.

*ಬೆಂಗಳೂರು* **ಎಂ. ಇಕ್‌ಬಾಲ್ ಹುಸೇನ್**

✉ ಹೊಸತು ೨೦೧೩ರ ವಿಶೇಷ ಸಂಚಿಕೆಯಲ್ಲಿ ಕುವೆಂಪು ಮತ್ತು ನೋಮ್ ಚಾಮ್‌ಸ್ಕಿಯವರ ವಿಚಾರ ಗಳ ಕುರಿತು ಚಂದ್ರಶೇಖರ ನಂಗಲಿಯವರ ಲೇಖನವಿದೆ.

ನೋಮ್ ಚಾಮ್‌ಸ್ಕಿ ಜಾಗತಿಕ ಮಟ್ಟದ ಭಾಷಾ ವಿಜ್ಞಾನಿ, ವಿದ್ವಾಂಸ, ತತ್ವಶಾಸ್ತ್ರಜ್ಞ ಮತ್ತು ರಾಜಕೀಯ ಚಿಂತಕ. ಅವರೋರ್ವ ವಿಶ್ವ ದಾರ್ಶನಿಕ ಎಂಬ ಖ್ಯಾತಿ ಪಡೆದವರು.

ಅಮೆರಿಕದ ಬಂಡವಾಳಶಾಹಿ ದೈತ್ಯಪ್ರಭುತ್ವದ ಆಕ್ರಮಣಕಾರಿ ಯುದ್ಧಕೋರ ನೀತಿಯನ್ನು, ಪ್ರಜಾಪ್ರಭುತ್ವ ವಿರೋಧಿ ನಿಲುವುಗಳನ್ನು, ಮಾನವ ಹಕ್ಕುಗಳ ಉಲ್ಲಂಘನೆಯ ಕ್ರಮಗಳನ್ನು ಅವರು ತಮ್ಮ ಪ್ರಖರ ಚಿಂತನಗಳಿಂದ ಉಗ್ರವಾಗಿ ವಿರೋಧಿಸಿದವರು. ಅಲ್ಲಿನ ಪ್ರಭುತ್ವದ ಬೆಂಬಲದಿಂದ ಬಹುರಾಷ್ಟ್ರೀಯ ಕಂಪೆನಿಗಳು ಕೈಗೊಳ್ಳುವ ಜನವಿರೋಧಿ ನೀತಿಗಳನ್ನು ಅಂಕಿ-ಅಂಶಗಳ ಆಧಾರದಲ್ಲಿ ವಿಶ್ಲೇಷಿಸಿದ್ದಾರೆ. ಅವರು ರಾಷ್ಟ್ರಪ್ರಭುತ್ವದ ದಮನಕಾರಿಯಾದ ಆಳ್ವಿಕೆಗೆ ನಲುಗಿಹೋದ ಜನಾಂಗೀಯ, ರಾಷ್ಟ್ರೀಯ, ಶ್ರಮಿಕ ಅಲ್ಪಸಂಖ್ಯಾತರ ಪರವಾಗಿ ದನಿ ಎತ್ತಿದವರು. ನಮ್ಮ ಸ್ಥಾಪಿತ ಯೋಚನಾಕ್ರಮವನ್ನೇ ಪ್ರಶ್ನಿಸಬಲ್ಲ ವಾಸ್ತವ ಗಳನ್ನು ಅವರು ಪ್ರತಿಪಾದಿಸುತ್ತಾರೆ. ಆದರೆ ಕುವೆಂಪು ರವರ ಪ್ರಧಾನ ಆಸಕ್ತಿ ಭಾವಪ್ರಧಾನವಾದ ಸೃಜನಶೀಲ ಮಾಧ್ಯಮ. ಮತಭ್ರಾಂತಿಯನ್ನು ಅವರು ಆಧ್ಯಾತ್ಮಿಕ ನೆಲೆಯ ಶುದ್ಧ ಹೃದಯದ ಸನ್ಮತಿಯಿಂದ ವಿರೋಧಿಸುತ್ತಾರೆ.

ಸಮಕಾಲೀನ ರಾಜಕಾರಣ, ರಾಷ್ಟ್ರಪ್ರಭುತ್ವ, ಇವುಗಳನ್ನು ಪೋಷಿಸುವ ಅರ್ಥವ್ಯವಸ್ಥೆ, ಸೈನ್ಯಶಕ್ತಿ, ಕೋಮುವಾದ ಇತ್ಯಾದಿಗಳ ಬಗ್ಗೆ ಕುವೆಂಪು ಗಂಭೀರ ವಾಗಿ ಚಿಂತನೆಯನ್ನು ನಡೆಸಿದವರಲ್ಲ. ಇದು ಅವರ ಆಸಕ್ತಿಗೆ ಒಗ್ಗಿಕೊಳ್ಳುವ ವಲಯಗಳಲ್ಲ. ಕಾಲ, ದೇಶ, ವ್ಯವಸ್ಥೆಯ ಹಿನ್ನೆಲೆಯನ್ನು ಪ್ರತ್ಯೇಕಿಸಿ ಬಸವ, ಅಲ್ಲಮ ಬುದ್ಧ ಇವರ ವಿಚಾರಗಳನ್ನು ಕಾರ್ಲ್ ಮಾರ್ಕ್ಸ್, ಅಂಟೋನಿಯೋ ಗ್ರಾಮ್ಶಿ, ನೋಮ್ ಚಾಮ್‌ಸ್ಕಿ ಇಂಥವರ ಚಿಂತನೆಗಳೊಂದಿಗೆ ಸಮೀಕರಿಸುವ ವೈಪರೀತ್ಯಗಳೂ ಕೂಡ ನಮ್ಮಲ್ಲಿವೆ. 'ನಿರಂಕುಶಮತಿ ಗಳಾಗಿ' ಎಂದು ಕರೆ ನೀಡಿದ ಕುವೆಂಪುರವರು ೧೯೭೫ರಲ್ಲಿ ದೇಶದಲ್ಲಿ ತುರ್ತು ಪರಿಸ್ಥಿತಿ ಹೇರಿದಾಗ ಮೌನವಾಗಿದ್ದರು. ನೋಮ್ ಚಾಮ್‌ಸ್ಕಿಯವರ ಅಧ್ಯಯನ ಮತ್ತು ಚಿಂತನೆಯ ಬೀಸು ಮತ್ತು ವ್ಯಾಪ್ತಿ ಬಹಳಷ್ಟು ವಿಶಾಲವಾದದ್ದು; ವಿವರಗಳಿಗೆ ನೋಡಿ 'ನೋಮ್ ಚಾಮ್‌ಸ್ಕಿ' ಮನುಕುಲದ ಮಾತುಗಾರ: ಸಂಪಾದಕ ಎನ್. ರವಿಕುಮಾರ್, ಅಭಿನವ ಪ್ರಕಾಶನ (೨೦೦೧).

ಕುವೆಂಪು ಕುರಿತು ಅಭಿಮಾನದ ಅತಿರೇಕದಿಂದ ಬರೆದ ಈ ಲೇಖನ ತೆಳುವಾದ ವಿವರಣೆಗಳಿಂದ ಸೊರಗಿದೆ.

*ಕೊಡಗು* **ಐ. ಆರ್. ಪ್ರಮೋದ್**

✉ 'ಹೊಸತು' ಪತ್ರಿಕೆಯ ಮುಖಪುಟದ ರಾಷ್ಟ್ರಕವಿ ಡಾ॥ ಜಿ. ಎಸ್. ಶಿವರುದ್ರಪ್ಪರವರ ತೇಜೋಮಯವಾದ ಮುಖಚಿತ್ರವನ್ನಳವಡಿಸಿದ ಫೆಬ್ರವರಿ ತಿಂಗಳ ಸಂಚಿಕೆ ಆರಂಭದಲ್ಲೇ ನುಡಿನಮನ ಸಲ್ಲಿಸುವಂತೆ ಪ್ರೇರೇಪಣೆ ನೀಡಿತು. ಜೊತೆಗೆ, ಈ ಮಹಾಕವಿಯ ಕುರಿತಾದ ಬರಹ, ಕವನಗಳನ್ನು ವಾಚಿಸಿ ಕೊಂಡುದೂ ಹೌದು. ಸಂಪಾದಕೀಯ ಬರಹಗಳಲ್ಲಿ 'ಹೊಸತು' ನೀಡಿದ ಸಂಪಾದಕೀಯ ಪ್ರಥಮ ಆಯ್ಕೆಯಾಗಿ ಸ್ವೀಕರಿಸಿಕೊಳ್ಳುವ ರೀತಿಯಲ್ಲಿದೆ. ಹಲವು ಸಂಪಾದಕರುಗಳ ಒಗ್ಗೂಡುವಿಕೆಯೊಂದಿಗೆ ರೂಪಿಸ ಲ್ಪಡುವ ಹಾಗೆಯೇ ಜಾತ್ಯತೀತವಾಗಿ, ವೈಶಿಷ್ಟ್ಯಮಯವಾಗಿ ಸಾಹಿತ್ಯ ಸಂಕಲನಗಳನ್ನು ನಿರ್ವಚನ ಭಾವನೆಗಳಿಂದ ಪ್ರಕಟಿಸುತ್ತಿರುವ ಸಂಚಿಕೆ ಗಮನ ಸೆಳೆಯುವ ರೀತಿಯಲ್ಲೂ ವಿಭಿನ್ನವಾಗಿರುತ್ತದೆ ಎನ್ನುವುದು ನನ್ನ ಅನಿಸಿಕೆ. 'ಈ ತಿಂಗಳು' ಎಂಬ ಬರಹದೊಂದಿಗೆ ಸಂಪಾದಕೀಯ ಎನ್ನುವ ಮಗದೊಂದು ಬರಹಗಳ ಗೊಂಚಲು ಅಲ್ಲಿ ಕಾಣಿಸಿಕೊಳ್ಳುತ್ತದೆ. ಅದರೊಂದಿಗೆ ಗೌರವ ಸಂಪಾದಕರಾದ ಸಿ. ಆರ್. ಕೃಷ್ಣರಾವ್ ಹಾಗೂ ಸಂಪಾದಕರಾದ ಸಿದ್ದನಗೌಡ ಪಾಟೀಲರೊಂದಿಗೆ ಸಹ ಸಂಪಾದಕರೆಂಬ ಇನ್ನಿತರ ಬರೋಬರಿ ಆರು ಮಂದಿ ಸಂದರ್ಭಕ್ಕೆ ಸರಿಯಾಗಿ ಪರಸ್ಪರ ಹೊಂದಿಸಿಕೊಂಡು ಈ ಮುಖ್ಯ ಬರಹಗಳಲ್ಲಿ ಕಾಣಿಸಿಕೊಳ್ಳುತ್ತಾರೆ. ಹಾಗೆಯೇ ಚುಟುಕಾಗಿಯಾದರೂ ಓದುಗರಿಗೆಟಕುವ ರೀತಿಯಲ್ಲಿ ವಿಷಯ ವಿಶ್ಲೇಷಣೆಯಾಗಿ, ಅಷ್ಟೇ ಆಸಕ್ತಿಯುತವೂ ಅನಿಸಿ ಓದುಗರಿಗೆ ಹೊಸತೊಂದು ಔತಣ ಸಮಾರಂಭದಂತೆ ಕಾಣಿಸಿಕೊಳ್ಳುತ್ತದೆ. ಒಬ್ಬೊಬ್ಬ ಓದುಗನಿಂದಲೂ ಒಂದೊಂದು ಅನಿಸಿಕೆಯೂ ಉಂಟಾಗುವ ಹಾಗೆ ಬರಹಗಳು ಮೂಡಿಬರುತ್ತಿವೆ. ಸಂಪಾದಕೀಯವೂ ಇದಕ್ಕೆ ಹೊರತಾಗಿ ಇಲ್ಲ.

ಉದಾಹರಣೆಗೆ, ಈ ತಿಂಗಳು ಕಾಲಮ್‌ನಲ್ಲಿ ಬರೆದ ಸಂಪಾದಕೀಯವನ್ನು ಗಮನಿಸೋಣ. ಬೆನ್‌ಹಿನ್ ಎಂಬ - ಹಾಗೆಯೇ ಅದೆಷ್ಟೊ ಜನರಿಂದ ಮಹಾ ಮಹಿಮ ಅನ್ನುವಷ್ಟೂ ಎಣಿಕೆಗೆ ಏಣಿಯಾದ ಈ ಪುಣ್ಯ (!) ಪುರುಷನ ಆವಕ ಜಾವಕಗಳನ್ನು ಸರ್ವಧರ್ಮ ಸಮನ್ವಯದ ತಕ್ಕಡಿಯಲ್ಲಿ ತೂಗಿಸಿ ಕೊಂಡಂತಿರುವಂತೆ, ಪತ್ರಿಕೆಯೊಂದರ ವ್ಯಂಗ್ಯ ಚಿತ್ರಣ ವನ್ನು ಸಾಕ್ಷೀಕರಿಸಿ ಮತಪಂಡಿತರುಗಳನ್ನೆಲ್ಲ ಪರಪ್ಪನ ಅಗ್ರಹಾರದಲ್ಲಿ ಚಿರಕಾಲ ನಿರಾಳವಾಗಿ ಜೀವಿಸುವಂತೆ ಮಾಡುವುದು ಸಂವಿಧಾನಕ್ಕೆ ವಿರುದ್ಧವಾದುದಲ್ಲ ಎನಿಸುತ್ತದೆ. ಅಂಥ ಬರಹವನ್ನು ಗಮನಿಸಿದರೆ ಸಂಪಾದಕೀಯ ಅದೆಷ್ಟು ಚೆನ್ನಾಗಿ ಮೂಡಿಬರುತ್ತಿದೆ ಎನ್ನುವುದನ್ನು ನಾವು ಅರ್ಥೈಸಿಕೊಳ್ಳಬಹುದು.

ಇದರಂತೆಯೇ ಅಂದರೆ ಉರಿನಾಲಗೆಯ ದಳ್ಳುರಿ ಯಂತೆ ಇನ್ನಿತರ ಸಂಪಾದಕರ ಮಿನಿ ಬರಹಗಳೂ ಇರುತ್ತವೆ. ಒಮ್ಮೊಮ್ಮೆ ತಮ್ಮತಮ್ಮೊಳಗೆ ಹೊಂದಿಕೊಂಡು ಅಭಿಪ್ರಾಯಗಳೆಲ್ಲದರ ಸಂಗಮವಾಗಿ ಒಗ್ಗಟ್ಟಿನ ಓಕುಳಿಗೆ ಪೂರಕವಾಗಿ ಓದುಗರೊಂದಿಗೆ ಓಲೈಸಿ ಕೊಳ್ಳುತ್ತದೆ ಎನ್ನುವುದೊಂದು ಅಭಿಪ್ರಾಯವನ್ನು ನೀಡಬಯಸುತ್ತೇನೆ. ಅಭಿನಂದನೆಗಳು.

*ಕಾಸರಗೋಡು* **ಕೇರಿಕ್ಕಾಡು ವನಮಾಲ ಕೇಶವ ಭಟ್ಟ**

**ಇವು ಪಠ್ಯಪುಸ್ತಕಗಳು !**

✉ ಮಹಾತ್ಮ ಗಾಂಧಿ ಕೊಲೆಯಾದದ್ದು ೧೯೪೮ರ ಅಕ್ಟೋಬರ್ ೩೦ರಂದು; ಎರಡನೆ ಜಾಗತಿಕ ಮಹಾಯುದ್ಧದಲ್ಲಿ ಜಪಾನ್ ದೇಶವು ಅಮೆರಿಕಾ ಸಂಯುಕ್ತ ಸಂಸ್ಥಾನಗಳ ಮೇಲೆ ಅಣುಬಾಂಬ್ ದಾಳಿ ನಡೆಸಿತು; ವಿಭಜನೆಯ ಅನಂತರ ಹಿಂದೂ ಖುಶ್ ಪರ್ವತಶ್ರೇಣಿಯಲ್ಲಿನ ಖೈಬರ್ ಕಣಿವೆಯಲ್ಲಿರುವ ಇಸ್ಲಾಮಾಬಾದ್ ರಾಜಧಾನಿ ಯಾಗುಳ್ಳ 'ಇಸ್ಲಾಮಿಕ್' ದೇಶವೂ ಅಸ್ತಿತ್ವಕ್ಕೆ ಬಂದಿತು; ದಕ್ಷಿಣ ಭಾರತದಲ್ಲಿ ಇರುವವರೆಲ್ಲ "ಮದ್ರಾಸಿಗಳು".

- ಇವು ಗುಜರಾತ್ ಸರ್ಕಾರವು ಪ್ರಾಥಮಿಕ ಶಾಲೆಯ ೬, ೭, ೮ನೇ ತರಗತಿಗಳಿಗೆ ಗೊತ್ತುಪಡಿಸಿದ ಸಮಾಜವಿಜ್ಞಾನ ಪಠ್ಯಪುಸ್ತಕಗಳಲ್ಲಿರುವ ಕೆಲವು ದೋಷಗಳು ಮತ್ತು ಚಾರಿತ್ರಿಕವಾಗಿ ಅರ್ಧಸತ್ಯದ ಮಾದರಿಗಳು! (ವ್ಯಾಕರಣದ ಮತ್ತು ಕಾಗುಣಿತದ ತಪ್ಪುಗಳು ಒತ್ತಟ್ಟಿಗಿರಲಿ).

ಹೀಗಿದ್ದರೂ ಸುಮಾರು ೫೦,೦೦೦ ಪ್ರಾಥಮಿಕ ಶಾಲೆಯ ಇಂಗ್ಲಿಷ್ ಮಾಧ್ಯಮ ವಿದ್ಯಾರ್ಥಿಗಳಿಗೆ ಒದಗಿಸಿರುವ ಸದರಿ ಪಠ್ಯಪುಸ್ತಕಗಳನ್ನು ಹಿಂಪಡೆಯಲು ಗುಜರಾತ್ ಸರ್ಕಾರದ ಪಠ್ಯಪುಸ್ತಕ ನಿರ್ದೇಶನಾಲಯವು ಸಿದ್ಧವಿಲ್ಲ. ಹೆಚ್ಚೆಂದರೆ ಅದು ಒಂದು ತಿದ್ದುಪಡಿಯನ್ನು ಅಂತರ್ಜಾಲದಲ್ಲಿ ಬಿಡುಗಡೆ ಮಾಡಬಹುದು.

ಗುಜರಾತ್ ರಾಜ್ಯ ಪಠ್ಯಪುಸ್ತಕ ನಿರ್ದೇಶನಾಲಯದ ಕಾರ್ಯನಿರ್ವಾಹಕ ಅಧ್ಯಕ್ಷರಾದ ನಿತಿನ್ ಪಠಾಣಿ ಯವರು 'ದಿ ಹಿಂದು' ಪತ್ರಿಕೆಗೆ (೨೬-೦೨-೨೦೧೪) ಕೊಟ್ಟ ಹೇಳಿಕೆಯಲ್ಲಿ ಹೇಳಿರುವುದು ಹೀಗೆ: "ಪಠ್ಯಪುಸ್ತಕಗಳನ್ನು ಹಿಂಪಡೆಯುವ ಪ್ರಶ್ನೆಯೇ ಇಲ್ಲ; ಏಕೆಂದರೆ ಸದರಿ ಪಠ್ಯಪುಸ್ತಕಗಳಲ್ಲಿರುವುದು ಕೆಲವು ಭಾಷಾಂತರದ ತಪ್ಪುಗಳೇ ಹೊರತು ಅಂಥ ಪ್ರಮುಖ ದೋಷಗಳೇನಲ್ಲ. ಗುಜರಾತ್ ಮಕ್ಕಳ ವಿಶ್ವವಿದ್ಯಾ ನಿಲಯದ ಕುಲಪತಿಗಳಾದ ಹರ್ಷದ್ ಶಾ ಮತ್ತು ಬಾಬಾಸಾಹೇಬ್ ಅಂಬೇಡ್ಕರ್ ಮುಕ್ತವಿಶ್ವವಿದ್ಯಾನಿಲಯದ ಕುಲಪತಿಗಳಾದ ಮನೋಜ್ ಸೋನಿ ಈ ಇಬ್ಬರ ಸಮಿತಿಯು ಪಠ್ಯಪುಸ್ತಕಗಳನ್ನು ಪರಿಶೀಲಿಸುತ್ತದೆ. ಸಮಿತಿಯ ವರದಿಯು ಬಂದನಂತರ ನಾವು ತಿದ್ದುಪಡಿಯನ್ನು ಪ್ರಕಟಿಸುತ್ತೇವೆ" - ಎಂದಿದ್ದಾರೆ.

**ಬೌದ್ಧಿಕ ದಾರಿದ್ರ್ಯ:** ಸಾಮಾಜಿಕ ಮತ್ತು ರಾಜಕೀಯ ಶಾಸ್ತ್ರ ತಜ್ಞರಾದ ಅಚ್ಯುತ್ ಯಾಜ್ಞಿಕ್ ಅವರು ಪಠ್ಯಪುಸ್ತಕಗಳನ್ನು ಸಿದ್ಧಪಡಿಸಿದವರ ಬೌದ್ಧಿಕ ದಾರಿದ್ರ್ಯವನ್ನು ತೀಕ್ಷ್ಣವಾಗಿ ಖಂಡಿಸಿದ್ದಾರೆ.

"ಪಠ್ಯಪುಸ್ತಕಗಳಿಗೆ ಸಂಬಂಧಿಸಿದ ಈ ವಿಚಾರವು ಪ್ರಸ್ತುತ ವರ್ಷಕ್ಕೆ ಮಾತ್ರ ಸೀಮಿತವಾದುದಾಗಲಿ, ಹೊಸದಾಗಲಿ ಅಲ್ಲ. ಹಿಂದಿನ ವರ್ಷಗಳಲ್ಲಿಯೂ ಹೀಗೆಯೇ ಇತ್ತು", ಎಂದು 'ದಿ ಹಿಂದು' ಪತ್ರಿಕೆಗೆ ಕೊಟ್ಟ ಹೇಳಿಕೆಯಲ್ಲಿ ತಿಳಿಸಿದ್ದಾರೆ.

೭ನೇ ತರಗತಿಯ ಪಠ್ಯಪುಸ್ತಕದಲ್ಲಿ ಪ್ರಸಿದ್ಧ ಪುರಿ ಜಗನ್ನಾಥ ರಥೋತ್ಸವವನ್ನು ದಕ್ಷಿಣ ಭಾರತದ ಹಬ್ಬಗಳ ಜೊತೆಯಲ್ಲಿ ಸೇರಿಸಲಾಗಿದೆ. 'ಓಣಂ' ಮತ್ತು ದೀಪಾವಳಿ ಹಬ್ಬಗಳ ಜೊತೆಯಲ್ಲಿ ತಮಿಳುನಾಡಿನ ಭರತನಾಟ್ಯವನ್ನೂ ಆಂಧ್ರಪ್ರದೇಶದ ಕೂಚಿಪುಡಿಯನ್ನೂ ಕೇರಳಕ್ಕೆ ಸೇರಿಸಲಾಗಿದೆ.

ಭಾರತದ ಪೂರ್ವ ಭಾಗದ ಜನಜೀವನದ ಬಗೆಗೆ ಇನ್ನೂ ಕುತೂಹಲಕರವಾದ ವರ್ಣನೆಗಳಿವೆ : "ಭಾರತದ ಪೂರ್ವ ಭಾಗದಲ್ಲಿ ಹೆಚ್ಚು ಮಳೆ ಸುರಿಯುವುದರಿಂದ ಅಲ್ಲಿನ ಜನರು ಮೊಣಕಾಲಿನಿಂದ ಮೇಲಕ್ಕೆ ಬಟ್ಟೆಯನ್ನುಡುತ್ತಾರೆ. ಹೆಂಗಸರು ಒಂದು ವಿಚಿತ್ರ ರೀತಿಯಲ್ಲಿ ಸೀರೆ ಉಡುತ್ತಾರೆ." ಈ ಪಠ್ಯಪುಸ್ತಕದ ಪ್ರಕಾರ "ಪೂರ್ವ ಭಾರತದ ಅನೇಕ ಜನರು ಮರ ಮತ್ತು ಬಿದಿರು ಬಂಬುಗಳಿಂದ ಕಟ್ಟಿದ ಮನೆಗಳಲ್ಲಿ ವಾಸಿಸುತ್ತಾರೆ."

ಅಹಮದಾಬಾದ್ 'ಮ್ಯಾನೇಜ್‌ಮೆಂಟ್' ಸಂಸ್ಥೆಯ ಮಾಜಿ ನಿರ್ದೇಶಕರಾದ ಸಮೀರ್ ಬರುವಾ ಅವರು ೨೦೦೧ರಲ್ಲಿ ಪಠ್ಯಪುಸ್ತಕಗಳಲ್ಲಿನ ಲೋಪ–ದೋಷಗಳನ್ನು ಗುರುತಿಸಿ ಲೇಖನಗಳನ್ನು ಬರೆದರು. ಆಮೇಲೆ ಗುಜರಾತ್ ಸರ್ಕಾರವು ಪಠ್ಯಪುಸ್ತಕಗಳ ಪರಿಶೀಲನೆಯ ಕೆಲಸವನ್ನು ಅವರಿಗೇ ವಹಿಸಿತು. ಸಮೀರ್ ಬರುವಾ ಅವರು, "ಈ ಪಠ್ಯಪುಸ್ತಕಗಳ ತಯಾರಕರು ಆ ಕೆಲಸಕ್ಕೆ ಖಂಡಿತ ಅರ್ಹರಲ್ಲ" ಎಂದು ನಿರ್ದಾಕ್ಷಿಣ್ಯವಾಗಿ ಹೇಳುತ್ತಾರೆ.

**ಅಸಮರ್ಪಕ ಭಾಷಾಂತರ :** ಪಠ್ಯಪುಸ್ತಕಗಳಲ್ಲಿರುವ ತಪ್ಪುಗಳಿಗೆ "ಮೂಲದಲ್ಲಿ ಪಾಠಗಳು ಗುಜರಾತಿ ಭಾಷೆಯಲ್ಲಿದ್ದು ಆಮೇಲೆ ಅವುಗಳನ್ನು ಇಂಗ್ಲಿಷ್‌ಗೆ ಭಾಷಾಂತರಿಸಿರುವುದೇ ಕಾರಣವಾಗಿದೆ" – ಎಂಬ ವಿವರಣೆ ನೀಡಲಾಗಿದೆ. ಆದರೆ ಇಲ್ಲಿನ ಪಾಠಗಳನ್ನು ಸ್ಥೂಲವಾಗಿ ಓದಿದಾಗ ಕೂಡ ಇದು ತುಂಬ ಕೆಟ್ಟ ಭಾಷಾಂತರವೆಂಬುದು ತಿಳಿಯುತ್ತದೆ" – ಎನ್ನುತ್ತಾರೆ ಮಾನ್ಯ ಬರುವಾ.

ಮಾನ್ಯ ಬರುವಾ ಹೇಳಿದ ಮಾತು ಸರಿಯಾಗಿಯೇ ಇದೆ. ಈ ಕೆಲವು ಉದಾಹರಣೆಗಳನ್ನು ನೋಡಿ : "ಭೂಮಿಯು ಗುಂಡಗಿದೆಯೆಂದು ನೀವು ಕೇಳಿರಬಹುದು, ಓದಿರಬಹುದು, ನೋಡಿರಬಹುದು. ಆದರೆ ನೀವು ಭೂಮಿಯ ಮೇಲಿರುವಾಗ ಭೂಮಿಯ ಆಕಾರವು ಗೊತ್ತಾಗುವುದಿಲ್ಲ, ಏಕೆಂದರೆ ಭೂಮಿಯು ಅತ್ಯಂತ ವಿಸ್ತಾರವಾಗಿದೆ. ಭೂಮಿಯು ಗುಂಡಗಿದೆ ಎಂದು ನಮಗೇಕೆ ಅನಿಸುವುದಿಲ್ಲ ? ಭೂಮಿಯು ನಿಜವಾಗಿಯೂ ಯಾರಿಗೆ ಹಾಗಿದೆ ? ಚಂದಮಾಮ ಹೇಳುತ್ತಾನೆ "ಬನ್ನಿ, ನನ್ನ ಮೇಲೆ ಒಂದು ಅಂಚಿನಲ್ಲಿ ನಿಂತು ನೋಡಿ; ಗಗನಯಾತ್ರಿಗಳು ಆಕಾಶದಿಂದ ಭೂಮಿಯ ಛಾಯಾಚಿತ್ರವನ್ನು ತೆಗೆದಿದ್ದಾರೆ. ಅದನ್ನು ನೋಡಿ."

ಇದು ೬ನೇ ತರಗತಿಯ ಪುಠ್ಯಪುಸ್ತಕದಿಂದ ಎತ್ತಿಕೊಂಡದ್ದು ಮತ್ತೂ ಒಂದು ಉದಾಹರಣೆ : "ಭಾರತದ ಬೇರೆ ಬೇರೆ ಭಾಗಗಳ ನೆಲದಲ್ಲಿ ಗೋಧಿ, ಜವೆ, ಜೋಳ ಮೊದಲಾದ ಧಾನ್ಯಗಳು ತಮ್ಮಷ್ಟಕ್ಕೆ ತಾವೇ ಬೆಳೆಯುವುದನ್ನು ಜನರು ನೋಡಿದರು (ಆ ಕಾಲದಲ್ಲಿ). ಜನರು ಅವುಗಳನ್ನು ಸಂಗ್ರಹಿಸಿ ಆಹಾರಕ್ಕಾಗಿ ರಕ್ಷಿಸಿಟ್ಟುಕೊಂಡರು. ಆ ಕಾಲದಲ್ಲಿ ಜನರು ಪುನಃ, ಪುನಃ ಮತ್ತೂ ಪುನಃ ಪರಸ್ಪರ ಸಂಧಿಸುತ್ತಿದ್ದರು. ಆದ್ದರಿಂದ "ಸಮಾಜವಾದ"ವು ಬೆಳೆಯಿತು. ಸುಮಾರು ೨೦ ಲಕ್ಷ ವರ್ಷಗಳ ಹಿಂದಿನಿಂದ ಭಾರತದಲ್ಲಿ ಆದಿಮಾನವರ ಅವಶೇಷಗಳು ದೊರೆಯುತ್ತಿವೆ."

ಮಾನ್ಯ ಬರುವಾ ಹೇಳುತ್ತಾರೆ : "ಇಡೀ ಒಂದು ವರ್ಷ ಶ್ರಮಪಟ್ಟು ನಾನು (ಪಠ್ಯಪುಸ್ತಕಗಳನ್ನು ಪರಿಶೀಲಿಸಿ) ಕೊಟ್ಟ ಯಾವ ಸಲಹೆಯೂ ಕಾರ್ಯಗತವಾಗದಿದ್ದುದು ವಿಷಾದದ ಸಂಗತಿ. ಇದೆಲ್ಲ (ಪಠ್ಯಪುಸ್ತಕಗಳನ್ನು ನನ್ನ ಪರಿಶೀಲನೆಗೆ ಒಪ್ಪಿಸಿದುದು) ಪಠ್ಯಪುಸ್ತಕಗಳ ಬಗೆಗೆ ನಾನು ಇನ್ನಷ್ಟು ಗಲಾಟೆ ಮಾಡದಂತೆ ನನ್ನನ್ನು ಸಮಾಧಾನಪಡಿಸಲು (ನನ್ನ ಬಾಯಿಮುಚ್ಚಿಸಲು) ಹೂಡಿದ ತಂತ್ರವಾಗಿದೆ."

*ಬೆಂಗಳೂರು* **ಡಾ॥ ಕೆ. ಎಲ್. ಗೋಪಾಲಕೃಷ್ಣಯ್ಯ**

✉ 'ಈ ತಿಂಗಳು' ಲೇಖನದಲ್ಲಿ ಉಪಯುಕ್ತವಾದ ವಿಚಾರಗಳು ಪ್ರಕಟವಾಗಿವೆ. ಆಗುತ್ತಲೂ ಇವೆ. ಸಮಾಜಘಾತುಕರ, ಸ್ವಾರ್ಥ ರಾಜಕಾರಣಿಗಳ, ಅರಣ್ಯ ಸಂಪತ್ತು, ಗಣಿ ಸಂಪತ್ತನ್ನು ಲೂಟಿ ಮಾಡುವವರ ಜನ್ಮ ಜಾಲಾಡುವ ಲೇಖನಗಳು ಪ್ರಕಟಗೊಳ್ಳುತ್ತಿವೆ. 'ಪುರೋಹಿತಶಾಹಿಗಳ ಮೂಢನಂಬಿಕೆ'ಗಳಿಗೆ ತಕ್ಕ ಪಾಠ ಕಲಿಸುವ ಲೇಖನಗಳು ಪ್ರಕಟವಾಗುತ್ತಿವೆ ಹಾಗೂ ಜಿ.ಆರ್. ಅವರ 'ಋಗ್ವೇದ ಪ್ರವೇಶಿಕೆ : ಐತಿಹ್ಯ ಮತ್ತು ವಾಸ್ತವ' ಎಂಬ ಅಂಕಣದಡಿ ಪ್ರಕಟವಾಗುತ್ತಿರುವ ಲೇಖನಗಳು ಋಗ್ವೇದ ಎಂದರೇನು ಎಂಬುದರ ಗಂಧವೇ ಗೊತ್ತಿಲ್ಲದ ಎಲ್ಲಾ ಸಾಮಾನ್ಯರಿಗೆ ಗೊತ್ತಾಗುವ ರೀತಿಯಲ್ಲಿ ಸಾರ್ಥಕವಾಗಿವೆ. ಸಮಾಜ ಉದ್ಧಾರಕ್ಕೆ ಬೇಕಾಗುವ ಉಪಯುಕ್ತವಾದ ಲೇಖನಗಳು ಪ್ರಕಟಗೊಳ್ಳುತ್ತಿವೆ. ಎಲ್ಲಾ ರೀತಿಯಲ್ಲೂ ಸಮಾಜಕ್ಕೆ ಅದರ ಉದ್ಧಾರಕ್ಕೆ ಉಪಯೋಗವಾಗುವ ಸಾರ್ಥಕ ಪತ್ರಿಕೆಯಾಗಿದೆ. ವಿಜ್ಞಾನಿಗಳ ಲೇಖನಗಳಿವೆ. ಮಹಿಳೋದ್ಧಾರ ವಿಚಾರಗಳಿವೆ. ಈ ನಮ್ಮ ಪತ್ರಿಕೆಯಲ್ಲಿ ಏನಿಲ್ಲ ಅನ್ನುವ ಹಾಗಿಲ್ಲ. ಎಲ್ಲವೂ ಇವೆ. ಇದು ನನ್ನ ಅಭಿಮತ.

*ಬೆಂಗಳೂರು* **ಕು. ರಾಮಸ್ವಾಮಿ**






ಫೆಬ್ರವರಿ ೨೬ರಂದು ಮಂಗಳೂರಿನ ರವೀಂದ್ರ ಕಲಾಭವನದಲ್ಲಿ 'ಆಹಾರ ಪರಂಪರೆ ಮತ್ತು ಆರೋಗ್ಯ' ವಿಷಯದ ಕುರಿತು ಸಂವಾದ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿತ್ತು. 'ಹೊಸತು' ಪತ್ರಿಕೆ, ಸಮದರ್ಶಿ ವೇದಿಕೆ, ಮಂಗಳೂರು ವಿಶ್ವವಿದ್ಯಾಲಯ ಕಾಲೇಜಿನ ಕನ್ನಡ ಸಂಘ ಇವುಗಳ ಆಶ್ರಯದಲ್ಲಿ ನಡೆದ ಈ ಕಾರ್ಯಕ್ರಮದಲ್ಲಿ ಖ್ಯಾತ ಸಾಹಿತಿ, ಚಿಂತಕ ದೇವನೂರ ಮಹಾದೇವ, ಮಹಿಳಾ ಚಳುವಳಿಯ ದು. ಸರಸ್ವತಿ, 'ಹೊಸತು' ಸಂಪಾದಕ ಡಾ॥ ಸಿದ್ದನಗೌಡ ಪಾಟೀಲ, ಖ್ಯಾತ ವೈದ್ಯರಾದ ಡಾ॥ ಶ್ರೀನಿವಾಸ ಕಕ್ಕಿಲ್ಲಾಯ, ಪ್ರಾಂಶುಪಾಲರಾದ ಸತ್ಯನಾರಾಯಣ ಮಲ್ಲಿಪಟ್ಟಣ ಮಾತನಾಡಿದರು. ಸಂವಾದ ಕಾರ್ಯಕ್ರಮದಲ್ಲಿ ಸ್ಥಳೀಯ ಚಿಂತಕರೂ ಭಾಗವಹಿಸಿದ್ದರು. ಸಭೆಯನ್ನುದ್ದೇಶಿಸಿ ಶ್ರೀ ದೇವನೂರ ಮಾತನಾಡುತ್ತಿದ್ದಾರೆ, ಸಭಿಕರು ಆಸಕ್ತಿಯಿಂದ ಆಲಿಸುತ್ತಿದ್ದಾರೆ.

# ಸ್ವಾವಲಂಬನೆಯ ಕನಸು, ಸಾರ್ವಜನಿಕ ಕ್ಷೇತ್ರದ ಉದ್ಯಮಗಳು

ಭಾರತ ಸ್ವಾತಂತ್ರ್ಯದ ಎರಡನೇ ದಶಕವನ್ನು ಸ್ವಾತಂತ್ರ್ಯವನ್ನು ಗಟ್ಟಿಗೊಳಿಸಿದ ಕಾಲ, ಪ್ರಧಾನಿ ಜವಹರಲಾಲ್ ನೆಹರೂ ಆಡಳಿತೆಯ ಛಾಪು ಮೂಡಿಸಿದ ಕಾಲ ಎಂದು ಪರಿಗಣಿಸಬಹುದು. ರಾಜಕೀಯ ಸ್ವಾತಂತ್ರ್ಯವನ್ನು ಬಲಪಡಿಸಲು ಆರ್ಥಿಕ ಸ್ವಾತಂತ್ರ್ಯದ ಅಗತ್ಯವನ್ನು ಮನವರಿಕೆ ಮಾಡಿ, ಆ ದಿಶೆಯಲ್ಲಿ ಮೊದಲ ಹೆಜ್ಜೆ ಇರಿಸಿದ ವರ್ಷಗಳಾಗಿದ್ದುವು ಅವು. ಸಮಾಜವಾದಿ ಮಾದರಿ ಸಮಾಜ ನಿರ್ಮಾಣದ ಗುರಿಯನ್ನು ಅನುಮೋದಿಸಿದ್ದ ಸರಕಾರ ಆರ್ಥಿಕ ಸ್ವಾವಲಂಬನೆಯ ಕನಸನ್ನು ಸಾಕಾರಗೊಳಿಸುವತ್ತ ಹೊರಟಿತ್ತು. ವಿದೇಶೀ ವಿನಿಮಯದ ತೀವ್ರವಾದ ಕೊರತೆ ಇದ್ದ ಆ ದಿನಗಳಲ್ಲಿ ಅಗತ್ಯವಾದ ಎಲ್ಲ ವಸ್ತುಗಳನ್ನೂ ಎಂದರೆ ಆಹಾರ ಪದಾರ್ಥಗಳನ್ನೂ ಒಳಗೊಂಡಂತೆ ಯಂತ್ರೋಪಕರಣಗಳು, ಸಿದ್ಧವಸ್ತುಗಳು, ಸಾಮಾನು ಸರಂಜಾಮುಗಳು ಎಲ್ಲವನ್ನೂ ಆಮದು ಮಾಡಿಕೊಳ್ಳಬೇಕಾಗಿತ್ತು. ೧೯೫೦ರಲ್ಲಿ ಶೇ. ೮೯.೯ರಷ್ಟು ಅಗತ್ಯವಸ್ತುಗಳನ್ನು ಬೇರೆ ದೇಶಗಳಿಂದ ಭಾರತ ಆಮದು ಮಾಡಿಕೊಳ್ಳುತ್ತಿತ್ತು. ೧೯೬೦ರ ವೇಳೆಗೆ ಈ ಪ್ರಮಾಣ ಶೇ. ೪೩ಕ್ಕೆ ಇಳಿಯಿತು. ೧೯೭೦ರ ವೇಳೆಗೆ ಭಾರತ ಶೇ. ೯೦ರಷ್ಟು ನಿತ್ಯೋಪಯೋಗಿ ವಸ್ತುಗಳನ್ನು ತಯಾರಿಸಿಕೊಳ್ಳಲು ಸಮರ್ಥವಾಗಿತ್ತು. ಆದರೆ ಯಂತ್ರೋಪಕರಣಗಳಿಗೆ, ತಂತ್ರಜ್ಞಾನಕ್ಕೆ, ಹಾಗೂ ಇತರ ಪರಿಕರಗಳಿಗೆ ಅಭಿವೃದ್ಧಿ ಹೊಂದಿದ ದೇಶಗಳ ಮೇಲೇ ಅವಲಂಬಿತವಾಗಿತ್ತು.

ಮೊದಲನೇ ಪಂಚವಾರ್ಷಿಕ ಯೋಜನೆಯ ಕಾಲದಲ್ಲಿ ಆಹಾರದ ಕೊರತೆ ತಕ್ಕಮಟ್ಟಿಗೆ ನೀಗಿದ್ದರೂ ಅಮೇರಿಕದಿಂದ ಪಿಎಲ್-೪೮೦ ಯೋಜನೆಯಡಿಯಲ್ಲಿ ಗೋಧಿ ಆಮದು ಮುಂದುವರಿದಿತ್ತು. ಅಭಿವೃದ್ಧಿಹೊಂದಿದ ದೇಶಗಳಾಗಿದ್ದ ಯೂರೋಪು, ಅಮೇರಿಕಗಳಿಗೆ ಭಾರತ ಲಾಭದಾಯಕವಾದ ಮಾರುಕಟ್ಟೆಯಾಗಿತ್ತು. ಪ್ರಭುತ್ವ ಕ್ಷೇತ್ರದಲ್ಲಿ ಹಿಂದೂಸ್ತಾನ್ ಮೆಷಿನ್ ಟೂಲ್ಸ್, ಇಂಡಿಯನ್ ಟೆಲಿಫೋನ್ ಇಂಡಸ್ಟ್ರೀಸ್ ಮುಂತಾದ ಕಾರ್ಖಾನೆಗಳು ಸ್ಥಾಪನೆಯಾಗಿತ್ತಾದರೂ ದೊಡ್ಡ ಪ್ರಮಾಣದಲ್ಲಿ ಸರಕಾರ ಕೈಗಾರಿಕಾ ಕ್ಷೇತ್ರದಲ್ಲಿ ಬಂಡವಾಳ ಹೂಡಲು ಮುಂದೆ ಬಂದದ್ದು ಎರಡನೇ ಪಂಚವಾರ್ಷಿಕ ಯೋಜನೆಯನ್ನು ಕಾರ್ಯಗತ ಮಾಡಲು ಹೊರಟಾಗಲೆ. ಗಾತ್ರದಲ್ಲಿ ಮೊದಲನೇ ಯೋಜನೆಗಿಂತ ಎರಡರಷ್ಟು ದೊಡ್ಡದಾಗಿದ್ದ ಎರಡನೇ ಪಂಚವಾರ್ಷಿಕ ಯೋಜನೆ ಒತ್ತುಕೊಟ್ಟಿದ್ದು ದೇಶದ ಕೈಗಾರಿಕಾ ಕ್ಷೇತ್ರಕ್ಕೆ ಭದ್ರವಾದ ನೆಲೆ ಒದಗಿಸುವುದಕ್ಕೆ. ಸ್ವಾವಲಂಬನೆಯ ಮಂತ್ರ ಜಪಿಸಿದ ಸರಕಾರ ಈ ಯೋಜನೆಯಲ್ಲಿ ಘನ ಕೈಗಾರಿಕೆಗಳ ಸ್ಥಾಪನೆಗೆ, ಮುಖ್ಯವಾಗಿ ಉಕ್ಕಿನ ತಯಾರಿಕೆಗೆ, ರಸಗೊಬ್ಬರಗಳ ಉತ್ಪಾದನೆಗೆ, ಇತರ ಉದ್ಯಮಗಳ ಸ್ಥಾಪನೆಗೆ ಪ್ರಾಧಾನ್ಯತೆ ನೀಡಿತು. ಅಂಥ ಕೈಗಾರಿಕೆಗಳ ಸ್ಥಾಪನೆಗೆ ಅಗತ್ಯವಾದ ಬಂಡವಾಳ ಹೂಡಲು ಸರಕಾರವೇ ಮುಂದೆ ಬಂದಿತು. ಭಾರತದಲ್ಲಿ ಆಗತಾನೆ ಸ್ಥಾಪನೆಗೊಂಡಿದ್ದ ಸಂಖ್ಯಾ ವಿಜ್ಞಾನ ಸಂಸ್ಥೆಯ ಮುಖ್ಯಸ್ಥರಾಗಿದ್ದ ಪ್ರೊ॥ ಮಹಾಲನೋಬಿಸ್ ನೇತೃತ್ವದಲ್ಲಿ ರೂಪಿಸಲಾದ ಯೋಜನೆಯು ಸಾಕಷ್ಟು ವಿವಾದಗಳನ್ನು ಸೃಷ್ಟಿಸಿತು. ಸರಕಾರ ನೇರವಾಗಿ ಕೈಗಾರಿಕಾ ಕ್ಷೇತ್ರದಲ್ಲಿ ಪ್ರವೇಶಿಸುವುದನ್ನು ಭಾರತದ ಉದ್ಯಮಿಗಳು ತೀವ್ರವಾಗಿ ವಿರೋಧಿಸಿದರು. ಬಂಡವಾಳಶಾಹಿ ದೇಶಗಳ ಮಟ್ಟಿಗೆ ಭಾರತದಂಥ ದೊಡ್ಡ ಮಾರುಕಟ್ಟೆ ಕಳೆದುಕೊಳ್ಳುವ ಆತಂಕ ಇತ್ತು. ಹಾಗಾಗಿ ಅವು ಉತ್ಸಾಹ ತೋರಲಿಲ್ಲ. ಅಗತ್ಯ ವಸ್ತುಗಳನ್ನು ಪೂರೈಸಲು ತಾವು ಸಿದ್ಧವಾಗಿರುವಾಗ ಸರಕಾರ ಏಕೆ ಪ್ರವೇಶಿಸಬೇಕೆಂಬುದು ಪಾಶ್ಚಾತ್ಯ ದೇಶಗಳ ಆಕ್ಷೇಪ. ಪ್ರಭುತ್ವ ಬಂಡವಾಳ ವ್ಯವಸ್ಥೆಯ ಸ್ಥಾಪನೆಗೆ ನಾಂದಿ ಎಂಬ ಟೀಕೆಯು ಪ್ರಬಲವಾಗಿತ್ತು.

ಎರಡನೇ ಪಂಚವಾರ್ಷಿಕ ಯೋಜನೆಯ ಕರಡು ಸಿದ್ಧವಾದ ಮೇಲೆ ದೇಶಾದ್ಯಂತ ಅದು ತೀವ್ರವಾದ ವಾದವಿವಾದಗಳಿಗೆ ಎಡೆಕೊಟ್ಟಿತು. ಕೊರತೆ ಬಜೆಟ್ ತಯಾರಿಕೆಯ ಪರಿಕಲ್ಪನೆಯೂ ಚರ್ಚೆಗೆ ಗ್ರಾಸವಾಗಿತ್ತು. ಭಾರತೀಯ ಉದ್ಯಮಿಗಳ ಸಂಸ್ಥೆ 'ಫಿಕಿ' ಸರಕಾರ ಉದ್ಯಮ ಕ್ಷೇತ್ರದಲ್ಲಿ ಪ್ರವೇಶಿಸುವುದನ್ನು ಉಗ್ರವಾಗಿ ವಿರೋಧಿಸಿದ್ದಲ್ಲದೆ, ಒಂದು ಚಳವಳಿಯನ್ನೇ ಪ್ರಾರಂಭಿಸಿತು. ಹೆಚ್ಚು ಲಾಭದಾಯಕವಲ್ಲದ ಬೃಹತ್ ಉದ್ಯಮಗಳ ಸ್ಥಾಪನೆಗೆ ತಮ್ಮ ಕೈಯಲ್ಲಿ ಬಂಡವಾಳವಿಲ್ಲದಿದ್ದರೂ ಸರಕಾರ ತಾನೇ ಅಂಥ ಕೈಗಾರಿಕೆಗಳ ಪ್ರಾರಂಭಕ್ಕೆ ಮುಂದಾಗುವ ಬದಲು ದೀರ್ಘಾವಧಿ ಸಾಲ ನೀಡಿಕೆಗೆ ಅವಕಾಶ ನೀಡಬೇಕೆಂಬ ಅಪೇಕ್ಷೆ ಭಾರತೀಯ ಉದ್ಯಮಿಗಳದ್ದಾಗಿತ್ತು. ಈ ಉದ್ಯಮಿಗಳ ವಕ್ತಾರ ಖ್ಯಾತ ವಕೀಲ ನಾನಿ ಪಾಲ್ಕಿವಾಲ ದೇಶದ ಎಲ್ಲ ಪ್ರಮುಖ ನಗರಗಳಿಗೂ ಭೇಟಿ ನೀಡಿ ಉಪನ್ಯಾಸಗಳನ್ನೂ ನೀಡಿ ಯೋಜನೆಯನ್ನು ವಿರೋಧಿಸಿದ್ದರು. ಬೆಂಗಳೂರಿಗೂ ಅವರು ಬಂದಿದ್ದರು. ಕರ್ನಾಟಕ ರಾಜ್ಯ ವಾಣಿಜ್ಯ ಸಂಸ್ಥೆ ಅವರಿಗೆ ಬೆಂಬಲ ನೀಡಿತ್ತು. ಆ ದಿನಗಳಲ್ಲಿ ಸ್ಟೇಟ್ ಬ್ಯಾಂಕ್ ಆಫ್ ಮೈಸೂರಿನ ಜನರಲ್ ಮ್ಯಾನೇಜರಾಗಿದ್ದ ನಾರಾಯಣ ರೆಡ್ಡಿಯವರು ಈ ವಿರೋಧದಲ್ಲಿ ಸಕ್ರಿಯವಾದ ಪಾತ್ರವಹಿಸಿದ್ದು ನೆನಪಿನಲ್ಲಿದೆ. 'ಫಿಕಿ'ಯ ಈ ಆರ್ಭಟವನ್ನು ವಿರೋಧವನ್ನು ಎದುರಿಸಲು ಪ್ರೊ॥ ಮಹಾಲನೋಬಿಸ್ ಕೂಡ ಎರಡನೇ ಯೋಜನೆಗೆ ಜನ ಬೆಂಬಲ ಪಡೆಯಲು ದೇಶಾದ್ಯಂತ ಪ್ರವಾಸ ಕೈಗೊಂಡಿದ್ದರು. ಎಡಪಕ್ಷಗಳು ಯೋಜನೆಗೆ ಬೆಂಬಲ ನೀಡಿದರೆ, ಬಲಪಂಥೀಯ ಪಕ್ಷಗಳು ವಿರೋಧಿಸಿದ್ದರಲ್ಲಿ ಅತಿಶಯವೇನಿಲ್ಲ. ಅಂತೂ ಈ ಯೋಜನೆ ಏನೇ ವಿವಾದ ಸೃಷ್ಟಿಸಿದರೂ ದೇಶದ ಔದ್ಯೋಗೀಕರಣಕ್ಕೆ, ಸಾರ್ವಜನಿಕ ಕ್ಷೇತ್ರದ ಉದ್ಯಮಗಳ ವಿಸ್ತರಣೆಗೆ ಬುನಾದಿ ನಿರ್ಮಿಸಿತು.

ಈ ಯೋಜನೆಯನ್ನು ಕಾರ್ಯಗತ ಮಾಡಲು ನೆರವು ಪಡೆದುಕೊಳ್ಳಲು ನೆಹರೂ ಸರಕಾರ ಮೊದಲು ಕೈಚಾಚಿದ್ದು ಪಶ್ಚಿಮ ರಾಷ್ಟ್ರಗಳ ಮುಂದೆ. "ನಮ್ಮ ಆರ್ಥಿಕ ನೀತಿಯು ಯಥಾರ್ಥವಾಗಿಯೇ ಇಂಗ್ಲೆಂಡ್ ಮತ್ತು ಪಶ್ಚಿಮ ರಾಷ್ಟ್ರಗಳೊಂದಿಗೆ ಹೆಣೆದುಕೊಂಡಿದೆ" ಎಂಬುದು ಪ್ರಧಾನಿ ಜವಹರಲಾಲ್ ನೆಹರೂ ಅವರ ದೃಢವಾದ ನಂಬಿಕೆಯಾಗಿತ್ತು. ಭಾರತದಲ್ಲಿ ಉಕ್ಕಿನ ಕಾರ್ಖಾನೆ ಸ್ಥಾಪನೆಗೆ ಅಮೇರಿಕ ಮತ್ತು ಪಶ್ಚಿಮ ರಾಷ್ಟ್ರಗಳು ಮುಂದೆ ಬಾರದಿದ್ದಾಗ ನೆಹರೂ ಬೆಂಬಲಕ್ಕೆ ಬಂದದ್ದು ಅಂದಿನ ಸೋವಿಯೆತ್ ಒಕ್ಕೂಟ. ಭಾರತದ ಕೈಗಾರಿಕಾಭಿವೃದ್ಧಿಗೆ ಅಗತ್ಯವಾಗಿದ್ದುದು ಉಕ್ಕು. ದೇಶದಲ್ಲಿ ಹೇರಳವಾಗಿ ಕಬ್ಬಿಣದ ಅದಿರು ಲಭ್ಯವಿದ್ದಾಗ್ಯೂ ಉಕ್ಕಿಗೆ ಪರಾವಲಂಬನೆಯೇ ಗತಿಯಾಗಿತ್ತು. ಸ್ವಾತಂತ್ರ್ಯ ಬಂದಾಗ ಭಾರತದಲ್ಲಿ ಇದ್ದುದು ಟಾಟಾ ಕಂಪನಿ ಜೆಮ್ಷೆಡ್‌ಪುರದಲ್ಲಿ ಸ್ಥಾಪಿಸಿದ್ದ ಟಾಟಾ ಕಬ್ಬಿಣ ಮತ್ತು ಉಕ್ಕಿನ


ಗಮಾಲ್ ಅಬ್ದುಲ್ ನಾಸಿರ್, ಜವಹರಲಾಲ್ ನೆಹರು, ಜೋಸೆಫ್ ಬ್ರೋಜ್ ಟಿಟೋ

ಸಿ. ಆರ್. ಕೃಷ್ಣರಾವ್



ಭಿಲೈ ಉಕ್ಕಿನ ಕಾರ್ಖಾನೆ

ಕಾರ್ಖಾನೆ ಮತ್ತು ದಕ್ಷಿಣ ಭಾರತದಲ್ಲಿ ಮೈಸೂರು ರಾಜ್ಯದ ಭದ್ರಾವತಿಯಲ್ಲಿ ಸರಕಾರ ಸ್ಥಾಪಿಸಿದ್ದ ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆ ಮಾತ್ರ. ಇವುಗಳ ಉತ್ಪಾದನೆ ಪ್ರಮಾಣವೂ ಹೆಚ್ಚಿರಲಿಲ್ಲ. ಟಾಟಾ ಕಂಪನಿ ೧.೨ ಮಿಲಿಯ ಟನ್ ಉಕ್ಕು ಉತ್ಪಾದನೆ ಮಾಡುತ್ತಿದ್ದರೆ, ಭದ್ರಾವತಿಯ ಕಾರ್ಖಾನೆಯ ಉತ್ಪಾದನೆ ಇನ್ನೂ ಕಡಿಮೆ ಇತ್ತು. ಸ್ವಾತಂತ್ರ್ಯಾನಂತರ ಸ್ಥಾಪನೆಗೊಂಡು ಮೊದಲ ಉಕ್ಕಿನ ಕಾರ್ಖಾನೆ ಮಧ್ಯಪ್ರದೇಶದಲ್ಲಿ ಸೋವಿಯೆತ್ ಒಕ್ಕೂಟದ ನೆರವಿನಿಂದ ಸ್ಥಾಪನೆಗೊಂಡ ಭಿಲಾಯ್ ಉಕ್ಕಿನ ಕಾರ್ಖಾನೆ. ಅದು ವರ್ಷಕ್ಕೆ ೨.೫ ಮಿಲಿಯ ಟನ್ ಉತ್ಪಾದನಾ ಸಾಮರ್ಥ್ಯ ಹೊಂದಿತ್ತು. ಇದು ವಿಸ್ತಾರಗೊಂಡು ಉತ್ಪಾದನೆ ಪ್ರಮಾಣವೂ ಏಳು ಮಿಲಿಯ ಟನ್‌ನಷ್ಟು ಹೆಚ್ಚಾಗಿದೆ. ಭಿಲಾಯ್ ಉಕ್ಕಿನ ಕಾರ್ಖಾನೆ ಬಂದಮೇಲೆ ಒಡಿಸ್ಸಾದ ರೂರ್ಕೆಲಾದಲ್ಲಿ ಜರ್ಮನಿ, ಪಶ್ಚಿಮ ಬಂಗಾಳದ ದುರ್ಗಾಪುರದಲ್ಲಿ ಬ್ರಿಟನ್ನಿನ ನೆರವಿನಿಂದ ಉಕ್ಕಿನ ಕಾರ್ಖಾನೆಗಳು ಸ್ಥಾಪನೆಗೊಂಡುವು. ಎರಡನೇ ಪಂಚವಾರ್ಷಿಕ ಯೋಜನೆಯ ಅವಧಿಯಲ್ಲಿ ಹಾಗೂ ಅನಂತರದ ಯೋಜನೆಗಳ ಅವಧಿಯಲ್ಲಿ ಘನ ವಿದ್ಯುತ್ ಯಂತ್ರಗಳ ತಯಾರಿಕೆ ಕಾರ್ಖಾನೆ, ಕಲ್ಲಿದ್ದಲ ಗಣಿಗಾರಿಕೆ, ವಿದ್ಯುದುತ್ಪಾದನೆ, ಔಷಧಗಳ ತಯಾರಿಕೆ ಕಾರ್ಖಾನೆ ಹೀಗೆ ಹಲವಾರು ಉದ್ಯಮಗಳು ಭಾರತದ ಸಾರ್ವಜನಿಕ ಕ್ಷೇತ್ರದಲ್ಲಿ ಸ್ಥಾಪನೆಗೊಂಡವು. ಉದ್ಯಮಗಳ ಸ್ಥಾಪನೆಗೆ ಸೋವಿಯೆತ್ ಒಕ್ಕೂಟ ಮತ್ತು ಸಮಾಜವಾದಿ ದೇಶಗಳ ಸಹಕಾರ ಗಮನಾರ್ಹವಾಗಿತ್ತು.

ಭಾರತದಲ್ಲಿ ಲಾಭದಾಯಕವಾಗಿ ರೂಢಿಸಬಹುದಾದ ತೈಲ ನಿಕ್ಷೇಪ ಇಲ್ಲ ಎನ್ನುವುದು ಅಮೆರಿಕ ಮತ್ತು ಬ್ರಿಟನ್ನಿನ ತಜ್ಞರ ಅಭಿಪ್ರಾಯವಾಗಿತ್ತು. ಅಸ್ಸಾಮಿನ ದಿಗ್ಬೋಯ್‌ನಲ್ಲಿದ್ದ ತೈಲಬಾವಿಗಳನ್ನು ಬಿಟ್ಟರೆ ಭಾರತದಲ್ಲಿ ಬೇರಾವುವೂ ಇರಲಿಲ್ಲ. ಇವೂ ಕೂಡ ಬ್ರಿಟನ್ನಿನ ಬರ್ಮಾ ಆಯಿಲ್ ಕಂಪನಿಗೇ ಸೇರಿತ್ತು. ಭಾರತಕ್ಕೆ ಅಗತ್ಯವಾದ ತೈಲ ಸರಬರಾಜು ಆಗುತ್ತಿದ್ದುದು ಬ್ರಿಟನ್, ಅಮೆರಿಕಗಳ ಒಡೆತನದಲ್ಲಿದ್ದ ಬರ್ಮಾಷೆಲ್, ಕಾಲ್ಟೆಕ್ಸ್ ಮೊದಲಾದ ತೈಲ ಗುತ್ತೇದಾರಿ ಸಂಸ್ಥೆಗಳಿಂದ. ಈ ಅತಿ ಮುಖ್ಯವಾದ ಕ್ಷೇತ್ರದ ಅಭಿವೃದ್ಧಿಗೆ ಸಹಕರಿಸಿದ್ದು ಆಗಿನ ಸೋವಿಯೆತ್ ಒಕ್ಕೂಟ. ಅತಿ ಕಡಿಮೆ ಬಡ್ಡಿ ದರದಲ್ಲಿ ಸಾಲ ನೀಡಿದ್ದಲ್ಲದೆ, ಮರುಪಾವತಿಯನ್ನು ರೂಪಾಯಿಗಳಲ್ಲೇ ಪಡೆದುಕೊಳ್ಳಲು ಅದು ಮುಂದಾಯಿತು. ಸುಮಾರು ೮೫೦ ಮಿಲಿಯ ರೂಪಾಯಿಗಳ ಸಾಲವನ್ನು ಈ ಕ್ಷೇತ್ರಕ್ಕೆ ನೀಡಲಾಯಿತೆಂದು ಅಂದಾಜು. ೧೯೫೫ರಲ್ಲಿ ಭಾರತ ಸರಕಾರ ತೈಲ ಮತ್ತು ಇಂಧನಾನಿಲ ಆಯೋಗವನ್ನು ಸ್ಥಾಪಿಸಿ, ತೈಲೋದ್ಯಮವನ್ನು ಸಾರ್ವಜನಿಕ ಕ್ಷೇತ್ರದಲ್ಲೇ ಇರಿಸಿಕೊಂಡಿತು. ಈಗ ಪರಿಸ್ಥಿತಿ ಬೇರೆಯಾಗಿದ್ದು ಖಾಸಗಿಯವರು ದೊಡ್ಡ ಪ್ರಮಾಣದಲ್ಲಿ ಪ್ರವೇಶಿಸಿದ್ದಾರೆ. ಅದನ್ನು ಮುಂದೆ ಪರಿಶೀಲಿಸೋಣ. ಪಂಜಾಬ್, ಅಸ್ಸಾಮ್, ಪಶ್ಚಿಮ ಕರಾವಳಿ ಪ್ರದೇಶದಲ್ಲಿರುವ ಕ್ಯಾಂಬೆಯಲ್ಲಿ ತೈಲಾನ್ವೇಷಣೆ ನಡೆದು, ತೈಲನಿಕ್ಷೇಪ ಪತ್ತೆಯಾಗಿ ೧೯೬೦ರಲ್ಲಿ ಉತ್ಪಾದನೆಯೂ ಪ್ರಾರಂಭವಾಯಿತು. ಇದರ ಜೊತೆಗೆ ಸರಕಾರ ತೈಲ ಸಂಸ್ಕರಣಾಗಾರವನ್ನು ಸ್ಥಾಪಿಸಿತು. ವರ್ಷಕ್ಕೆ ೬ ಮಿಲಿಯ ಟನ್ ತೈಲ ಸಂಸ್ಕರಿಸುವ ಮಧುರಾ ರಿಫೈನರಿ ಅತಿ ದೊಡ್ಡದು. ದೇಶದ ಅಗತ್ಯವನ್ನು ಪೂರೈಸದೇ ಹೋದರೂ ವಿದೇಶೀ ತೈಲ ಕಂಪನಿಗಳ ಮೇಲೆ ಅವಲಂಬನೆಯನ್ನೂ ಸ್ವಲ್ಪಮಟ್ಟಿಗೆ ಕಡಿಮೆ ಮಾಡಿತು. ಈಗ ಅನೇಕ ಕಡೆ ಇಂಧನಾನಿಲ ಪತ್ತೆಯಾಗಿರುವುದನ್ನು ನಾವು ಕಾಣುತ್ತಿದ್ದೇವೆ. ಇಂಡಿಯನ್ ಆಯಿಲ್ ಕಂಪನಿ, ಇಂಡೇನ್ ಗ್ಯಾಸ್ ಕಂಪನಿಗಳನ್ನು ಸ್ಥಾಪಿಸಿ ದೇಶಾದ್ಯಂತ ತೈಲ ಹಾಗೂ ಇಂಧನಾನಿಲವನ್ನು ವಿತರಿಸಲಾಗುತ್ತಿದೆ.

ಬೃಹತ್ ಕೈಗಾರಿಕೆಗಳು ಸ್ಥಾಪನೆಯಾಗುತ್ತಿದ್ದಂತೆಯೇ ಅದಕ್ಕೆ ಪೂರಕವಾಗಿ ಆನುಷಂಗಿಕ ಉದ್ಯಮಗಳೂ ಪ್ರಾರಂಭವಾದುವು. ಸಣ್ಣ ಕೈಗಾರಿಕೆಗಳ ಸ್ಥಾಪನೆಗೆ ಸರಕಾರ ಅಗತ್ಯವಾದ ನೆರವು ನೀಡಿದ್ದರಿಂದ ತ್ವರಿತ ಬೆಳವಣಿಗೆ ಸಾಧ್ಯವಾಯಿತು. ಉದ್ಯೋಗಾವಕಾಶ ಹೆಚ್ಚಿತಲ್ಲದೆ ಸುತ್ತಮುತ್ತ ನಗರಗಳೂ ಬೆಳೆದವು. ೧೯೪೮ರಲ್ಲೇ ವಿಜ್ಞಾನಿ ಹೋಮಿ ಭಾಭಾ ನೇತೃತ್ವದಲ್ಲಿ ಭಾರತ ಸರಕಾರ ಪರಮಾಣುಶಕ್ತಿ ಆಯೋಗ ಸ್ಥಾಪಿಸಿತ್ತು. ಪರಮಾಣುಶಕ್ತಿಯನ್ನು ಶಾಂತಿಯುತ ಉದ್ದೇಶಗಳಿಗಾಗಿ ಮುಖ್ಯವಾಗಿ ವಿದ್ಯುಚ್ಛಕ್ತಿ ಉತ್ಪಾದನೆಗೆ ಬಳಸಿಕೊಳ್ಳುವ ಯೋಜನೆ. ೧೯೫೪ರಲ್ಲಿ ಈ ಆಯೋಗವನ್ನು ಒಂದು ಪ್ರತ್ಯೇಕ ಸರಕಾರಿ ಇಲಾಖೆಯಾಗಿ ಮಾರ್ಪಡಿಸಲಾಯಿತು. ೧೯೫೬ರಲ್ಲಿ ಏಷಿಯಾದಲ್ಲೇ ಪ್ರಥಮ ಎನಿಸಿಕೊಂಡ ಟ್ರಾಂಬೇ ನ್ಯೂಕ್ಲಿಯರ್ ವಿದ್ಯುತ್ ಉತ್ಪಾದನಾ ಕೇಂದ್ರ ಸ್ಥಾಪನೆಗೊಂಡಿತು. ಇಷ್ಟೆಲ್ಲ ಅಭಿವೃದ್ಧಿ ಕಾರ್ಯಗಳ ಜೊತೆಗೆ ಶಿಕ್ಷಣ ಕ್ಷೇತ್ರದ ವಿಸ್ತರಣೆಗೆ ಅಗತ್ಯವಾದ ಆದ್ಯತೆ ನೀಡಲಾಯಿತು. ಬ್ರಿಟಿಷ್ ಆಡಳಿತದ ಕಾಲದಲ್ಲಿ ಕಾರಕೂನರ ತರಬೇತಿಗೆ ಪ್ರಾಶಸ್ತ್ಯ ನೀಡಲಾಗಿತ್ತೇ ಹೊರತು, ಸಾರ್ವತ್ರಿಕ ಶಿಕ್ಷಣಕ್ಕೆ ಆದ್ಯತೆ ನೀಡಿರಲಿಲ್ಲ. ಅದರಲ್ಲೂ ತಾಂತ್ರಿಕ ಶಿಕ್ಷಣ ತುಂಬಾ ಸೀಮಿತವಾಗಿತ್ತು. ೧೯೫೧-೫೨ರಲ್ಲಿ ಸರಕಾರ ಶಿಕ್ಷಣ ಕ್ಷೇತ್ರಕ್ಕೆ ೧೯೮ ಮಿಲಿಯ ರೂ.ಗಳನ್ನು ವಿನಿಯೋಗಿಸಿದರೆ ಅದು ೧೯೬೪-೬೫ರಲ್ಲಿ ೧೪೬೨.೭ ಮಿಲಿಯ ರೂ.ಗಳಿಗೆ ಏರಿತ್ತು. ೧೯೫೧ ಮತ್ತು ೧೯೬೧ರ ಅವಧಿಯಲ್ಲಿ ಶಾಲಾ ವಿದ್ಯಾರ್ಥಿಗಳ ಸಂಖ್ಯೆ ದ್ವಿಗುಣಗೊಂಡಿತ್ತು. ಸರಕಾರ ನೀಡುತ್ತಿದ್ದ ಅನುದಾನ ಬಳಸಿಕೊಂಡು ಖಾಸಗೀ ಸಂಸ್ಥೆಗಳು ಪ್ರಾಥಮಿಕ ಕ್ಷೇತ್ರದಿಂದ ಉನ್ನತ ಶಿಕ್ಷಣದವರೆಗೆ ಬೆಳೆದವು. ಇದರೊಂದಿಗೇ ತಾಂತ್ರಿಕ ಶಿಕ್ಷಣದಲ್ಲಿ, ಮುಖ್ಯವಾಗಿ ಇಂಜಿನಿಯರಿಂಗ್, ವೈದ್ಯಕೀಯ ಕ್ಷೇತ್ರದಲ್ಲಿ ಕ್ಯಾಪಿಟೇಶನ್ ಶುಲ್ಕ ವಸೂಲಿ ಮಾಡುವ ಪಿಡುಗೂ ಬೆಳೆಯಿತು. ಕ್ರಮೇಣ ದೇಶದಲ್ಲಿ ಸಾಕ್ಷರತೆ ಹೆಚ್ಚುತ್ತಿದ್ದ ಹಾಗೆಯೇ, ಉನ್ನತ ಶಿಕ್ಷಣವನ್ನು ಒಳಗೊಂಡ ಹಾಗೆ ಎಲ್ಲವೂ ವ್ಯಾಪಾರೋದ್ಯಮವಾಗಿ ಬೆಳೆದದ್ದು ವಿಪರ್ಯಾಸ.

ಸ್ವತಂತ್ರ ಭಾರತದ ಎರಡನೇ ಚುನಾವಣೆಗಳು ನಡೆದದ್ದು ೧೯೫೭ರಲ್ಲಿ. ಫಲಿತಾಂಶಗಳನ್ನು ಅವಲೋಕಿಸಿದಲ್ಲಿ ಹೆಚ್ಚಿನ ವ್ಯತ್ಯಾಸವೇನಿರಲಿಲ್ಲ. ಹಿಂದಿನ ಚುನಾವಣೆಗೆ ಹೋಲಿಸಿದಲ್ಲಿ ಕಾಂಗ್ರೆಸ್ ಹೆಚ್ಚು ಸ್ಥಾನಗಳನ್ನು ಪಡೆದುಕೊಂಡಿದ್ದಿತಲ್ಲದೆ ಕೇರಳ ರಾಜ್ಯವೊಂದನ್ನು ಬಿಟ್ಟು ಉಳಿದೆಲ್ಲ ಕಡೆಗಳಲ್ಲಿ ಬಹುಮತ ಗಳಿಸಿಕೊಂಡಿತ್ತು. ೧೯೫೨ರ ಚುನಾವಣೆಗಳಲ್ಲೇ ಕಾಂಗ್ರೆಸ್ ಅಂದಿನ ಮದರಾಸು ಪ್ರಾಂತದಲ್ಲಿ ಅತಿ ದೊಡ್ಡ ಪಕ್ಷವಾಗಿತ್ತೇ ಹೊರತು ಬಹುಮತ ಗಳಿಸಿರಲಿಲ್ಲ. ಈಗಿನ ಕೇರಳ ಮತ್ತು ಅಂಧ್ರಪ್ರದೇಶದಲ್ಲಿ ಹಾಗೂ ತಮಿಳುನಾಡಿನಲ್ಲಿ ಭಾಗಶಃ ಕಮ್ಯುನಿಸ್ಟ್ ಪಕ್ಷ ಪ್ರಬಲವಾಗಿತ್ತು. ದ್ರಾವಿಡ ಕಳಗಂ ಪಕ್ಷ ಚುನಾವಣೆಯಲ್ಲಿ ಭಾಗವಹಿಸದೇ ಇದ್ದರೂ


ಅಂಕಲೇಶ್ವರ ತೈಲ ಸಂಸ್ಕರಣಾಗಾರ

ಅದರ ಒಂದು ವಿಭಾಗ ಹೊರಬಂದು ಚುನಾವಣೆಯಲ್ಲಿ ಭಾಗವಹಿಸಿತ್ತು. ಇದು ಪ್ರಾದೇಶಿಕ ಪಕ್ಷ ಆ ಪ್ರಾಂತದಲ್ಲಿ ಬಲಗೊಳ್ಳಲು, ಮುಂದೆ ಅಧಿಕಾರ ಗ್ರಹಣ ಮಾಡಲು ಮೊದಲ ಹೆಜ್ಜೆಯಾಗಿತ್ತು. ೧೯೫೭ರಲ್ಲೇ ಚುನಾವಣೆಗಳ ನಂತರ ಸಂಯುಕ್ತರಂಗದ ಸರಕಾರ ಸ್ಥಾಪಿಸಲು ಮದರಾಸು ಪ್ರಾಂತದಲ್ಲಿ ಪ್ರಯತ್ನ ನಡೆದಿತ್ತು. ಆದರೆ ಕಾಂಗ್ರೆಸ್ಸಿನ ಕುತಂತ್ರದಿಂದ ಅದು ಫಲಕಾರಿಯಾಗಲಿಲ್ಲ. ಸ್ವತಂತ್ರ ಭಾರತದ ಮೊದಲ ಗವರ್ನರ್ ಜನರಲ್ ಆಗಿದ್ದ ಚಕ್ರವರ್ತಿ ರಾಜಗೋಪಾಲಾಚಾರಿಯನ್ನು ಹಿಂಬಾಗಿಲಿನಿಂದ ತಂದು ಮುಖ್ಯಮಂತ್ರಿ ಪಟ್ಟ ಕಟ್ಟಿ ಕಾಂಗ್ರೆಸ್ ಆಗ ಸರಕಾರ ಸ್ಥಾಪಿಸಿತ್ತು. ೧೯೫೭ರ ಚುನಾವಣೆಗಳಲ್ಲಿ ಕೇರಳ ರಾಜ್ಯದಲ್ಲಿ ಭಾರತದಲ್ಲೇ ಮೊದಲ ಬಾರಿಗೆ ಚುನಾವಣೆ ಮೂಲಕ ಕಮ್ಯುನಿಸ್ಟ್ ಪಾರ್ಟಿ ಬಹುಮತ ಗಳಿಸಿ ಸರಕಾರ ರಚಿಸಿತು. ಭಾರತ ಕಮ್ಯುನಿಸ್ಟ್ ಪಕ್ಷದ ನಾಯಕ ಇ.ಎಂ.ಎಸ್. ನಂಬೂದಿರಿಪಾದ್ ನಾಯಕತ್ವದಲ್ಲಿ ಕೇರಳದಲ್ಲಿ ಸರಕಾರದ ರಚನೆಯಾಯಿತು. ಆದರೆ ಈ ಸರಕಾರ ತನ್ನ ಪೂರ್ಣಾವಧಿ ಮುಗಿಸಲು ಅವಕಾಶವಾಗಲಿಲ್ಲ, ಬಲಪಂಥೀಯರು ಮತ್ತು ಮತೀಯತೆಯನ್ನು ಬಳಸಿಕೊಂಡು ಕಾಂಗ್ರೆಸ್ ಸರಕಾರ ಉರುಳಿಸಲು ಕುತಂತ್ರ ನಡೆಸಿ ಯಶಸ್ವಿಯಾಯಿತು. ಕೇಂದ್ರದಲ್ಲಿ ಅಧಿಕಾರದಲ್ಲಿದ್ದ ಕಾಂಗ್ರೆಸ್ ಸರಕಾರ ಕೇರಳ ರಾಜ್ಯದಲ್ಲಿ ಕಾನೂನು ಸುವ್ಯವಸ್ಥೆ ಪಾಲಿಸಲಾಗುತ್ತಿಲ್ಲ ಎಂಬ ನೆಪ ಒಡ್ಡಿ, ಶಾಸನಸಭೆಯಲ್ಲಿ ಬಹುಮತ ಹೊಂದಿದ್ದ ಸರಕಾರವನ್ನು ವಜಾ ಮಾಡಿತು. ಆಡಳಿತ ಪಕ್ಷದ ಅಸಹನೆಯಿಂದಾಗಿ ಮಧ್ಯದಲ್ಲೇ ವಜಾಗೊಂಡ ಮೊದಲ ಸರಕಾರ ಕೇರಳದ ಕಮ್ಯುನಿಸ್ಟ್ ಸರಕಾರ. ಕೇಂದ್ರ ಸರಕಾರದ ಈ ಪ್ರಜಾಪ್ರಭುತ್ವ ವಿರೋಧಿ ಕ್ರಮಕ್ಕೆ ದೇಶಾದ್ಯಂತ ಪ್ರತಿಭಟನೆ ವ್ಯಕ್ತಗೊಂಡಿತು. ನಂತರದ ಕಾಲದಲ್ಲಿ ಕೇರಳದಲ್ಲಿ, ಪಶ್ಚಿಮ ಬಂಗಾಳದಲ್ಲಿ, ತ್ರಿಪುರಾದಲ್ಲಿ ಕಮ್ಯುನಿಸ್ಟ್ ಸರಕಾರಗಳು ಅಧಿಕಾರಕ್ಕೆ ಬಂದಿವೆ. ಅದು ಬೇರೆಯೇ ವಿಷಯ. ಈಗ ಪರಿಸ್ಥಿತಿ ಬೇರೆ. ಶಾಸನಸಭೆಯಲ್ಲಿ ಬಹುಮತ ಹೊಂದಿರುವ ಸರಕಾರವನ್ನು ಪದಚ್ಯುತಗೊಳಿಸುವ ಅಧಿಕಾರ ಕೇಂದ್ರ ಸರಕಾರಕ್ಕೆ ಇಲ್ಲ. ಈಗ ದೇಶದ ಹಲವು ಪ್ರಾಂತಗಳಲ್ಲಿ ಪ್ರತಿಪಕ್ಷ ಸರಕಾರಗಳು ಅಸ್ತಿತ್ವದಲ್ಲಿವೆ. ಕೇರಳದಲ್ಲಿ ಕಾಂಗ್ರೆಸ್ ಕಮ್ಯುನಿಸ್ಟ್ ಸರಕಾರವನ್ನು ವಜಾ ಮಾಡಿದಾಗ ಕಾಂಗ್ರೆಸ್ ಅಧ್ಯಕ್ಷ ಸ್ಥಾನದಲ್ಲಿದ್ದುದು ಶ್ರೀಮತಿ ಇಂದಿರಾಗಾಂಧಿ.


ಇ.ಎಂ.ಎಸ್. ನಂಬೂದಿರಿಪಾದ್

ಈ ಕಾಲಾವಧಿಯಲ್ಲಿ, ಎಂದರೆ ಸ್ವಾತಂತ್ರ್ಯಾನಂತರದ ಎರಡನೇ ದಶಕದಲ್ಲಿ ಆದ ಪ್ರಮುಖ ಬೆಳವಣಿಗೆಗಳೆಂದರೆ, ಭಾರತ ಮತ್ತು ಸೋವಿಯೆತ್ ಸಂಬಂಧಗಳ ಸರ್ವತೋಮುಖ ವರ್ಧನೆ ಮತ್ತು ಅಲಿಪ್ತ ಚಳವಳಿಯ ಪ್ರಾರಂಭ. ಎರಡೂ ಅಂತರರಾಷ್ಟ್ರೀಯ ಕ್ಷೇತ್ರದಲ್ಲಿ ಪ್ರಮುಖ ಪಾತ್ರವಹಿಸಿದುವು ಎಂದು ಧಾರಾಳವಾಗಿ ಹೇಳಬಹುದು. ಭಾರತ–ಸೋವಿಯೆತ್ ರಷ್ಯ ಸಂಬಂಧಗಳು ರಾಜಕೀಯದಿಂದ ಆರ್ಥಿಕ ಕ್ಷೇತ್ರಕ್ಕೂ ವಿಸ್ತರಿಸಿದ್ದು ಗಮನಾರ್ಹ. ಇದೇ ಅವಧಿಯಲ್ಲೇ ಚೀಣೀ ಗಣರಾಜ್ಯ ಸ್ಥಾಪನೆಯಾದಾಗ ಅದರೊಂದಿಗೆ ದೃಢವಾದ ಮೈತ್ರಿ ಸಂಬಂಧಗಳನ್ನು ಸ್ಥಾಪಿಸಿದ್ದು ಕೂಡ ಭಾರತವೇ. ಅಮೆರಿಕದ ಒತ್ತಡಗಳಿಗೆ ಮಣಿಯದೆ ಚೀಣೀ ಗಣರಾಜ್ಯಕ್ಕೆ ಮನ್ನಣೆ ನೀಡಿದ್ದಲ್ಲದೆ, ಸತತವಾಗಿ ಚೀಣಾಗೆ ವಿಶ್ವಸಂಸ್ಥೆಯಲ್ಲಿ ನ್ಯಾಯವಾಗಿ ಸಲ್ಲಬೇಕಾಗಿದ್ದ ಸ್ಥಾನಕ್ಕಾಗಿ ಪ್ರಯತ್ನ ನಡೆಸಿದ್ದೂ ಕೂಡ ಭಾರತವೇ. ಆದರೆ ವರ್ಷಗಳು ಉರುಳಿದಂತೆ ಎರಡೂ ದೇಶಗಳ ಮಧ್ಯೆ ವಿರಸವುಂಟಾಗಿ, ಸಶಸ್ತ್ರ ಸಂಘರ್ಷ ಕೂಡ ಸಂಭವಿಸಿದ್ದು ಬೇರೆ ವಿಷಯ. ಶೀತಯುದ್ಧ ಉತ್ತುಂಗದಲ್ಲಿದ್ದಾಗ ಯಾವ ಬಣಕ್ಕೂ ಸೇರದೆ ಭಾರತ ಅಲಿಪ್ತನೀತಿಯನ್ನು ಅನುಸರಿಸುತ್ತಿದ್ದುದು ಸರಿಯಷ್ಟೆ. ಅಂದಿನ ದಿನಗಳಲ್ಲಿ ಹೊಸದಾಗಿ ಸ್ವತಂತ್ರಗೊಂಡ ಹಲವು ಏಷಿಯ ಮತ್ತು ಆಫ್ರಿಕಾ ದೇಶಗಳೂ ಭಾರತವನ್ನು ಅನುಸರಿಸಿ ಸ್ವತಂತ್ರ ವಿದೇಶೀ ನೀತಿಯನ್ನು ಪಾಲಿಸುತ್ತಿದ್ದುವು. ೧೯೫೫ರಲ್ಲಿ ಇಂಡೋನೇಷಿಯದ ಬಾಂದುಂಗ್‌ನಲ್ಲಿ ಜರುಗಿದ ೫೫ ಏಷಿಯ, ಆಫ್ರಿಕಾ ಸ್ವತಂತ್ರ ರಾಷ್ಟ್ರಗಳ ಸಮ್ಮೇಳನದಲ್ಲಿ ಪ್ರಮುಖ ಪಾತ್ರವಹಿಸಿದ್ದ ಭಾರತದ ಪ್ರಧಾನಿ ಜವಹರಲಾಲ್ ನೆಹರೂ, ಇಂಡೋನೇಷಿಯದ ಅಧ್ಯಕ್ಷ ಡಾ॥ ಸುಕಾರ್ನೋ, ಈಜಿಪ್ಟಿನ ಅಧ್ಯಕ್ಷ ಗಮಾಲ್ ಅಬ್ದುಲ್ ನಾಸ್ಸೆರ್, ಇವರು ಯುಗೋಸ್ಲಾವಿಯದ ಅಧ್ಯಕ್ಷ ಟೀಟೋ ಜೊತೆಗೂಡಿ ಸಮಾಲೋಚನೆ ನಡೆಸಿ ಅಲಿಪ್ತ ಚಳುವಳಿಗೆ ಸ್ಪಷ್ಟವಾದ ರೂಪ ನೀಡಿದರು. ೧೯೬೧ರಲ್ಲಿ ಯುಗೋಸ್ಲಾವಿಯದ ರಾಜಧಾನಿ ಬೆಲ್‌ಗ್ರೇಡ್‌ನಲ್ಲಿ ಜರುಗಿದ ಮೊದಲ ಶೃಂಗ ಸಮ್ಮೇಳನದಲ್ಲಿ ೨೫ ರಾಷ್ಟ್ರಗಳು ಭಾಗವಹಿಸಿದ್ದುವು. ಮುಂದಿನ ಹತ್ತು ವರ್ಷಗಳಲ್ಲಿ ಸದಸ್ಯ ರಾಷ್ಟ್ರಗಳ ಸಂಖ್ಯೆ ೧೦೦ಕ್ಕೆ ಏರಿತ್ತು. ಅನಂತರ ಏಷಿಯ, ಆಫ್ರಿಕಾ, ಲ್ಯಾಟಿನ್ ಅಮೆರಿಕ, ಯೂರೋಪು ದೇಶಗಳನ್ನೂ ಒಳಗೊಂಡಿದ್ದು ಅಲಿಪ್ತ ರಾಷ್ಟ್ರಗಳ ಸಂಖ್ಯೆ ೧೨೬ ಆಗಿತ್ತು. ಈ ಚಳವಳಿಯ ಅಂತರರಾಷ್ಟ್ರೀಯ ವ್ಯವಹಾರಗಳಲ್ಲಿ ಮುಖ್ಯವಾಗಿ ನಿರ್ವಸಾಹತೀಕರಣ, ದಕ್ಷಿಣ ಆಫ್ರಿಕಾದ ವರ್ಣಭೇದ ನೀತಿಯ ಅಂತ್ಯ, ನಿರಾಯುಧೀಕರಣ, ಅಣ್ವಸ್ತ್ರ ಪ್ರಯೋಗಗಳ ನಿಷೇಧ ಮುಂತಾದುವುಗಳಿಗೆ ಪರಿಣಾಮಕಾರಿಯಾಗಿ ಕಾಣಿಕೆ ಸಲ್ಲಿಸಿವೆ. ಅಮೆರಿಕ ಮತ್ತು ಪಾಶ್ಚಾತ್ಯ ದೇಶಗಳ ಕಡು ವಿರೋಧವನ್ನೂ ಲೆಕ್ಕಿಸದೆ ಈ ದೇಶಗಳು ದೃಢವಾಗಿ ಅಲಿಪ್ತನೀತಿಗೆ ಬದ್ಧವಾಗಿದ್ದುದು ಗಮನಾರ್ಹ. ಅಂದಿನ ದಿನಗಳಲ್ಲಿ ಸೋವಿಯೆತ್ ಒಕ್ಕೂಟ ಅಲಿಪ್ತ ನೀತಿಗೆ ಬೆಂಬಲ ನೀಡಿದರೆ, ಅಮೆರಿಕ ಅದನ್ನು ಅನೀತಿ ಎಂದು ಮೂದಲಿಸಿದ್ದುದನ್ನು ನೆನಪಿಸಿಕೊಳ್ಳಬಹುದು. ಮೂರು ದಶಕಗಳಿಗೂ ಹೆಚ್ಚು ಕಾಲ ಅಂತರರಾಷ್ಟ್ರೀಯ ವ್ಯವಹಾರಗಳಲ್ಲಿ ಗಣನೀಯವಾದ ಪಾತ್ರವಹಿಸಿದ್ದ ಅಲಿಪ್ತ ಚಳವಳಿ ಈಗ ನಗಣ್ಯವಾಗಿ, ನಿಷ್ಕ್ರಿಯಗೊಂಡಿರುವುದು ವಿಷಾದನೀಯ. ಏಕಕೇಂದ್ರೀಯ ಜಾಗತಿಕ ವ್ಯವಸ್ಥೆಯಲ್ಲಿ ಅಮೆರಿಕದ ಪ್ರಾಬಲ್ಯ ವರ್ಧನೆಯಾಗಿದ್ದು ಅದು ಹೆಚ್ಚು ದುರಾಕ್ರಮಣಕಾರಿಯಾಗಿರುವುದು ಕೆಟ್ಟ ಬೆಳವಣಿಗೆ. ಅಲಿಪ್ತ ಚಳವಳಿ ಇಂಥ ಸ್ಥಿತ್ಯಂತರ ಕಾಲದಲ್ಲಿ ನಿರ್ದಿಷ್ಟ ಪಾತ್ರವಹಿಸುವ ಬದಲು ನಿರ್ಜೀವಗೊಂಡಿರುವುದು ದುರಂತ.

**(ಮುಂದುವರಿಯುವುದು)**




**ಸಿ. ಆರ್. ಕೃಷ್ಣರಾವ್**
'ಚೌಬೀನ', ನಂ. ೮೪೯,
೬ನೇ ಕ್ರಾಸ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ,
ಬೆಂಗಳೂರು – ೫೬೦ ೦೮೫

**ತಿದ್ದುಪಡಿ**


**ಶ್ರೀ ಬಸವರಾಜ ಹುಡೇದಗಡ್ಡಿ**


**ಶ್ರೀ ಶಂಕರನಾರಾಯಣ**

ಕಳೆದ ತಿಂಗಳು ಬೆಂಗಳೂರಿನಲ್ಲಿ ನಡೆದ 'ಹೊಸತು' ಸಂವಾದ ಕಾರ್ಯಕ್ರಮದ ಸುದ್ದಿಚಿತ್ರದಲ್ಲಿ ಶ್ರೀ ಬಸವರಾಜ ಹುಡೇದಗಡ್ಡಿ ಅವರ ಭಾವಚಿತ್ರದ ಕೆಳಗೆ ಶ್ರೀ ಶಂಕರನಾರಾಯಣ ಅವರ ಹೆಸರು ಅಚ್ಚಾಗಿತ್ತು. ಶ್ರೀ ಶಂಕರನಾರಾಯಣ ಅವರೂ ಲೇಖಕರ–ಓದುಗರ ಸಂವಾದದಲ್ಲಿ ಭಾಗವಹಿಸಿದ್ದರು. ಓದುಗರು ಈ ತಿದ್ದುಪಡಿಯನ್ನು ಗಮನಿಸಬೇಕಾಗಿ ವಿನಂತಿ. ಈ ತಪ್ಪಿಗಾಗಿ 'ಹೊಸತು' ಕ್ಷಮೆ ಯಾಚಿಸುತ್ತದೆ.

# ಋಗ್ವೇದ ಪ್ರವೇಶಿಕೆ



# ಐತಿಹ್ಯ ಮತ್ತು ವಾಸ್ತವ

ಜಿ. ರಾಮಕೃಷ್ಣ

**"ಕೆಟ್ಟ ಮಾತು ಆಡಬೇಡ, ಅಶ್ವಿನಿ ದೇವತೆಗಳು 'ಅಸ್ತು, ಅಸ್ತು' (ಹಾಗೆಯೇ ಆಗಲಿ) ಎನ್ನುತ್ತಾ ಸದಾ ಮನೆಯೊಳಗೆ ಹಾರಾಡುತ್ತಿರುತ್ತಾರೆ." ಹಿಂದಿನ ಕಾಲದ ಅಜ್ಜಿಯರು ಹೀಗೆ ಯುವಕ-ಯುವತಿಯರಿಗೆ ಹೇಳುತ್ತಿದ್ದರು, ಈಗಲೂ ಅಜ್ಜಿಯರು ಹಾಗೆ ಹೇಳುತ್ತಾರೇನೋ ತಿಳಿಯದು. ಈ ದೇವತೆಗಳ ಇನ್ನೊಂದು ಹೆಸರು ನಾಸತ್ಯರು ಎಂದು; ಅಂದರೆ, ಅವರ ಮಾತೆಂದೂ ಸುಳ್ಳಾಗದು ಎಂದರ್ಥ. ಋಗ್ವೇದದಲ್ಲಿ ಇವರು ದೇವವೈದ್ಯರು. ಋಗ್ವೇದದ ದೇವತೆಗಳಿಗೆ ವೈದ್ಯರೂ ಬೇಕಾಗುತ್ತಾರೆಂಬುದು ಒಂದು ವಿಶೇಷ. ಅದೇನೂ ಅಸಹಜವಲ್ಲ, ಏಕೆಂದರೆ ಈ ದೇವತೆಗಳು ಮೂಲತಃ ನರರು. ಉದಾಹರಣೆಗೆ, ಇಂದ್ರನು ನರನಾಗಿದ್ದು ಅವನ ಪುರಾತನ ವಾಸಸ್ಥಾನದಿಂದ ಅನೇಕರ ಆಶಯಗಳನ್ನು ಪೂರೈಸುತ್ತಾನೆ (ಋ.೧.೩೦.೯). ಅಗ್ನಿಯು "ನೃವತ್ ಸಖಾ ಸಭಾವಾನ್" (೪.೨.೫), ಅಂದರೆ ಜನರಂತೆ ಸ್ನೇಹಿತ, ಬುಡಕಟ್ಟಿನ ಸಭಾಸದ. ನೃಣಾಂ ನೃತಮಃ, ನೃಣಾಂ ನೃಪತಿ, ಮುಂತಾದ ವಿಶೇಷಣಗಳು ದೇವತೆಗಳಿಗೆ ಅನೇಕ ಬಾರಿ ನೀಡಲಾಗಿವೆ. ಅಶ್ವಿನಿ ದೇವತೆಗಳು ಮತ್ತು ಅಗಸ್ತ್ಯ ಮನುಷ್ಯಮುಖ್ಯಸ್ಥರಲ್ಲಿ ಪ್ರಧಾನರು (೧.೧೮೦.೮). ಅಶ್ವಿನಿಗಳು ಮಾನವರೊಡನೆ ಬಂಧುತ್ವವನ್ನು ಸ್ಥಾಪಿಸಿಕೊಂಡು ಅವರ ಸಮಾನರಾಗಿದ್ದರು (೭.೭೨.೨ : ನಃ ಸಖ್ಯಾ ಪಿತ್ರ್ಯಾಣಿ ಸಮಾನೋ ಬಂಧುಃ). ಇಂತಹ ಅಶ್ವಿನಿಗಳ ಕತೆಯು ಋಗ್ವೇದದ ಮುಂದಿನ ಹಂತದಲ್ಲಿ ಮೂರಾಬಟ್ಟೆ ಆಗಿಬಿಡುತ್ತದೆ. ವೈದಿಕ ಬುಡಕಟ್ಟು ಜನರ ವಿಕಾಸವು ಕ್ರಮೇಣ ಸಾಮಾಜಿಕ ಶ್ರೇಣೀಕರಣಕ್ಕೆ ಹಾದಿ ಮಾಡಿಕೊಡುತ್ತದೆ ಮತ್ತು ಓಷಧಿಗಳ ಸಂಗ್ರಾಹಕರು ಕೆಳಮಟ್ಟದ ಜನ ಎನಿಸಿಕೊಂಡುಬಿಡುತ್ತಾರೆ. ಇದು ಪ್ರಸ್ತುತ ಮಾಲಿಕೆಯ ಹತ್ತನೆಯ ಕಂತು.**

ರುದ್ರನು ವೈದ್ಯಶ್ರೇಷ್ಠ (ಭಿಷಕ್ತಮ), ಆದರೆ ಅವನು ದೇವವೈದ್ಯನಲ್ಲ. ದೇವತೆಗಳಿಗೂ ಸಹ ವೈದ್ಯರೆಂದರೆ ಅಶ್ವಿನೀ ದೇವತೆಗಳು. ಅವರು ಯಮಳರು, ಇಬ್ಬರೂ ಸದಾ ಜೋಡಿ. ದಿನ ಕಳೆದು ರಾತ್ರಿಯಾಗಬೇಕು, ರಾತ್ರಿ ಕಳೆದು ದಿನವಾಗಬೇಕು; ಅದಕ್ಕೆ ಚ್ಯುತಿ ಇಲ್ಲ. ಅಂತೆಯೇ ಅಶ್ವಿನಿಗಳು ಅನ್ಯೋನ್ಯರು. ಅವರು ಮೇಧಾವಿಗಳು (ನವೇದಸಾ), ಎಲ್ಲ ಕಾಲ-ದೇಶಗಳಲ್ಲೂ ಆದರಣೀಯರು (೧.೩೪.೧ : ತ್ರಿಶ್ಚಿನ್ನೋ ಅದ್ಯಾ ಭವತಂ ನವೇದಸಾ ವಿಭುರ್ವಾಂ ಯಾಮ ಉತ ರಾತಿರಶ್ವಿನಾ ! ಯುವೋರ್ಹಿ ಯಂತ್ರಂ ಹಿಮ್ಯೇವ ವಾಸಸಃ ಅಭ್ಯಾಯಂಸೇನ್ಯಾ ಭವತಂ ಮನೀಷಿಭೀಃ ॥). ಅವರ ರಥದಲ್ಲಿ ವಿಧವಿಧವಾದ ಮಧುರದ್ರವ್ಯಗಳಿವೆ, ಅವು ಅತಿ ಪ್ರಬಲವಾದುವು; ಅವುಗಳೊಡನೆ ಅವರು ಸದಾ ವೇಗವಾಗಿ ಸಂಚರಿಸುತ್ತಿರುತ್ತಾರೆ (೧.೩೪.೨). ವೈದ್ಯವೃತ್ತಿಯಲ್ಲಿ ತೊಡಗುವವರು ಇರುವುದೇ ಹಾಗಲ್ಲವೆ ! ಪ್ರಸ್ತುತ ಸೂಕ್ತದಲ್ಲಿ (೧.೩೪) ಅಶ್ವಿನಿಗಳಿಗೆ ಸಂಬಂಧಿಸಿದಂತೆ ಅನೇಕ 'ಮೂರು'ಗಳ ಪ್ರಸ್ತಾಪವಿದೆ : ಮೂರು ಬಾರಿ ಅವರು ನಮ್ಮ ಮನೆಗಳಿಗೆ ಭೇಟಿ ನೀಡಬೇಕು, ಮೂರು ಬಾರಿಯೂ ಅನುಗ್ರಹಿಸಬೇಕು, ಮೂರು ಬಾರಿಯೂ ಸಂತೋಷಕರ ಫಲವನ್ನು ನೀಡಬೇಕು, ಮೂರು ಬಾರಿಯೂ ಆತಿಥ್ಯ ಸ್ವೀಕರಿಸಬೇಕು (೪ನೆಯ ಮಂತ್ರ). ರಯಿ (ಧನ), ಧೀಃ (ಬುದ್ಧಿ), ಮುಂತಾದವನ್ನು ಸಹ ಅವರು ಮೂರರ ಪ್ರಮಾಣದಲ್ಲಿ ನೀಡುತ್ತಾರೆ (೫). ಅವರ ದಿವ್ಯೌಷಧಿಗಳು ಮೂರು; ಅವನ್ನು ಮೂರು ಮೂರು ಬಾರಿ ಕೊಡುತ್ತಾರೆ. ಬೃಹಸ್ಪತಿಯ ಮಗನಾದ ಶಮ್ಯುವಿಗೆ ನೀಡಿದ್ದನ್ನು ನಮ್ಮ ಮಕ್ಕಳಿಗೂ ಅವರು ನೀಡುತ್ತಾರೆ. ಅದರಿಂದ ನಮ್ಮ ಮೂರು ದೋಷಗಳ ನಿವಾರಣೆ ಯಾಗುತ್ತದೆ, ಏಕೆಂದರೆ ದ್ಯುಲೋಕ, ಪೃಥ್ವಿ ಮತ್ತು ನೀರಿನೊಳಗಣ ಓಷಧಿಗಳನ್ನೆಲ್ಲಾ ಅವರು ದಯಪಾಲಿಸುತ್ತಾರೆ (೧.೩೪.೬ :







ತ್ರಿರ್ನೋ ಅಶ್ವಿನಾ ದಿವ್ಯಾನಿ ಭೇಷಜಾ ತ್ರಿಃ ಪಾರ್ಥಿವಾನಿ ತ್ರಿರು ದತ್ತಮದ್ಭ್ಯಃ। ಓಮಾನಂ ಶಂಯೋರ್ಮಮಕಾಯ ಸೂನವೇ ತ್ರಿಧಾತು ಶರ್ಮ ವಹತಂ ಶುಭಸ್ಪತೀ ॥). "ತ್ರಿಧಾತು ಶರ್ಮ" ಎಂದರೆ ವಾತಪಿತ್ತಶ್ಲೇಷ್ಮ ಧಾತುಗಳನ್ನು ತಣಿಸಿದಾಗ ಉಂಟಾಗುವ ಸುಖ. ಅಂತಹ ಸುಖವನ್ನು ಕೊಡಿರೆಂದು ಅಶ್ವಿನಿ ದೇವತೆಗಳಿಗೆ ಕವಿಯ ಮೊರೆ. ಅವರೊಂದಿಗಿನ ತಾದಾತ್ಮ್ಯಕ್ಕೆ ಕವಿಯು ಕೊಡುವ ಉಪಮೆಯನ್ನು ಗಮನಿಸಬೇಕು : ಶರೀರ ಮತ್ತು ವಾಯು (ಪ್ರಾಣ) ಎರಡೂ ಅವಿನಾಭಾವ ಸಂಬಂಧ ಹೊಂದಿದ್ದಾಗ ಮಾತ್ರವೇ ಜೀವ (ಆತ್ಮ) ಇರುತ್ತದೆ. ಕವಿ ಮತ್ತು ಅಶ್ವಿನಿಗಳ ಸಂಬಂಧ ಅಂಥದು (೧.೩೪.೭ : ಆತ್ಮೇವ ವಾತಃ ಸ್ವಸರಾಣಿ ಗಚ್ಛತಂ).

ಋಗ್ವೇದದ ಬೇರೊಂದು ಸೂಕ್ತದಲ್ಲಿ (೧.೧೧೬) ಅಶ್ವಿನಿ ದೇವತೆಗಳು ಆಲಂಬನವೇ ಇಲ್ಲದ ಸಮುದ್ರದಲ್ಲಿ ಭುಜ್ಯುವಿಗೆ ಒಂದು ನಾವೆಯನ್ನು ಒದಗಿಸಿದರೆಂದು ಹೇಳಲಾಗಿದೆ. ಅಂತೆಯೇ, ಪೇದು ಎಂಬುವವನಿಗೆ ರಕ್ಷಣೆ ನೀಡಲೆಂದು ಕುದುರೆಯನ್ನು ಕಳಿಸಿಕೊಟ್ಟಿದ್ದರಂತೆ (ಮಂತ್ರ ೫-೬). ಕಕ್ಷೀವಾನ್ ಎಂಬ ಆಂಗಿರಸನಿಗೆ ವಿವೇಕವನ್ನು ನೀಡಿ ಪೋಷಿಸಿದ್ದು ನಾಸತ್ಯರು (ಮಂತ್ರ ೭). ಬೆಂಕಿಯ ಬೇಗೆಗೆ ಸಿಲುಕಿದ್ದ ಅತ್ರಿಗೆ ನೀರಿನಿಂದ ಉಪಶಮನ ನೀಡಿದ್ದು ಅಶ್ವಿನಿ ದೇವತೆಗಳು; ಅಸುರರಿಂದ ಪೀಡಿಸಲ್ಪಡುತ್ತಿದ್ದ ಅತ್ರಿಗೆ ಬಲಪ್ರದವಾದ ಆಹಾರ ನೀಡಿ ಕುಸಿದುಹೋಗುತ್ತಿದ್ದ ಅವನನ್ನು ಎಲ್ಲರ ಗಣಕ್ಕೆ ಸೇರಿಸಿದ ಶ್ರೇಯಸ್ಸು ನಾಸತ್ಯರದು (೮ : ಹಿಮೇನಾಗ್ನಿಂ ಘ್ರಂಸಂ ಅವಾರಯೇಥಾಂ ಪಿತುಮತೀಂ ಊರ್ಜಂ ಅಸ್ಮೈ ಅಧತ್ತಂ। ಋ ಬೀಸೇ ಅತ್ರಿಂ ಅಶ್ವಿನೌ ಅವನೀತಂ ಉನ್ನಿನ್ಯಥುಃ ಸರ್ವಗಣಂ ಸ್ವಸ್ತಿ ॥). ಧಾನ್ಯ, ಓಷಧಿ, ವನಸ್ಪತಿ, ಮುಂತಾದುವನ್ನು ಭೂಮಿಯಲ್ಲಿ ಬೆಳೆಸಿದ ಕೀರ್ತಿ ಅವರದು, ಎಂದು ಸಾಯಣನೂ ದಾಖಲಿಸಿದ್ದಾನೆ. ಚ್ಯವನನು ವೃದ್ಧನಾಗಿದ್ದಾಗ ಶುಶ್ರೂಷೆ ಮಾಡುವವರು ಯಾರೂ ಇರಲಿಲ್ಲವಂತೆ; ಆಗ ನಾಸತ್ಯರು ಅವನಿಗೆ ಯೌವನವನ್ನು ಪ್ರದಾನ ಮಾಡಿದರು. ಅದಕ್ಕೊಂದು ಉಪಮೆ ನೀಡಲಾಗಿದೆ : ಕೃಶವಾದ ಶರೀರದ ಮೇಲಿನ ಬಟ್ಟೆಯನ್ನು ಕಳಚಲು ಶರೀರವನ್ನು ಕೈಯಿಂದ ಹಿಡಿದು ಬಟ್ಟೆಯನ್ನು ಮೇಲಕ್ಕೆತ್ತುವುದು ಒಂದು ವಿಧಾನ. ನಾಸತ್ಯರು ಮಾಡಿದ್ದು ಹಾಗೆ : ಶರೀರದಿಂದ ಮುದಿತನವನ್ನು ಹಿಡಿದೆತ್ತಿ ತೆಗೆದುಹಾಕಿದರು. ನಂತರ ಯುವಕ ಚ್ಯವನನು ಮತ್ತೆ ಮದುವೆಯಾದ (ಮಂತ್ರ ೧೦ : ಜುಜುರುಷೋ ನಾಸತ್ಯಾ ಉತ ವವ್ರಿಂ ಪ್ರಾಮುಂಚತಂ ದ್ರಾಪಿಮಿವ ಚ್ಯವಾನಾತ್। ಪ್ರಾತಿರತಂ ಜಹಿತಸ್ಯಾಯುಃ ದಸ್ರಾದಿತ್‌ಪತಿಂ ಅಕೃಣತಂ ಕನೀನಾಂ ॥). ಕವಿಯ ಕವಿತ್ವ ಶೈಲಿಯನ್ನು ಗಣನೆಗೆ ತೆಗೆದುಕೊಳ್ಳದೆ ಈ ಮಾತುಗಳನ್ನು ಅಕ್ಷರಶಃ ವ್ಯಾಖ್ಯಾನಿಸಿಕೊಳ್ಳಬಾರದು. ಪ್ರಮುಖವಾಗಿ ನಾಸತ್ಯರ ಉಪಶಮನ ಸಾಮರ್ಥ್ಯವನ್ನು ಕವಿಯು ಹೇಳಹೊರಟಿದ್ದಾನೆ ಎಂಬುದನ್ನು ಗ್ರಹಿಸಬೇಕು. ಇಂದಿನ ಚ್ಯವನಪ್ರಾಶಕ್ಕೆ ಋಗ್ವೇದದ ಈ ಆಖ್ಯಾನವು ಪ್ರೇರಣೆ ನೀಡಿರಬೇಕು! ಮುಂದಿನ ಮಂತ್ರದಲ್ಲಿ ನಾಸತ್ಯರ ಇನ್ನೊಂದು ಸಾಹಸವನ್ನು ಶ್ಲಾಘಿಸಲಾಗಿದೆ : ವಂದನ ಎಂಬುವನೊಬ್ಬ ನಿರ್ಜನವಾದೆಡೆ ಒಂದು ಬಾವಿಗೆ ಬಿದ್ದಿದ್ದ; ನಿಧಿಯೊಂದನ್ನು ಎತ್ತಿ ತರುವಂತೆ ನಾಸತ್ಯರು ಅವನನ್ನು ಎತ್ತಿ ತಂದಿದ್ದು ಪ್ರಶಂಸನೀಯ (ಮಂತ್ರ ೧೧). ಮೋಡದಿಂದ ಬರುವ ಶಬ್ದವು ಮಳೆಯ ಸೂಚನೆ ಇದ್ದಂತೆ ನಾಸತ್ಯರ ಒಂದು ಕ್ರಿಯೆಯು ಅವರ ಅಸಾಧಾರಣ ಸಾಮರ್ಥ್ಯದ ಸೂಚನೆಯಾಗಿದೆ. ದಧ್ಯಂಗ್ ಎಂಬುವವನ ತಲೆಯನ್ನು ಕತ್ತರಿಸಿ ಆ ಜಾಗದಲ್ಲಿ ಒಂದು ಕುದುರೆಯ ತಲೆಯನ್ನು ಇರಿಸಿದ್ದರು. ಅದನ್ನು ತಿಳಿಯದ ಇಂದ್ರನು ಎಂಥದೋ ಕಾರಣಕ್ಕೆ ಅದನ್ನು ತರಿದುಹಾಕಿದಾಗ ಮೊದಲಿನ ತಲೆಯನ್ನು ನಾಸತ್ಯರು ದಧ್ಯಂಗ್‌ಗೆ ಹೊಂದಿಸಿಕೊಟ್ಟರು. ಇದನ್ನು ಬಹಿರಂಗವಾಗಿ ಹೊಗಳುತ್ತೇನೆ, ಎನ್ನುತ್ತಾನೆ ಕವಿ (೧೨ : ತದ್ವಾಂ ನರಾ ಸನಯೇ ದಂಸ ಉಗ್ರಮಾವಿಷ್ಕೃಣೋಮಿ ತನ್ಯತುರ್ನ ವೃಷ್ಟಿಂ। ದಧ್ಯಂಗ್ ಹ ಯನ್ಮಧ್ವಾಥರ್ವಣೋ ವಾಮಶ್ವಸ್ಯ ಶೀರ್ಷ್ಣಾ ಪ್ರ ಯದೀಮುವಾಚ ॥).

ನಮ್ಮ ಪ್ರಾಚೀನರ ಶಸ್ತ್ರಕ್ರಿಯಾ ಚಾತುರ್ಯವನ್ನು ಅವೈಚಾರಿಕವಾಗಿ ಹೊಗಳುವ ಒಂದು ಪದ್ಧತಿ ಇದೆ : ವ್ಯಾಸ, ದ್ರೋಣ, ಮುಂತಾದವರು ಜನ್ಮತಾಳಿದ ವಿಧಾನವನ್ನು ಅತ್ಯಾಧುನಿಕ ಶಸ್ತ್ರಕ್ರಿಯಾ ಚಿಕಿತ್ಸೆಯೆಂದು ಹೇಳುವುದು ಆ ಸಂಪ್ರದಾಯದ ಒಂದು ಭಾಗ. ಇನ್ನೂ ಹಿಂದಕ್ಕೆ ಹೋಗಿ ದಧ್ಯಂಗ್ ಎಂಬುವವನಿಗೆ ನಾಸತ್ಯರು ನೀಡಿದ ಶಸ್ತ್ರಚಿಕಿತ್ಸೆಯನ್ನು ಉದಾಹರಿಸಬಹುದಿತ್ತು; ಆದರೆ ಋಗ್ವೇದದ ಈ ಮಂತ್ರವು ವ್ಯಾಸನ ಹುಟ್ಟಿನಷ್ಟು ಪ್ರಸಿದ್ಧವಾಗಿಲ್ಲವಲ್ಲ! ಸುಶ್ರುತನಿಗೆ ಶಸ್ತ್ರಕ್ರಿಯಾ ಚಿಕಿತ್ಸೆಯನ್ನು ಹೇಳಿಕೊಟ್ಟಿದ್ದೇ ನಾಸತ್ಯರೆಂಬ ದೇವತೆಗಳೆಂದು ಬೇಕಾದರೂ ಉದ್ಗಾರ ಎತ್ತಬಹುದು. ಪುರಾಣ ಕತೆಗಳು ಹುಟ್ಟಿಕೊಳ್ಳುವ ಪ್ರಕ್ರಿಯೆ ತಿಳಿಯದಿದ್ದಾಗ ಅಂತಹ ಉದ್ಗಾರಗಳು ಘನವಾಗಿರುವಂತೆ ತೋರುತ್ತವೆ. ಮೂಲತಃ, ವೈದ್ಯಕೀಯ ಜ್ಞಾನವು ಆದ್ಯಂತರಹಿತವಾದದ್ದು, ಮಾನವ ತನ್ನ ಪರಿಸರದಲ್ಲಿ ಸದಾ ಆರೋಗ್ಯ ಸಾಧನಗಳನ್ನು ಅರಸುತ್ತಾ ಬಂದಿದ್ದಾನೆ, ಎಂಬುದಷ್ಟೇ ಗ್ರಾಹ್ಯ. ನಾಸತ್ಯರು ಆ ವೈದ್ಯಕೀಯದ ಸ್ಥಾಪಕರು, ಪ್ರತಿನಿಧಿಗಳು. ಅವರು ವಧ್ರಿಮತಿ ಎಂಬುವಳಿಗೆ ಮಕ್ಕಳಾಗುವ ಸಂಭವ ಇಲ್ಲದಿದ್ದಾಗ ಮಕ್ಕಳಾಗುವಂತೆ ಮಾಡಿ ಪೂಜನೀಯರೆನಿಸಿಕೊಳ್ಳುತ್ತಾರೆ (ಮಂತ್ರ ೧೩). ವಧ್ರಿಮತಿಯು ತನ್ನ ಕೋರಿಕೆಯನ್ನು ಮುಂದಿಟ್ಟಾಗ ನಾಸತ್ಯರು ಅದನ್ನು ಹೇಗೆ ಕೇಳಿಸಿಕೊಂಡರೆಂದರೆ ಉಪಾಧ್ಯಾಯರ ಪ್ರವಚನವನ್ನು ಶಿಷ್ಯರು ತನ್ಮಯತೆಯಿಂದ ಕೇಳಿಸಿಕೊಳ್ಳುವಂತೆ, ಎನ್ನುತ್ತಾನೆ ಕವಿ (೧೩ : ಶ್ರುತಂ ತಚ್ಛಾಸುರಿವ ವಧ್ರಿಮತ್ಯಾ). ಇಂತಹ ಮಾತುಗಳು ಹೇರಳವಾಗಿ ಬರುವ ಋಗ್ವೇದವನ್ನು ಅಪೌರುಷೇಯವೆನ್ನುವುದು, ಅಧ್ಯಾತ್ಮದ ಖನಿ ಎನ್ನುವುದು, ನಿಗೂಢ ಜ್ಞಾನದ ಸೆಲೆ ಎನ್ನುವುದು, ಎಷ್ಟು ಅನುಚಿತವೆಂಬುದು ಸುಲಭವಾಗಿ ಗೋಚರಿಸುತ್ತದೆ. ಋಗ್ವೇದದ ಕವಿಗಳ ಜೀವನ ವಿಧಾನ, ಆಶಯಗಳು, ಪರಿಸರದೊಡನೆ ಅವರ ಸಾಂಗತ್ಯ, ಪ್ರಕೃತಿಯ ವಿಸ್ಮಯ, ಇವು ಕಾವ್ಯಾತ್ಮಕವಾಗಿ ಅಭಿವ್ಯಕ್ತಿಗೊಳಿಸಿರುವುದು ಋಗ್ವೇದ. ಪ್ರಸ್ತುತ ಮೊದಲನೆಯ ಮಂಡಲದ ೧೧೬ನೆಯ ಸೂಕ್ತದಲ್ಲಿ ನಾಸತ್ಯರ ವೈದ್ಯಕೀಯ ಪ್ರತಿಭೆಯ



ಉಲ್ಲೇಖಗಳಿವೆ, ಅವುಗಳಲ್ಲಿ ಕೆಲವನ್ನು ನಾವು ಗಮನಿಸಿದ್ದೇವೆ. ಮಾನವರನ್ನು ಸಂಕಷ್ಟದಿಂದ ಬಿಡಿಸುವಾಗಿನ ಆಸ್ಥೆಯನ್ನು ಪ್ರಾಣಿಗಳ ಸಂರಕ್ಷಣೆಯ ಸಂದರ್ಭದಲ್ಲೂ ಅವರು ಪ್ರಕಟಿಸುತ್ತಾರೆ. ಒಂದು ಪುಟ್ಟ ಹಕ್ಕಿಯನ್ನು ಅವರು ತೋಳದ ಬಾಯಿಂದ ಬಿಡಿಸಿದರಂತೆ (ಮಂತ್ರ ೧೪ : ಆಸ್ನೋ ವೃಕಸ್ಯ ವರ್ತಿಕಾಂ ಅಭೀಕೇ); ಹಾಗೆಯೇ ಒಬ್ಬ ಕುರುಡ ಕವಿಗೆ ಕಣ್ಣು ಕೊಟ್ಟರಂತೆ (ಉತೋ ಕವಿಂ ಪುರುಭುಜಾ ಯುವಂ ಹ ಕೃಪಮಾಣಮಕೃಣುತಂ ವಿಚಕ್ಷೇ). ವೇದದ ಸರಳ ವಾಕ್ಯಗಳಿಗೆ ಎಂತೆಂತಹ ಅರ್ಥವನ್ನು ಆರೋಪಿಸಬಹುದು ಎಂಬುದಕ್ಕೆ ಈ ಸಾಲನ್ನು ನಿದರ್ಶನವಾಗಿ ನೋಡಬಹುದು. ಋಗ್ವೇದಕ್ಕೆ ಅತಿಪ್ರಾಚೀನ ವ್ಯಾಖ್ಯಾನಕಾರನೆಂದರೆ ಯಾಸ್ಕ. ಅವನು ತನ್ನ 'ನಿರುಕ್ತ' ಎಂಬ ಗ್ರಂಥದಲ್ಲಿ ಈ ಸಾಲಿಗೆ ನೀಡಿರುವ ಅರ್ಥ ಹೀಗಿದೆ : ವರ್ತಿಕಾ ಎಂದರೆ ಉಷಸ್ಸು. ಪದೇ ಪದೇ ಘಟಿಸುವುದು ಎಂಬುದು 'ವರ್ತಿಕಾ' ಶಬ್ದದ ಅರ್ಥ. ಹಾಗೆ ಪ್ರತಿದಿನ ಘಟಿಸುವ ಸಂಗತಿ ಬೆಳಗಾಗುವುದು, ಅಂದರೆ ಉಷೋದೇವಿಯ ನಿರಂತರ ಆಗಮನ. ಅವಳನ್ನು ನಾಸತ್ಯರು ತೋಳ ಅಥವಾ ವೃಕದಿಂದ ಸೆಳೆದು ರಕ್ಷಿಸಿದರು. ಯಾವುದು ಆ ತೋಳ? ಸೂರ್ಯ. ಅವನೇಕೆ ತೋಳವೆನಿಸಿಕೊಳ್ಳುತ್ತಾನೆ? ಏಕೆಂದರೆ ಉಷೋದೇವಿಯನ್ನು ಆವರಿಸಿ ಅವಳನ್ನು ಗ್ರಾಸ ಮಾಡಿಕೊಂಡುಬಿಡುತ್ತಾನೆ, ಅದಕ್ಕೆ. ಅಂತಹ ಸೂರ್ಯನಿಂದ ಅಶ್ವಿನಿಗಳೂ ಉಷೋದೇವಿಯನ್ನು ಬಿಡಿಸುತ್ತಾರೆ.

ಮಂತ್ರದ ಹಿನ್ನೆಲೆಯನ್ನು, ನಾಸತ್ಯರ ವೈದ್ಯಕೀಯ ಆಸ್ಥೆ ಮತ್ತು ಪ್ರಾವೀಣ್ಯವನ್ನು, ಯಾಸ್ಕನು ಗಣನೆಗೆ ತೆಗೆದುಕೊಳ್ಳದೆ ಸೂರ್ಯನ ಕತೆ ಕಟ್ಟಿಬಿಟ್ಟಿದ್ದಾನೆ. ಉಷೆಯ ಮಸುಕು ಮತ್ತು ಸೂರ್ಯನ ಪ್ರಕಾಶ ಎಂಬುವನ್ನು ಹಿಡಿದು, ಬೇಕಾದರೆ ನಿಗೂಢ ಅಧ್ಯಾತ್ಮ ಜ್ಞಾನದತ್ತ ಜಿಗಿಯಲು ಸಾಕಷ್ಟು ಅವಕಾಶವಿದೆ. ಆದರೆ ಅದು ಕವಿಯ ಇಂಗಿತ ಸರ್ವಥಾ ಅಲ್ಲವೆಂಬುದು

ಸ್ಪಷ್ಟವಾಗಿದೆ. ಮುಂದಿನ ಮಂತ್ರವೇ ಅದಕ್ಕೆ ಪುರಾವೆ ಒದಗಿಸುತ್ತದೆ: ಖೇಲ ಎಂಬುವವನ ಸಂಬಂಧಿ ವಿಶ್ಪಲಾ ಎಂಬುವವಳಿಗೆ ನಾಸತ್ಯರು ಚಿಕಿತ್ಸೆ ನೀಡಿದರು. ಏನು ಚಿಕಿತ್ಸೆ? ಒಂದು ಹಕ್ಕಿಯ ರೆಕ್ಕೆ ಕತ್ತರಿಸಿ ಬೀಳುವಂತೆ ಅವಳ ಕಾಲು ಕತ್ತರಿಸಿ ಹೋಗಿತ್ತು. ರಾತ್ರಿ ವೇಳೆಯಲ್ಲೇ ಶೀಘ್ರವಾಗಿ ಬಂದು ನಾಸತ್ಯರು ಅವಳಿಗೆ ಕಬ್ಬಿಣದ ಕಾಲು ತೊಡಿಸಿದರು (೧.೧೧೬.೧೫: ಚರಿತ್ರಂ ಹಿ ವೇಃ ಇವ ಅಚ್ಛೇದಿ ಪರ್ಣಂ ಆಜಾ ಖೇಲಸ್ಯ ಪರಿತಕ್ಮ್ಯಾಯಾಂ। ಸದ್ಯೋ ಜಂಘಾಮಾಯಸೀಂ ವಿಶ್ಪಲಾಯೈ ಧನೇ ಹಿತೇ ಸರ್ತವೇ ಪ್ರತ್ಯಧತ್ತಂ॥). ಇದನ್ನು ವಾಸ್ತವವೆಂದು ಭ್ರಮಿಸುವ ಬದಲು ನಾಸತ್ಯರ ಅಸಾಧಾರಣ ವೈದ್ಯಕೀಯ ಸಾಮರ್ಥ್ಯದ ಶ್ಲಾಘನೆಯೆಂದು ಬಗೆಯುವುದು ಸೂಕ್ತ. ಶರೀರದ ಎಲ್ಲ ಅಂಗಗಳಿಗೂ ಅವರಲ್ಲಿ ಮದ್ದು ಇದೆ ಎಂಬುದು ಕವಿಯ ಸೂಚನೆ. ಮುಂದಿನ ಮಂತ್ರವು ಅದನ್ನು ವಿಸ್ತರಿಸಿ ಹೇಳುತ್ತದೆ. ಅಶ್ವಿನಿ ದೇವತೆಗಳು ತಮ್ಮ ರಥಕ್ಕೆ ಕಟ್ಟುತ್ತಿದ್ದ ಕತ್ತೆಯು ತೋಳದ ರೂಪದಲ್ಲಿ ಬಂದಿದ್ದಾಗ ಋಜ್ರಾಶ್ವನು ಅದಕ್ಕೆ ನೂರೊಂದು ಮೇಕೆಗಳನ್ನು ಕೊಟ್ಟ. ಮೇಕೆಗಳು ಬೇರೆ ಬೇರೆ ವ್ಯಕ್ತಿಗಳವು. ತಂದೆಗೆ ಕೋಪ ಉಕ್ಕಿಬಂದು ಮಗನ ಕಣ್ಣು ಕಳೆದ. ತಮ್ಮಿಂದಾಗಿ ಋಜ್ರಾಶ್ವನ ಕಣ್ಣು ಹೋಯಿತೆಂದು ತಿಳಿದ ಅಶ್ವಿನಿ ದೇವತೆಗಳು ಅವನಿಗೆ ಪುನಃ ಕಣ್ಣು ಬರುವಂತೆ ಮಾಡಿದರು. ಅವರು ಅಂತಹ ಪ್ರೌಢ ವೈದ್ಯರು (ಮಂತ್ರ ೧೬).

ಇನ್ನೊಂದಂಶವನ್ನು ಇಲ್ಲಿ ಗಮನಿಸಬಹುದು. ಈ ಒಂದು ಸೂಕ್ತದಲ್ಲಿ (೧೧೬) ಅನೇಕರ ಹೆಸರುಗಳು ಬಂದಿವೆ. ಆ ಪೈಕಿ ದಿವೋದಾಸನೂ ಸೇರಿದ್ದಾನೆ (ಮಂತ್ರ ೧೮). ಇವನ ಪ್ರಸ್ತಾಪವು ಋಗ್ವೇದದ ಹಲವೆಡೆ ಬಂದಿದೆ. ಅಂದಿನ ಒಬ್ಬ ಜನನಾಯಕನಾಗಿ ಅವನು ಪ್ರಸಿದ್ಧಿ ಹೊಂದಿದವನು. ಚಾರಿತ್ರಿಕ ಅಂಶಗಳಿಗೆ ಋಗ್ವೇದ ಸೂಕ್ತಗಳು ಸಾಕಷ್ಟು ಸಾಮಗ್ರಿ ಒದಗಿಸುತ್ತವೆಯೆಂಬುದು ಇದರರ್ಥ. ದಿವೋದಾಸನು ಅಶ್ವಿನಿ ದೇವತೆಗಳನ್ನು ಬರಮಾಡಿಕೊಂಡು ಅವರಿಗೆ ಆತಿಥ್ಯ ನೀಡುವುದಲ್ಲದೆ ಅವರ ರಥಕ್ಕೆ ಅಸಮಂಜಸವೆನಿಸುವಂತೆ ಒಂದು ಎತ್ತು ಮತ್ತು ಒಂದು ನೀರುಬೆಕ್ಕನ್ನು ಕಟ್ಟಿ ಕಳಿಸಿದನಂತೆ (ರೇವದುವಾಹ ಸಚನೋ ರಥೋ ವಾಂ ವೃಷಭಶ್ಚ ಶಿಂಶುಮಾರಶ್ಚ ಯುಕ್ತಾ). ನಾಸತ್ಯರಿಂದ ಅನುಗ್ರಹ ಪಡೆದ ಇನ್ನೊಬ್ಬ 'ರಾಜ' ಜಾಹುಷ (ಮಂತ್ರ ೨೦). ಬೇರೆ ಬೇರೆ ರೀತಿಗಳಲ್ಲಿ ಅವರಿಂದ ಉಪಕೃತರಾದವರೆಂದರೆ ವಶ, ಶರ, ಶಯು, ಮುಂತಾದವರು (೨೧–೨೨). ರೇಭ ಎಂಬೊಬ್ಬನನ್ನು ಯಾರೋ ಬಾವಿಗೆ ತಳ್ಳಿಬಿಟ್ಟಿದ್ದರು. ಒಂಭತ್ತು ದಿನ ಅವನು ಅಲ್ಲೇ ಉಳಿದಿದ್ದ. ಹತ್ತನೆಯ ದಿನದಂದು ನಾಸತ್ಯರು ಅವನನ್ನು ನೀರಿನಿಂದ ಮೇಲೆತ್ತಿ ರಕ್ಷಿಸಿದರು (೨೪). ಇದೇ ಪ್ರಸಂಗವನ್ನು ಮತ್ತೆ ಮುಂದಿನ ಸೂಕ್ತದ (೧.೧೧೭) ೪ನೆಯ ಮಂತ್ರದಲ್ಲಿ ಪ್ರಸ್ತಾಪಿಸಲಾಗಿದೆ. ಕಡೆಯ ಮಂತ್ರದಲ್ಲಿ ಕವಿ ಹೇಳುತ್ತಾನೆ: ಹಿಂದಿನ ನಿಮ್ಮ ಅಮೋಘ ಕ್ರಿಯೆಗಳನ್ನು ಸ್ಮರಿಸಿಕೊಂಡಿದ್ದೇನೆ, ನಿಮ್ಮ ಸಹಾಯದಿಂದ ನಾನು ಶ್ರೀಮಂತನಾಗಿ ಅಧಿಪತಿ ಯಾಗುತ್ತೇನೆ ಮತ್ತು ನೂರು ವರ್ಷ ಬಾಳುತ್ತೇನೆ (೨೫: ಪ್ರ ವಾಂ ದಂಸಾಂಸಿ ಅಶ್ವಿನೌ ಅವೋಚಂ ಅಸ್ಯ ಪತಿಃ ಸ್ಯಾಂ ಸುಗವಃ ಸುವೀರಃ। ಉತ ಪಶ್ಯನ್ನಶ್ನುವನ್ ದೀರ್ಘಮಾಯುಃ ಅಸ್ತಮಿವೇಜ್ಜರಿಮಾಣಂ ಜಗಮ್ಯಾಂ॥).

ನಾಸತ್ಯರನ್ನು ಕುರಿತಾದ ಬೇರೆ ಹಲವು ಸೂಕ್ತಗಳು ಋಗ್ವೇದದಲ್ಲಿವೆ. ಉದಾಹರಣೆಗೆ, ೧.೧೧೭, ೧.೧೨೦, ೧.೧೫೭, ೫.೭೮, ಇತ್ಯಾದಿ. ಯಜ್ಞದಲ್ಲಿ ಹವಿಸ್ಸು ಸ್ವೀಕರಿಸಲು ಬೇರೆ ದೇವತೆಗಳಿಗಿದ್ದಂತೆ ಅವರಿಗೂ ಪದೇಪದೇ ಆಹ್ವಾನವಿದೆ. ಬೇರೆಲ್ಲಾ ದೇವತೆಗಳ ಲಕ್ಷಣಗಳು ಇವರಲ್ಲೂ ಇವೆ, ಆದರೆ ಎರಡು ವಿಶೇಷವಾಗಿ ಗಮನಾರ್ಹವಾಗಿವೆ: (ಅ) ಬೇರಾವುದೇ ದೇವತೆಯ ಸಂದರ್ಭದಲ್ಲಿ ಪ್ರಸ್ತಾಪವಾಗಿರುವ ವ್ಯಕ್ತಿಗಳ ಹೆಸರುಗಳಿಗಿಂತಲೂ ಹೆಚ್ಚಾಗಿ ನಾಸತ್ಯರ ಸಂದರ್ಭದಲ್ಲಿ ವ್ಯಕ್ತಿಗಳ ಉಲ್ಲೇಖಗಳಿವೆ; (ಆ) ಅಶ್ವಿನಿ ದೇವತೆಗಳ ವೈದ್ಯಕೀಯ ಪರಿಣತಿ ಮತ್ತು ಅದರಿಂದ ಅವರು ನೀಡುವ ಶುಶ್ರೂಷೆ ಅನನ್ಯವಾದುವು. ಬೇರೆ ದೇವತೆಗಳು ಕೊಡುತ್ತಾರೆನ್ನಲಾದ ಗೋವು, ಮಕ್ಕಳು, ಸಂಪತ್ತು, ಇವಲ್ಲದೆ ನಾಸತ್ಯರು ಎಲ್ಲ ಬಗೆಯ ವೈದ್ಯಕೀಯದಲ್ಲೂ ನಿಷ್ಣಾತರಾದ್ದರಿಂದ ಆರೋಗ್ಯ ಭಾಗ್ಯವನ್ನು ನೀಡುತ್ತಾರೆ. ಸಾಮಾಜಿಕವಾಗಿ ಇದಕ್ಕೆ ಮಹತ್ವವಿದೆ, ಏಕೆಂದರೆ ಆರ್ಯ, ಪಂಚಜನ, ಪಣಿ, ಮುಂತಾದ ವಿಂಗಡಣೆಗಳು ನಾಸತ್ಯರಿಗೆ ಅಪ್ರಸ್ತುತ. ಅವರು ಕಕ್ಷೀವಾನ್‌ನ ಮಗಳು ಘೋಷಾಳ ಮತ್ತು ಶ್ಯಾವ ಎಂಬುವವನ ಕುಷ್ಠರೋಗ ನಿರ್ಮೂಲನ ಮಾಡುತ್ತಾರೆ, ಕ್ಷೋಣನ ಕುರುಡು ನೀಗಿಸುತ್ತಾರೆ, ನೃಷದನ ಮಗ ನಾರ್ಷದನಿಗೆ ಕಿವುಡು ಹೋಗಿಸುತ್ತಾರೆ (೧.೧೧೭.೭–೮). ಹೀಗಾಗಿ ಎಲ್ಲರೂ ಅವರಲ್ಲಿ ಆಶ್ರಯ ಮತ್ತು ಚಿಕಿತ್ಸೆ ಪಡೆಯುತ್ತಾರೆ. ಆದ್ದರಿಂದ ಕವಿ ಹೇಳುತ್ತಾನೆ, "ಮೇಧಾವಿಗಳಾದ ನಾಸತ್ಯರ ಸುಮತಿಯನ್ನು ನಾನು ಸದಾ ನೆನೆಯುತ್ತೇನೆ, ನನ್ನ ಬುದ್ಧಿಯನ್ನು ಅವರು ರಕ್ಷಿಸಲಿ. ಮಕ್ಕಳು, ಸಂಪತ್ತು, ಎಲ್ಲವನ್ನೂ ಅವರು ನೀಡಲಿ" (೧.೧೧೭.೨೫). ಇನ್ನೊಬ್ಬ ಕವಿ ಹೇಳುತ್ತಾನೆ, "ಸರ್ವಜ್ಞರಾದ ನಾಸತ್ಯರನ್ನು ಕೇಳಿಕೊಳ್ಳುತ್ತೇನೆ, ನನಗೆ ಹಿತವಾದ ವಿದ್ವತ್ತನ್ನು ಅವರು ನೀಡಲಿ, ಯೌವನವನ್ನು ನೀಡಲಿ" (ತಾ ವಿದ್ವಾಂಸಾ ಹವಾಮಹೇ ವಾಂ ತಾ ನೋ ವಿದ್ವಾಂಸಾ ಮನ್ಮ ವೋಚೇತಮದ್ಯ। ಪ್ರಾರ್ಚತ್ ದಯಮಾನೋ ಯುವಾಕುಃ॥ – ೧.೧೨೦.೩). ಮತ್ತೊಬ್ಬ ಕವಿ ಹೇಳುತ್ತಾನೆ, "ನಾಸತ್ಯರೆ, ಔಷಧಿಗಳನ್ನು ನೀಡುವ ವೈದ್ಯರು ನೀವು, ನಿಮ್ಮ ಸಂಚಾರಕ್ಕೆ ಅಗತ್ಯವಾದ ಒಳ್ಳೆಯ ಕುದುರೆ ಮತ್ತು ರಥ ಇವೆ, ನಿಮ್ಮ ಬಲ ಅಪೂರ್ವವಾದ್ದು. ಆದ್ದರಿಂದ ನಿಮ್ಮನ್ನು ಆಮಂತ್ರಿಸಿ ಹವಿಸ್ಸು ನೀಡುತ್ತೇನೆ" (೧.೧೫೭.೬). "ಆಮಂತ್ರಿಸಿ ಹವಿಸ್ಸು ನೀಡುತ್ತೇನೆ" ಎಂಬ ಈ ಮಾತನ್ನು ನೆನಪಿನಲ್ಲಿಡೋಣ, ಏಕೆಂದರೆ ನಾಸತ್ಯರ ಮುಂದಿನ ಕತೆಗೆ ಅದು ಬಹಳ ಪ್ರಸ್ತುತ. ಋಗ್ವೇದವು ಇಂತಹ ಉಪಮೆಯನ್ನು ಸಹ ನೀಡಬಲ್ಲುದೆ ಎಂಬ ಆಶ್ಚರ್ಯ ಉಂಟುಮಾಡುವಂತಹ ಒಂದು ಮಂತ್ರದಲ್ಲಿ ಮಗದೊಬ್ಬ ಕವಿಯು ನಾಸತ್ಯರ ಮೂಲ ಸಾಮಗ್ರಿಯಾದ ವನಸ್ಪತಿ ಅಥವಾ ಮೂಲಿಕೆಯನ್ನು ಉದ್ದೇಶಿಸಿ ಹೇಳುತ್ತಾನೆ, "ಎಲೈ ವನಸ್ಪತಿಯೆ, ನಿನ್ನ ಮಹತ್ ಶಕ್ತಿಯನ್ನು ತೆರೆದುಕೊ; ಪ್ರಸವದ ಸಮಯದಲ್ಲಿ ಸ್ತ್ರೀಯರು ಯೋನಿಯನ್ನು ತೆರೆದುಕೊಳ್ಳುವಂತೆ ವಿಶಾಲವಾಗಿ ತೆರೆದುಕೊ. ಆದ್ದರಿಂದ ಅಶ್ವಿನಿ ದೇವತೆಗಳೆ, ನಿಮ್ಮಲ್ಲಿ ಅರಿಕೆ ಮಾಡಿಕೊಳ್ಳುತ್ತೇನೆ ಸಪ್ತವಧ್ರಿಯಾದ ನನ್ನನ್ನು ಬಿಡುಗಡೆಗೊಳಿಸಿ" (೫.೭೮.೫: ವಿ ಜಿಹೀಷ್ವ ವನಸ್ಪತೇ ಯೋನಿಃ ಸೂಷ್ಯಂತ್ಯಾಃ ಇವ। ಶ್ರುತಂ ಮೇ ಅಶ್ವಿನಾ ಹವಂ ಸಪ್ತವಧ್ರಿಂ ಚ ಮುಂಚತಂ॥). ಅಶ್ವಿನಿಗಳನ್ನು ಋಗ್ವೇದದ ಕವಿಗಳು ಕಂಡಿರುವ ರೀತಿಯನ್ನು ಇನ್ನೂ ವಿಸ್ತಾರವಾಗಿ ನಿರೂಪಿಸುವ ಅವಶ್ಯಕತೆ ಇದ್ದರೂ ಸ್ಥೂಲವಾಗಿ ಇಷ್ಟನ್ನು ಮನನ ಮಾಡಿಕೊಂಡು ಅವರ ಸ್ಥಾನ ಹಾಗೂ ಅವರಿಗೆ ದೊರೆತ ಮಾನ್ಯತೆ ಹೇಗೆ ಬದಲಾಯಿಸಿತೆಂಬುದನ್ನು ನೋಡೋಣ. ಅದು ಅಂದಿನ ಸಾಮಾಜಿಕ ಬದಲಾವಣೆಯ ಚಿತ್ರಣವೂ ಹೌದು. ವೈದ್ಯನನ್ನು ಆದರದಿಂದ ಆಲಂಗಿಸುತ್ತಿದ್ದ ಸಮಾಜ ಋಗ್ವೇದದ ಬುಡಕಟ್ಟು ಸಮಾಜ; ಅವನ ಸೇವೆಯನ್ನು ನಿರಾಕರಿಸದೆ ಅವನನ್ನು ಸಾಮಾಜಿಕವಾಗಿ ಅವಹೇಳನಕ್ಕೆ ಗುರಿಮಾಡಿದ್ದು ನಂತರದ ಸಮಾಜ.



ನಮ್ಮ ಅತ್ಯಂತ ಪ್ರಾಚೀನ ಶಾಸ್ತ್ರೀಯ ವೈದ್ಯಕೀಯ ಗ್ರಂಥ ಚರಕ ಸಂಹಿತೆ. ವೈಜ್ಞಾನಿಕ ವಸ್ತುನಿಷ್ಠತೆಗೆ ಆದರ್ಶಪ್ರಾಯವಾದಂತಹ ಗ್ರಂಥ ಅದು. ವೈದ್ಯರಿಂದ ಯಾವ ಗುಣಗಳನ್ನು ಆ ಗ್ರಂಥವು ನಿರೀಕ್ಷಿಸುತ್ತದೋ ಅವು ಯಾವುದೇ ಸಂಪನ್ನ ವ್ಯಕ್ತಿಗೆ ಭೂಷಣವಾದಂಥವು: ಅವನು ಪ್ರಶಾಂತನಾಗಿರಬೇಕು, ಸಣ್ಣತನ ತೋರಬಾರದು, ಶುದ್ಧ ಕೆಂಪು ನಾಲಿಗೆ ಹೊಂದಿರಬೇಕು, ತುಟಿ ಮತ್ತು ಹಲ್ಲುಗಳು ಓರೆಕೋರೆಯಾಗಿರಬಾರದು, ಕೋಪಿಷ್ಠನಾಗಿರಕೂಡದು, ಇತ್ಯಾದಿ. ಅವನು "ಶೀಲ ಶೌಚ ಆಚಾರ ಅನುರಾಗ ದಾಕ್ಷ್ಯ ಪ್ರಾದಕ್ಷಿಣ್ಯ ಉಪಪನ್ನನಾಗಿರಬೇಕು" (ಚ.ಸಂ. ೩.೮.೮). ನಮ್ಮ ದೇಶದಲ್ಲಿ ಚರಕ ಸಂಹಿತೆಗೆ ಸಮಕಾಲೀನರಾಗಿದ್ದ ಎಷ್ಟು ಮಂದಿ ಧರ್ಮಶಾಸ್ತ್ರಕಾರರು ಇಂತಹ ಗುಣಗಳನ್ನು ಹೊಂದಿದ್ದಿರಬಹುದು? ಬೆರಳೆಣಿಕೆಯಷ್ಟಾದರೂ ಇದ್ದರೋ

ಇಲ್ಲವೋ ಎಂಬ ಸಂಶಯ ಮೂಡುತ್ತದೆ. ಆದರೆ ಇದೇ ಧರ್ಮಶಾಸ್ತ್ರಕಾರರು ಶುದ್ಧರೂ ಸಚ್ಚಾರಿತ್ರ್ಯ ಉಳ್ಳವರೂ ಆಗಿದ್ದ ವೈದ್ಯರನ್ನು ವಿಪರೀತವಾಗಿ ನಿಂದಿಸುತ್ತಾರೆ, ಅವರ ವಿರುದ್ಧವಾದಂತಹ ಆಚರಣೆಗಳನ್ನು ವಿಧಿಸುತ್ತಾರೆ. ಉದಾಹರಣೆಗೆ, "ಮಾನ್ಯ" ಮನು ಹೇಳುವುದನ್ನು ನೋಡಿ : "ಕೆಲವು ವೃತ್ತಿಗಳು ದ್ವಿಜರಿಗೆ (ಅಂದರೆ ಉಚ್ಚವರ್ಣದವರಿಗೆ) ವರ್ಜ್ಯ" (ಅಂದರೆ ಅವರು ಆ ವೃತ್ತಿಗಳಲ್ಲಿ ತೊಡಗಬಾರದು). "ವೇದವಿದ್ಯೆಗೆ ವ್ಯತಿರಿಕ್ತವಾದ ವೈದ್ಯ, ತರ್ಕ, ಇತ್ಯಾದಿಗಳು" ಅಂತಹ ವೃತ್ತಿಗಳೆಂದು ಮನುವಿನ ವ್ಯಾಖ್ಯಾನಕಾರ ಕುಲ್ಲೂಕಭಟ್ಟ ಹೇಳಿದ್ದಾನೆ. ವೈದ್ಯಕೀಯವು ವೇದವಿದ್ಯೆಗೆ ವ್ಯತಿರಿಕ್ತ ವಾದುದಲ್ಲ ಎಂಬುದು ಅಶ್ವಿನಿ ದೇವತೆಗಳ ಶ್ಲಾಘನೆಯನ್ನು ತಿಳಿದವರಿಗೆಲ್ಲಾ ಗೊತ್ತಿದೆ. ಆದರೆ ಮನು ಅದನ್ನು ನಿಷೇಧಿತ ವೃತ್ತಿಗಳ ಪಟ್ಟಿಗೆ ಸೇರಿಸಿ ತಾನೇ ವೇದ ವಿರೋಧಿ ನಿಲುವನ್ನು ತಾಳಿದ್ದಾನೆ. ಆದರೆ ಸಂಪ್ರದಾಯದಂತೆ ಅವನು "ವೇದ ಸಮರ್ಥಕ"! ಶಿಲ್ಪ, ದನಕಾಯುವುದು, ವ್ಯಾಪಾರ, ಕೃಷಿ, ಎಲ್ಲವೂ ಮನುವಿನ ನಿಷೇಧಿತ ಪಟ್ಟಿಯಲ್ಲಿದೆ. ಆದರೆ ಋಗ್ವೇದದ ಜನ ದನಗಾಹಿಗಳು, ಕೃಷಿಯತ್ತ ಹೊರಳುತ್ತಿದ್ದವರು! ನಮ್ಮ ಇತಿಹಾಸಕಾರರಿಗೆ ಇದು ತಿಳಿಯದೆ? ಹಾಗಿದ್ದರೆ, ಚರಕ ಸಂಹಿತೆಯು ವೇದವಿರೋಧಿಯಲ್ಲ, ಬದಲಾಗಿ ಮನುಸ್ಮೃತಿಯು ವೇದವಿರೋಧಿ ಎನ್ನಬೇಕಾಗಿತ್ತು. ಋಗ್ವೇದದ ಕಾಲದ ಸಮಾಜದಲ್ಲಿ ಉಂಟಾದ ಬದಲಾವಣೆಯು ವೈದ್ಯಕೀಯದ ಸ್ಥಾನದಲ್ಲಿ ಬದಲಾವಣೆಯನ್ನು ತಂದಿತು. ಆ ಬದಲಾವಣೆಯು ಅಶ್ವಿನಿ ದೇವತೆಗಳ ಸ್ಥಾನದ ಬದಲಾವಣೆಯಲ್ಲಿ ಪ್ರತಿಫಲನಗೊಂಡಿದೆ. ಹಾಗೆ ನೋಡಿದರೆ, ಋಗ್ವೇದದಲ್ಲಿಯೇ ನಾಸತ್ಯರ ಸ್ಥಾನಪಲ್ಲಟದ ಸೂಚನೆ ಒಮ್ಮೆ ಬಂದಿದೆ. "ನಾಸತ್ಯರಿಗೆ ಬೆಳಗಿನ ವೇಳೆಯಲ್ಲಿ ಹವಿಸ್ಸು ನೀಡಿಬಿಡಿ, ಅವರಿಗೆ ಸಂಜೆ ವೇಳೆ ನೀಡಬಾರದು" ಎಂದು ಹೇಳಲಾಗಿದೆ (೫.೭೭.೨ : ಪ್ರಾತಃ ಯಜಧ್ವಂ ಅಶ್ವಿನಾ ಹಿನೋತ ನ ಸಾಯಮಸ್ತಿ ದೇವಯಾ ಅಜುಷ್ಟಂ।). ಸಂಜೆಯ ವೇಳೆಗೆ ಅವರು ಕಾಡು-ಮೇಡು ಸುತ್ತಿ ಬಂದಿರುತ್ತಾರೆಂದೆ? ಏನೇ ಇರಲಿ, ಋಗ್ವೇದವು ವೈದ್ಯಕೀಯವನ್ನು ತುಚ್ಛವಾಗಿ ನೋಡಿಲ್ಲ, ಎಲ್ಲ ದೇವತೆಗಳೂ ವೈದ್ಯಕೀಯದಲ್ಲಿ ನಿಷ್ಣಾತರು ಆದರೆ ಅಶ್ವಿನಿಗಳು ಅದರಲ್ಲಿ ಅದ್ವಿತೀಯರು. ಋಗ್ವೇದದ ನಂತರದ ಸಾಹಿತ್ಯದಲ್ಲಿ ಈ ಬಗ್ಗೆ ಅನಿರೀಕ್ಷಿತ ಬದಲಾವಣೆಗಳು ಗೋಚರಿಸುತ್ತವೆ. ಋಗ್ವೇದದ ಕಾಲದಲ್ಲಿ ಇರದಿದ್ದ ಶ್ರೇಣೀಕೃತ ಸಮಾಜವು ನಂತರದಲ್ಲಿ ತಲೆದೋರಲಾರಂಭವಾಗಿತ್ತು. ಆ ಹೊಸ ಸಂದರ್ಭದಲ್ಲಿ ವೈದ್ಯರನ್ನು ಕನಿಷ್ಠರನ್ನಾಗಿ ಕಾಣುವ ಪ್ರವೃತ್ತಿ ಬೆಳೆಯಿತು. ವೈದ್ಯಕೀಯವನ್ನು ಪ್ರತಿನಿಧಿಸುತ್ತಿದ್ದ ಅಶ್ವಿನಿಗಳನ್ನು ಕೆಳಮಟ್ಟಕ್ಕೆ ಇಳಿಸಲಾದ್ದು ಆ ಹಿನ್ನೆಲೆಯಲ್ಲಿ. ಋಗ್ವೇದದ ಕಾಲದ ಯಜ್ಞದಲ್ಲಿ ಹವಿಸ್ಸಿಗೆ ಯೋಗ್ಯ ರಾಗಿದ್ದ ಅಶ್ವಿನಿ ದೇವತೆಗಳು ಯಜುರ್ವೇದದ ಕಾಲಕ್ಕೆ ಹವಿಸ್ಸು ಪಡೆಯಲು ಅನರ್ಹರಾದರು! ಕೃಷ್ಣ ಯಜುರ್ವೇದ ಶಾಖೆಯ ತೈತ್ತಿರೀಯ ಸಂಹಿತೆಯ ಒಂದು ಪ್ರಸಂಗವು (೬.೪.೯) ಇದನ್ನು ಚೆನ್ನಾಗಿ ಹೊರ ಗೆಡಹುತ್ತದೆ. ಅದನ್ನು ಸೂಕ್ಷ್ಮವಾಗಿ ಪರಿಶೀಲಿಸೋಣ :

> ಬದುಕು ನೀಡಿದ ಜನರ ಮೊದಲು
> ಸ್ಮರಿಸುತ್ತಿರು
> ಬದಲೊಂದು ಯೋಚನೆಗೆ ಮನ ಒಡ್ಡದೇ
> ಇರು
> ಕನಸು ಕಾಣುವ ಕ್ರಮವು
> ಅನುಸರಣೆಗಿರಲಿ
> ದಿನನಿತ್ಯ ಕನವರಿಕೆ ಮನ ಇಲ್ಲದಿರಲಿ
> ಜನಬವಣೆ ಪಡುತಿರುವ ಮನೆಗಳನ್ನು
> ನೋಡು
> ಅನು ನಿತ್ಯ ಅವರ ನೀ ಜತೆ ಹೊಂದಿಗೂಡು
>
> **ಕೀರಿಕ್ಕಾಡು ವನಮಾಲಾ ಕೇಶವ ಭಟ್ಟ**
> ಬನಾರಿ ಕೃಷ್ಣಾನುಗ್ರಹ, ಕಾಸರಗೋಡು

ಯಜ್ಞದ ತಲೆಯನ್ನು ಯಾರೋ ಒಮ್ಮೆ ತರಿದು ಹಾಕಿದ್ದರಂತೆ; ಅದಕ್ಕೆ ವೈದ್ಯಕೀಯ ಸಹಾಯ ಬೇಕಾಯಿತು. ಆಗ ಅಶ್ವಿನಿ ದೇವತೆಗಳನ್ನು ಸ್ತುತಿಸಿ 'ಬಂದು ಈ ಸೋಮಪಾನವನ್ನು ಸ್ವೀಕರಿಸಿ' ಎಂಬ ಋಗ್ವೇದದ ಒಂದು ಮಂತ್ರವನ್ನು (೧.೨೨.೧) ಪಠಿಸಲಾಯಿತು. ಈ ಸಂಬಂಧದಲ್ಲಿ ತೈತ್ತಿರೀಯ ಸಂಹಿತೆಯ ಭಾಗ ಹೀಗಿದೆ :

"ಯಜ್ಞದ ಶಿರಸ್ಸನ್ನು ಕತ್ತರಿಸಲಾಗಿತ್ತು.

"ದೇವತೆಗಳು ಅಶ್ವಿನಿಗಳಿಗೆ ಹೇಳಿದರು :

'ನೀವು ವೈದ್ಯರು, ಯಜ್ಞದ ಶಿರಸ್ಸನ್ನು ಸರಿಪಡಿಸಿ.'

"ಅವರು ಉತ್ತರಿಸಿದರು : 'ನಾವೊಂದು ವರವನ್ನು ನಿರೀಕ್ಷಿಸೋಣವೆ? ಇದರಲ್ಲಿ ನಮಗೂ ಹವಿರ್ಭಾಗ ದೊರೆಯಲಿ' (ಅಂದರೆ, ಸಾಮಾನ್ಯತಃ ಅವರಿಗೆ ಆ ವೇಳೆಗೆ ಹವಿರ್ಭಾಗವನ್ನು ನಿರಾಕರಿಸಲಾಗಿತ್ತು; ಚೌಕಾಶಿ ಮಾಡಿ ಅವರು ಅದನ್ನು ಪಡೆಯಬೇಕಿತ್ತು.)

"ದೇವತೆಗಳು ಇದಕ್ಕೆ ಒಪ್ಪಿದರು. ಅಶ್ವಿನಿಗಳಿಗೆ ಹವಿರ್ಭಾಗವನ್ನು ತೆಗೆದಿರಿಸಿದರು.

"ಆಗ ಅಶ್ವಿನಿಗಳು ಯಜ್ಞದ ಶಿರಸ್ಸನ್ನು ಸರಿಪಡಿಸಿದರು. ಆದ್ದರಿಂದ, ಅಶ್ವಿನಿಗಳಿಗೆ ಹವಿರ್ಭಾಗ ತೆಗೆದಿಡುವುದೆಂದರೆ ಯಜ್ಞವನ್ನು ಸರಿಪಡಿಸಿದಂತೆ ಎಂದರ್ಥ.

"ಅವರ ಬಗ್ಗೆ ದೇವತೆಗಳೆಂದರು : 'ಇವರು ಅಶುದ್ಧರು; ವೈದ್ಯರಾಗಿ ಸಾಮಾನ್ಯ ಮನುಷ್ಯರ ನಡುವೆ ಸಂಚರಿಸುತ್ತಾರೆ.'

"ಆದ್ದರಿಂದ ಬ್ರಾಹ್ಮಣರು ವೈದ್ಯಕೀಯವನ್ನು ಮಾಡಬಾರದು, ಏಕೆಂದರೆ ವೈದ್ಯನು ಅಶುದ್ಧ, ಅವನು ಯಜ್ಞದಲ್ಲಿ ಅನರ್ಹ.

"ಅಶ್ವಿನಿ ದೇವತೆಗಳನ್ನು ಬಹಿಷ್ಪವಮಾನ ಸ್ತೋತ್ರದಿಂದ ಶುದ್ಧೀಕರಿಸಿ ಅವರಿಗೆ ಹವಿರ್ಭಾಗವನ್ನು ತೆಗೆದಿರಿಸಿದರು. ಆದ್ದರಿಂದ ಯಜ್ಞದಲ್ಲಿ ಅಶ್ವಿನಿ ದೇವತೆಗಳಿಗೆ ಬಹಿಷ್ಪವಮಾನ ಶುದ್ಧೀಕರಣ ಸ್ತೋತ್ರವನ್ನು ಪಠಿಸಿದ ನಂತರ ಹವಿರ್ಭಾಗವನ್ನು ತೆಗೆದಿರಿಸಬೇಕು. ಇದನ್ನು ತಿಳಿದವನು ಬಹಿಷ್ಪವಮಾನವನ್ನು ಆಚರಿಸಬೇಕು; ಅದರಿಂದ ಅವನು ಶುದ್ಧನಾಗುತ್ತಾನೆ."

ಇದರ ನಿಜವಾದ ಅರ್ಥವೇನು? "ಶುದ್ಧ" ಬ್ರಾಹ್ಮಣರು ಅಶುದ್ಧ ಮನಸ್ಸಿನವರು ಮತ್ತು "ಅಶುದ್ಧ" ರೆನ್ನಲಾದ ನಾಸತ್ಯರು ಶುದ್ಧ ಮನಸ್ಸಿನವರು ಎಂದು. ಋಗ್ವೇದದ ಅಶ್ವಿನಿ ದೇವತೆಗಳ ಸ್ತುತಿಯನ್ನು ನಂತರದ ತೈತ್ತಿರೀಯ ಸಂಹಿತೆಯು ತಿರುಚಿಬಿಟ್ಟಿದೆ. ಋಗ್ವೇದದ ಕಾಲದಲ್ಲಿ "ವೈದ್ಯರಾಗಿ ಸಾಮಾನ್ಯ ಮನುಷ್ಯರ ನಡುವೆ ಸಂಚರಿಸುತ್ತಾರೆ" ಎಂಬ ಆಪಾದನೆಯನ್ನು ಅಶ್ವಿನಿ ದೇವತೆಗಳ ಮೇಲೆ ಹೊರಿಸಲಾಗುತ್ತಿರಲಿಲ್ಲ, ಏಕೆಂದರೆ ಆಗ್ಗೆ ಬೇರೆಯವರನ್ನು ಮುಟ್ಟಿಸಿಕೊಳ್ಳದ "ಅಸಾಮಾನ್ಯರು" ಯಾರೂ ಇರಲಿಲ್ಲ. ವರ್ಣ ವ್ಯವಸ್ಥೆಯು ಋಗ್ವೇದದ ಉತ್ತರ ಕಾಲದ ಸಂಗತಿ. ಆಗ ಬ್ರಾಹ್ಮಣರೆಂಬ "ಉಚ್ಚ" ವರ್ಣದವರ ಪ್ರಾಬಲ್ಯ ಆರಂಭಗೊಂಡಿತು. ಅವರಿಗೆ ವೈದ್ಯರು ಬೇಕಾಗಿದ್ದರು, ಆದರೆ ವೈದ್ಯಕೀಯದ ಜ್ಞಾನಸಂಪಾದನಾ ಕ್ರಮ ಹಿಡಿಸುತ್ತಿರಲಿಲ್ಲ. ವನಸ್ಪತಿಗಳು ಬೇಕು, ಆದರೆ ಅವನ್ನು ಸಂಗ್ರಹಿಸುವಾಗ ವೈದ್ಯನು ಗುಡ್ಡಗಾಡು ಜನರೊಡನೆ ಬೆರೆಯಬಾರದು! ಹಾಗೆ ಬೆರೆಯದಿದ್ದರೆ ವನಸ್ಪತಿ ದೊರಕುವುದಿಲ್ಲವೆಂಬುದು ವೈದ್ಯನಿಗೆ ಗೊತ್ತು ಮತ್ತು ಅವನಿಗೆ 'ಸಾಮಾನ್ಯ' ಹಾಗೂ 'ಅಸಾಮಾನ್ಯ' ಎಂಬ ಭೇದ ಮಾನ್ಯವಲ್ಲ. ಸಾಮಾಜಿಕ ಬದಲಾವಣೆಯು ವೈದ್ಯನ ಸ್ಥಾನವನ್ನು ಅಪಮೌಲ್ಯಗೊಳಿಸಿದ್ದು ಹೀಗೆ. ಅಶ್ವಿನಿಗಳು ತೈತ್ತಿರೀಯ ಸಂಹಿತೆಯ ಕಾಲದಲ್ಲೂ ಶ್ರೇಷ್ಠ ವೈದ್ಯರೇ, ಆದರೆ ಅವರು ಹವಿಸ್ಸನ್ನು ಸ್ವೀಕರಿಸಲು ಅರ್ಹರಲ್ಲ. ತೈತ್ತಿರೀಯದ ಇನ್ನೆರಡು ವಾಕ್ಯಗಳನ್ನು ನೋಡಿ ವಿರಮಿಸೋಣ : "ವೈದ್ಯರಾಗಿ ನಾಸತ್ಯರು ಸಾಮಾನ್ಯ ಜನರ ನಡುವೆ ಸಂಚರಿಸುತ್ತಿರುತ್ತಾರೆ, ಆದ್ದರಿಂದ ಅವರಿಗೆ ಶುದ್ಧೀಕರಣ ಅಗತ್ಯವಿದೆ" (ತೌ ದೇವಾ ಅಬ್ರುವನ್ ಅಪೂತೌ ವಾ ಇಮೌ ಮನುಷ್ಯಚರೌ ಭಿಷಜೌ ಇತಿ). ಆದ್ದರಿಂದಲೇ ಬ್ರಾಹ್ಮಣನು ವೈದ್ಯಕೀಯದಲ್ಲಿ ತೊಡಗಬಾರದು (ತಸ್ಮಾತ್ ಬ್ರಾಹ್ಮಣೇನ ಭೇಷಜಂ ನ ಕಾರ್ಯಂ ಅಪೂತಃ ಹಿ ಏಷಃ ಅಮೇಧ್ಯಃ ಯಃ ಭೀಷಕ್). ಪುದುಚೇರಿಯಲ್ಲಿ ಎಂ. ಡಿ. ಮಾಡುತ್ತಿರುವ ಹುಡುಗ-ಹುಡುಗಿಯರಿಗೆ ಹೀಗೆಂದು ಹೇಳಿದರೆ ಅವರು ಗಹಗಹಿಸಿ ನಕ್ಕಾರು. ಆದರೆ ಅಪೌರುಷೇಯವೆನ್ನಲಾದ ವೈದಿಕ ಸಾಹಿತ್ಯದಲ್ಲಿ ಅಂತಹ ಮಾತುಗಳು ಬಂದಿವೆ. ಋಗ್ವೇದದ ಕಾಲದ 'ಋತ' ಅಳಿಸಿಹೋಯಿತೆಂದು ಖಿನ್ನರಾದ ಪ್ರಾಚೀನ ಬುಡಕಟ್ಟು ಸಮುದಾಯಗಳ ಪೇಚಾಟಕ್ಕೆ, ಅಪಥ್ಯವಾದ ಸಾಮಾಜಿಕ ಬದಲಾವಣೆಯು ಕಾರಣವಾಯಿತು. "ಋಗ್ವೇದದ ಮನಸ್ಸು ನಮ್ಮ ಮನಸ್ಸಾಗಬೇಕು" ಎಂದು ಕರೆಕೊಡುವ ಇಂದಿನ ಮುತ್ಸದ್ದಿಗಳು ಋಗ್ವೇದದ ನಿಜವಾದ ಮನಸ್ಸು ಯಾವುದೆಂದು ತಿಳಿದುಕೊಳ್ಳುವುದು ಸೂಕ್ತ. ಋತ-ಓಷಧಿ-ಅಶ್ವಿನಿ ದೇವತೆಗಳು, ಇವು ಋಗ್ವೇದದ ನೈತಿಕತೆಯ ಮಾದರಿಗಳು.

**ಜಿ. ರಾಮಕೃಷ್ಣ**
೨-ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್, ೨೨/೧, ೪ನೇ ಕ್ರಾಸ್, ಕಾವೇರಿನಗರ, ಬನಶಂಕರಿ ೩ನೇ ಹಂತ, ಬೆಂ. ೮೫

# ಆಮ್ ಆದ್ಮಿ ಪಕ್ಷ: ಕೆಲವು ಅಭಿಪ್ರಾಯಗಳು

**ಮ. ಶ್ರೀ. ಮುರಳಿ ಕೃಷ್ಣ**



ಕಳೆದ ವರ್ಷಾಂತ್ಯದಲ್ಲಿ ಜರುಗಿದ ದೆಹಲಿ ವಿಧಾನ ಸಭೆ ಚುನಾವಣೆಯಲ್ಲಿ ಆಮ್ ಆದ್ಮಿ ಪಕ್ಷದ (ಎಎಪಿ) ಫಲಿತಾಂಶ, ನಮ್ಮ ರಾಷ್ಟ್ರದ ಅನೇಕ ನಗರ ಪ್ರದೇಶಗಳ ಮಧ್ಯಮ ವರ್ಗದ ಹೆಚ್ಚಿನ ಜನರ ಗಮನವನ್ನು ಸೆಳೆದಿದೆ. ಒಂದು ಚಳವಳಿ ರಾಜಕೀಯ ಸ್ವರೂಪವನ್ನು ಪಡೆದು, ಚುನಾವಣೆಯೊಂದರಲ್ಲಿ ಭಾಗವಹಿಸಿ, ಅಲ್ಪ ಸಮಯದಲ್ಲೇ ಜನರ ಮೇಲೆ, ಅದರಲ್ಲೂ ಹೆಚ್ಚಾಗಿ ಮಧ್ಯಮ ವರ್ಗದವರ ಮೇಲೆ ಪ್ರಭಾವವನ್ನು ಬೀರಿರುವ ಉದಾಹರಣೆಗಳು ನಮ್ಮ ರಾಜಕೀಯ ಚರಿತ್ರೆಯಲ್ಲಿ ವಿರಳ. ಎಎಪಿ ಈ ಹೆಗ್ಗಳಿಕೆಗೆ ಪಾತ್ರವಾಗಿದೆ. ಸದ್ಯ ಈ ಪಕ್ಷ, ರಾಷ್ಟ್ರೀಯ ಪಕ್ಷವಾಗಿ ಹೊರಹೊಮ್ಮುವ ಆಕಾಂಕ್ಷೆ ಹೊಂದಿದೆ. ಇದಕ್ಕೆ ಇಂಬು ನೀಡುವಂತಿದೆ ಜನರ ಪ್ರತಿಕ್ರಿಯೆ. ಯಾವುದೇ ಒಂದು ಜಾತಿ, ಮತ, ಧರ್ಮ, ಜನಾಂಗ, ವರ್ಗ ಮತ್ತು ಪ್ರದೇಶಕ್ಕೆ ಸೀಮಿತಗೊಳ್ಳದಿರುವುದು ಇದರ ಪ್ಲಸ್ ಪಾಯಿಂಟ್ ಎಂಬುದು ಕೆಲವು ರಾಜಕೀಯ ವಿಶ್ಲೇಷಕರ ಅಂಬೋಣ.

ಯುಪಿಎ–೧ನೇ ಸರ್ಕಾರಕ್ಕೆ ಬಾಹ್ಯ ಬೆಂಬಲವನ್ನು, ಒಂದು ಸಾಮಾನ್ಯ ಕನಿಷ್ಠ ಕಾರ್ಯಕ್ರಮದಡಿ, ಎಡ ಪಕ್ಷಗಳು ನೀಡಿದ್ದವು. ಆ ಅವಧಿಯಲ್ಲೇ, ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆ, ಮಾಹಿತಿ ಹಕ್ಕು ಮುಂತಾದ ಜನಪರ ಆಡಳಿತ ಕ್ರಮಗಳು ಜಾರಿಯಾದವು. ಯಾವ ರಾಜಿನೀತಿ, ಸೂತ್ರವನ್ನು ಅವಲಂಬಿಸದ ಎಡ ಪಕ್ಷಗಳು ಆ ಸರ್ಕಾರಕ್ಕೆ ಲಂಗು ಲಗಾಮನ್ನು ಹಾಕಿದ್ದವು. ಯುಪಿಎ ಸರ್ಕಾರದ ಎರಡನೇ ಅವಧಿ, ಅದರ ಭ್ರಷ್ಟಾಚಾರ ಹಗರಣಗಳಿಂದ ಜನಮಾನಸದಲ್ಲಿ ಹೆಚ್ಚಾಗಿ ನೆಲೆಸಿದೆ. ಸ್ವಾತಂತ್ರ್ಯ ತರುವಾಯದ ಅತ್ಯಂತ ಭ್ರಷ್ಟ ಸರ್ಕಾರ ಎಂಬುದು ಯುಪಿಎ–೨ನೇ ಸರ್ಕಾರದ ಹೈಲೈಟ್. ಈ ಅವಧಿಯಲ್ಲೇ ಮನಮೋಹನ ಸಿಂಗ್ ಭಾರತ ಕಂಡ ಅತ್ಯಂತ ದುರ್ಬಲ ಪ್ರಧಾನಿ ಎಂದು ಬಿಂಬಿತಗೊಂಡರು. ಈ ನಕಾರಾತ್ಮಕ ಬೆಳವಣಿಗೆಗಳನ್ನು ದೆಹಲಿ ಜನತೆಯ ಮುಂದೆ ಸಮರ್ಥವಾಗಿ ಇರಿಸುವುದರಲ್ಲಿ ಎಎಪಿ ಸಫಲವಾಯಿತು.

ಎಎಪಿ ಸಾರ್ವಜನಿಕ ವಲಯದಲ್ಲಿ ನಮ್ಮ ಸಮಾಜ ವನ್ನು ಅರ್ಬುದದಂತೆ ಪೀಡಿಸುತ್ತಿರುವ ಭ್ರಷ್ಟಾಚಾರದತ್ತ ವಿಶೇಷ ಗಮನ ಹರಿಸಿದೆ. ಆದರೆ ಅದು ಎಲ್ಲ ಬಗೆಯ ಭ್ರಷ್ಟಾಚಾರಗಳತ್ತ ಅಷ್ಟೇ ಗಮನ ಹರಿಸಿಲ್ಲ ಎಂಬುದು ಕೂಡ ಗಮನಿಸಬೇಕಾದ ಅಂಶ. ಅದು ಹೆಚ್ಚಾಗಿ ಸರ್ಕಾರಿ ಮತ್ತು ರಾಜಕೀಯ ಭ್ರಷ್ಟಾಚಾರದತ್ತ ಕೇಂದ್ರೀಕರಿಸುತ್ತಿದೆ. ಇಂತಹ ವಿಚಾರ, ಜನಸಾಮಾನ್ಯರ ವಲಯದಲ್ಲಿ, ಆಕರ್ಷಣೆಯ ಮೋಡಿ ಹಾಕುವುದರಲ್ಲಿ ಸಫಲವಾಗಿದೆ. ಈ ಪರಿಯ ನಿಲುವು, ಅದರ ತಂತ್ರಗಾರಿಕೆಯ ಭಾಗವಾಗಿರಲೂ ಬಹುದು. ಅಲ್ಲದೆ, ಸಾಮಾನ್ಯ ಜನರು ತಮ್ಮ ನಿತ್ಯ ಜೀವನದಲ್ಲಿ ಎದುರಿಸುವ ನೀರು, ವಿದ್ಯುಚ್ಛಕ್ತಿ ಬವಣೆ ಗಳನ್ನು ಮುಂದಿಟ್ಟುಕೊಂಡು ಕೆಲವು ಕಾರ್ಯಕ್ರಮಗಳನ್ನು ಎಎಪಿ ಹಮ್ಮಿಕೊಂಡಿತು. ಅವುಗಳಿಗೆ ದೆಹಲಿ ಜನರ ಸ್ಪಂದನವೂ ದೊರಕಿತು.

**ಆದರೆ ಎಎಪಿ ಪಕ್ಷದ ಮುನ್ನೋಟ ದಸ್ತಾವೇಜನ್ನು ವಿಶ್ಲೇಷಿಸಿದವರಿಗೆ, ಆ ಪಕ್ಷದ, ಮೇಲೆ ಪ್ರಸ್ತಾಪಿಸಿದಂತಹ ವರಸೆಗಳು, ಪ್ರಹಸನಗಳು ಮತ್ತು ವಿವಾದಗಳು ಅಚ್ಚರಿಯನ್ನುಂಟು ಮಾಡುವುದಿಲ್ಲ. ಮುನ್ನೋಟ ದಸ್ತಾವೇಜಿನಲ್ಲಿ ನಮ್ಮ ಸಂವಿಧಾನದ ಪೀಠಿಕಾ ಭಾಗವನ್ನು ಉಲ್ಲೇಖಿಸಲಾಗಿದೆ. ಇದರರ್ಥ, ಆ ಪಕ್ಷ ಸಂಸದೀಯ ಪ್ರಜಾಪ್ರಭುತ್ವವನ್ನಾಗಲೀ ಅಥವಾ ಪ್ರಜಾಪ್ರಭುತ್ವದ ಮೂಲ ತತ್ವಗಳನ್ನಾಗಲೀ ಎತ್ತಿ ಹಿಡಿಯುತ್ತದೆ ಎಂದಲ್ಲ. ಏಕೆಂದರೆ, ಆ ದಸ್ತಾವೇಜಿನ ಪ್ರಥಮ ಭಾಗದಲ್ಲೇ "ಹಮ್ ಸತ್ತಾ ಕೆ ಕೇಂದ್ರ ಕೊ ಧ್ವಸ್ಟ್ ಕರ್ಕೆ ರಾಜನೀತಿಕ್ ಸತ್ತಾ ಸೀದೇ ಜನತಾ ಕೆ ಹಾಥ್‌ಮೆ ದೇನೆ ಜಾ ರಹೆ ಹೈ" (ನಾವು ಅಧಿಕಾರದ ಕೇಂದ್ರಗಳನ್ನು ಧ್ವಂಸ ಮಾಡಿ, ರಾಜಕೀಯ ಅಧಿಕಾರವನ್ನು ನೇರವಾಗಿ ಜನತೆಯ ಕೈಗೆ ನೀಡುತ್ತೇವೆ) ಎಂಬ ಹೇಳಿಕೆಗೆ ಒತ್ತನ್ನು ನೀಡಲಾಗಿದೆ.**



ಆದರೆ ಎಎಪಿ, ಸಮಾಜವಾದ, ಧರ್ಮನಿರಪೇಕ್ಷತೆ, ಉದಾರವಾದ, ಹಿಂದುತ್ವ ಮುಂತಾದ 'ಇಸಂ'ಗಳಿಂದ ದೂರ ಇದೆ. ತಮ್ಮ ಪಕ್ಷ ಯಾವುದೇ ಒಂದು ವಿಚಾರಧಾರೆಗೆ ಬದ್ಧವಾಗಿಲ್ಲ ಎಂಬುದನ್ನು ಅದರ ಪ್ರಮುಖ ನಾಯಕರು ಅಲ್ಲಲ್ಲಿ ಹೇಳುತ್ತಿದ್ದಾರೆ. ರಾಜಕೀಯ ಮತ್ತು ಆಡಳಿತಾಂಗವನ್ನು ಜನರ ಸಮೀಪ ತೆಗೆದುಕೊಂಡು ಹೋಗುವುದು, ಆಳುವವರು ಮತ್ತು ಆಳಿಸಿಕೊಳ್ಳುವವರ ನಡುವಿನ ಅಂತರ ಕಡಿಮೆ ಮಾಡುವುದು ತಮ್ಮ ಪಕ್ಷದ ಧ್ಯೇಯ ಎಂದೂ ಅವರು ಸಾರುತ್ತಿದ್ದಾರೆ. ಪಾರದರ್ಶಕ ಆಡಳಿತದ ಮೂಲಕ ವ್ಯಾಪಕ ಸುಧಾರಣೆಗಳನ್ನು ತರಬಹುದು ಮತ್ತು ಪರಿಹಾರಗಳನ್ನು ಜನತೆಗೆ ನೀಡಬಹುದು ಎಂಬುದು ಅದರ ಸ್ಪಷ್ಟ ನಿಲುಮೆ. ಮೊಹಲ್ಲಾಗಳಲ್ಲಿ ಮಾತುಕತೆ, ಚರ್ಚೆ, ಗ್ರಾಮಸಭೆಗಳಿಗೆ ಆದ್ಯತೆ, ಸ್ಥಳೀಯ ಮಟ್ಟದ ಸ್ವ-ಆಡಳಿತ ಸಂಸ್ಥೆಗಳ ಪುಷ್ಟೀಕರಣದ ಮೂಲಕ ನೀರು, ಖನಿಜಗಳು, ಅರಣ್ಯಗಳು ಮುಂತಾದ ನೈಸರ್ಗಿಕ ಸಂಪನ್ಮೂಲಗಳನ್ನು ಜನರ ಸ್ವಾಧೀನಕ್ಕೆ ಒಳಪಡಿಸುವುದು, ನಿರ್ಧಾರ ತೆಗೆದು ಕೊಳ್ಳುವ ಪ್ರಕ್ರಿಯೆಗಳಲ್ಲಿ ಜನರ ಭಾಗವಹಿಸುವಿಕೆ, ಜನಮತ ಸಂಗ್ರಹಗಳು ಇತ್ಯಾದಿಗಳ ಮೂಲಕ ತೃಣಮೂಲ ಮಟ್ಟದ ಪ್ರಜಾಪ್ರಭುತ್ವವನ್ನು ಬಲಪಡಿಸುವ ಆಶಯವನ್ನು ಆ ಪಕ್ಷ ಹೊಂದಿದೆ.



ಒಂದು ರಾಜಕೀಯ ಪಕ್ಷ ಸಿದ್ಧಾಂತದಿಂದ ವಿಮುಖವಾಗಿ ಇರಬಲ್ಲದೆ ಎಂಬುದು ಗಂಭೀರವಾದ ಪ್ರಶ್ನೆ. ತತ್ವ, ಕಲ್ಪನೆ (ಅದು ಯಾವುದೇ ಆಗಿರಲಿ) ಇದ್ದರೆ, ಅವು ಕ್ರಮೇಣ ಸಿದ್ಧಾಂತವಾಗಿ ಹೊರಹೊಮ್ಮುವುದಿಲ್ಲವೇ? ಒಂದು ರಾಜಕೀಯ ಪಕ್ಷದ ಪ್ರಣಾಳಿಕೆಯ ಹಿಂದೆ ತತ್ವದ ಆಧಾರವಿರುವುದಿಲ್ಲವೇ? ಈ ನಿಟ್ಟಿನಲ್ಲಿ, ಎಎಪಿಯು ತನಗೆ ಸಿದ್ಧಾಂತವಿಲ್ಲ ಎಂದಿರುವುದು ಸಮಂಜಸವೆನ್ನಿಸುವುದಿಲ್ಲ. ದೆಹಲಿ ವಿಧಾನಸಭೆಯ ಚುನಾವಣೆಯಲ್ಲಿ ಅಗ್ರಸ್ಥಾನವನ್ನು ಬಿಜೆಪಿ ಪಡೆಯಿತು. ಆದರೆ ಅದು ಕರ್ನಾಟಕದಲ್ಲಿ ಜಾರಿ ಮಾಡಿದಂತಹ 'ಆಪರೇಷನ್ ಕಮಲ'ಕ್ಕೆ ಚಾಲನೆ ನೀಡಲಿಲ್ಲ! ಇದು ಆ ಪಕ್ಷದ ರಾಜಕೀಯ ನೈತಿಕತೆಯಿಂದ ಮೂಡಿದ ನಿರ್ಧಾರವೆಂದು ಭಾವಿಸಬೇಕಾಗಿಲ್ಲ! 'ಆಯಾ ರಾಮ್ ಗಯಾ ರಾಮ್', 'ಆಪರೇಷನ್ ಕಮಲ' ಮುಂತಾದ ಸಂವಿಧಾನಕ್ಕೆ ಚ್ಯುತಿ ತರುವಂತಹ ಕಾರ್ಯಾಚರಣೆಗಳಲ್ಲಿ ಕಾಂಗ್ರೆಸ್ ಮತ್ತು ಬಿಜೆಪಿ ಪಕ್ಷಗಳೆರಡೂ ಎತ್ತಿದ ಕೈ ಎನ್ನುವುದಕ್ಕೆ ಹಲವು ನಿದರ್ಶನಗಳು ನಮ್ಮೆದುರಿಗಿವೆ. ಇದಕ್ಕೆ ವ್ಯತಿರಿಕ್ತವಾಗಿ ಎಎಪಿ, ತಾನು ಕಾಂಗ್ರೆಸ್ ಬೆಂಬಲದೊಂದಿಗೆ ಸರ್ಕಾರವನ್ನು ರಚಿಸಬೇಕೋ ಅಥವಾ ಬೇಡವೋ ಎಂದು ಜನಮತ ಸಂಗ್ರಹಕ್ಕೆ ಮುಂದಾಯಿತು. ಇದಕ್ಕೆ, ಜನರಿಂದ ಪತ್ರಗಳು, ಎಸ್‌ಎಂಎಸ್ ಮತ್ತು ಸಾಮಾಜಿಕ ಮಾಧ್ಯಮಗಳ ಸಂದೇಶಗಳ ಮೂಲಕ ಹಸಿರು ನಿಶಾನೆ ದೊರಕಿತು. ಅಲ್ಲದೆ, ಈ ವಿಷಯಕ್ಕೆ ಸಂಬಂಧಿಸಿದಂತೆ ಎಎಪಿಯ ನಾಯಕರು ಹಲವು ಸಭೆಗಳನ್ನು ನಡೆಸಿದರು. ಇವುಗಳಲ್ಲೂ ಧನಾತ್ಮಕ ಪ್ರತಿಕ್ರಿಯೆ ವ್ಯಕ್ತವಾಯಿತು. ಈ ಆಧಾರದ ಮೇಲೆ ಅದು ಸರ್ಕಾರ ರಚನೆಗೆ 'ಅಸ್ತು' ಎಂದಿತು. ಇದು ಎಎಪಿಯ ಸದಸ್ಯರು, ಕಾರ್ಯಕರ್ತರು ಮತ್ತು ಬೆಂಬಲಿಗರಿಂದ ಮಾತ್ರ ಪಡೆದ ಜನಮತ ಸಂಗ್ರಹವೆಂದು ಬಿಜೆಪಿ ಆರೋಪಿಸಿತು.




ಎಎಪಿ ಒಂದು ಪ್ರಹಸನದ ಮೂಲಕ ದೆಹಲಿ ರಾಜ್ಯ ಸರ್ಕಾರದ ಅಧಿಕಾರ ಗದ್ದುಗೆಯನ್ನು ಏರಿತು. ಅದೇ, ರಾಮಲೀಲಾ ಮೈದಾನದಲ್ಲಿ ಪ್ರಮಾಣ ವಚನ ಕಾರ್ಯಕ್ರಮದಲ್ಲಿ ಭಾಗವಹಿಸಲು ಅರವಿಂದ್ ಕೇಜ್ರಿವಾಲ್ ಮತ್ತವರ ಸಚಿವರ ತಂಡ ಕೈಗೊಂಡ ಮೆಟ್ರೊ ರೈಲು ಪಯಣ. ಇಂತಹ ಪ್ರದರ್ಶನವನ್ನು ಅನೇಕ ರಾಜಕೀಯ ಪಕ್ಷಗಳು ಮಾಡುತ್ತ ಬಂದಿರುವುದಕ್ಕೆ ಹಲವು ನಿದರ್ಶನಗಳು ಇವೆ. ತಾನು ಭಿನ್ನ ಪಕ್ಷ ಎಂದು ಸಾರುತ್ತ ಬಂದಿರುವ ಎಎಪಿಯಿಂದ ಇಂತಹ ಪ್ರಹಸನವನ್ನು ರಾಜಕೀಯ ಪ್ರಜ್ಞೆಯುಳ್ಳವರು ನಿರೀಕ್ಷಿಸಿರಲಿಲ್ಲ. ಎಎಪಿ ಸರ್ಕಾರ ರಚನೆಯಾದ ಅಲ್ಪ ಸಮಯದಲ್ಲೇ, ಅದರ ಕಾನೂನು ಸಚಿವ ಸೋಮನಾಥ್ ಭಾರ್ತಿ ವಿವಾದಕ್ಕೆ ಸಿಲುಕಿದರು. ಅದು ಅವರು ವಕೀಲ ವೃತ್ತಿಯಲ್ಲಿ ನಿರತರಾಗಿದ್ದಾಗ ಸಾಕ್ಷ್ಯ ತಿದ್ದಿದ ಪ್ರಮಾದವೊಂದರ ವಿಷಯಕ್ಕೆ ಸಂಬಂಧಿಸಿತ್ತು. ಆದರೆ ಕೆಲವು ದಿನಗಳಲ್ಲೇ, ಈ ಸುದ್ದಿ ಮೂಲೆಗುಂಪಾಯಿತು!

ಕೆಲವು ವಾರಗಳ ನಂತರ ಪುನಃ ಇದೇ ಸಚಿವ ಮತ್ತೊಂದು ಗಂಭೀರವಾದ ವಿವಾದದ ಕೇಂದ್ರಬಿಂದು ವಾಗಿದ್ದರು. ಎಎಪಿಯ ಕೆಲವು ಕಾರ್ಯಕರ್ತರ ಒಂದು ಗುಂಪಿನ ನೇತೃತ್ವವನ್ನು ವಹಿಸಿ, ಕಾನೂನನ್ನು ಕೈಗೆತ್ತಿಕೊಂಡು, ಅವರು ಆಫ್ರಿಕಾ ಮೂಲದ ಕೆಲವು ಯುವತಿಯರ ಮೇಲೆ ಅಪರಾತ್ರಿಯ ವೇಳೆ ದಾಳಿ ಮಾಡಿದರು. ಈ ಕ್ರಿಯೆಯನ್ನು ಮುಖ್ಯಮಂತ್ರಿ ಅರವಿಂದ್ ಕೇಜ್ರಿವಾಲ್ ಸಮರ್ಥಿಸಿದರು. ಡೆನ್ಮಾರ್ಕ್ ಮಹಿಳೆಯ ಅತ್ಯಾಚಾರ ಪ್ರಕರಣ ಮತ್ತು ಮೇಲಿನ ಘಟನೆಗೆ ಸಂಬಂಧಿಸಿದಂತೆ, ನಾಲ್ಕು ಪೊಲೀಸ್ ಅಧಿಕಾರಿಗಳನ್ನು ವರ್ಗಾಯಿಸ ಬೇಕೆಂದು, ಅವರು ಧರಣಿ ಸತ್ಯಾಗ್ರಹವನ್ನು ಹೂಡಿದರು. ತೆರೆಮರೆಯ ಸಂಧಾನ ಜರುಗಿತು. ಒಂದೇ ದಿನದಲ್ಲಿ, ಈ ನಾಟಕೀಯ ಘಟನೆ ಮುಕ್ತಾಯವಾಯಿತು. ಈ ಸಂದರ್ಭದಲ್ಲಿ, ಅವರು ಗಣರಾಜ್ಯೋತ್ಸವದ ಬಗೆಗೆ ಲಘುವಾಗಿ ಮಾತನಾಡಿದ್ದು, ತಾವು 'ಅರಾಜಕವಾದಿ' ಎಂದು ಬಣ್ಣಿಸಿಕೊಂಡಿದ್ದು ಟೀಕೆಗೆ ಒಳಗಾಯಿತು. ಹಾಗೆಯೇ, ಪಕ್ಷದ ಕರೆಗೆ ಓಗೊಟ್ಟು ವಿದ್ಯುಚ್ಛಕ್ತಿ ಬಿಲ್‌ಗಳನ್ನು ಪಾವತಿ ಮಾಡದ ಬೆಂಬಲಿಗರಿಗೆ ಶೇ. ೫೦ರಷ್ಟು ರಿಯಾಯತಿ ಕೊಡುವ ಮತ್ತು ದಂಡ ಮಾಫಿ ಮಾಡುವ ನಿರ್ಧಾರ ಕೂಡ. ಇವೆಲ್ಲ, ಮಾಧ್ಯಮಗಳಲ್ಲಿ ವ್ಯಾಪಕವಾಗಿ ವರದಿಯಾದವು.

ಕೊನೆಗೆ, ಜನಲೋಕಪಾಲ ವಿಧೇಯಕ ವಿಧಾನಸಭೆಯಲ್ಲಿ ಬಿದ್ದುಹೋದಾಗ, ಅರವಿಂದ್ ಕೇಜ್ರಿವಾಲ್ ರಾಜೀನಾಮೆ ನೀಡಿದರು. ಹೀಗೆ, ಪರ್ಯಾಯ ಆಡಳಿತ ನೀಡುತ್ತೇವೆಂದು ಜೋರಾಗಿ ಪ್ರತಿಪಾದಿಸಿದ ಎಎಪಿ, ಲೋಕಸಭೆಯ ಚುನಾವಣೆಯನ್ನು ಗಮನದಲ್ಲಿ ಇರಿಸಿಕೊಂಡು, ರಾಜೀನಾಮೆಯ ಆತುರದ ನಿರ್ಧಾರ ತೆಗೆದುಕೊಂಡು, ದಕ್ಕಿದ ಅವಕಾಶವನ್ನು ಬಳಸಿಕೊಳ್ಳುವುದರಲ್ಲಿ ವಿಫಲವಾಯಿತು ಎಂದು ಕೆಲವು ರಾಜಕೀಯ ವಿಶ್ಲೇಷಕರು ಅಭಿಪ್ರಾಯ ಮಂಡಿಸಿದರು.

ಆದರೆ, ಎಎಪಿ ಸರ್ಕಾರ, ಪತನದ ಕೆಲವು ದಿನಗಳ ಮುನ್ನ ಕೃಷ್ಣಾ-ಗೋದಾವರಿ ನದಿ ಪಾತ್ರದಿಂದ ತೆಗೆಯಲಾಗುವ ನೈಸರ್ಗಿಕ ಅನಿಲ ದರ ಏರಿಕೆ ನಿರ್ಧಾರ ವಿರೋಧಿಸಿ ರಿಲಯನ್ಸ್ ಮುಖ್ಯಸ್ಥ ಮುಖೇಶ್ ಅಂಬಾನಿ, ವೀರಪ್ಪ ಮೊಯ್ಲಿ ಮತ್ತು ಮುರಳಿ ದೇವ್ರಾ ವಿರುದ್ಧ ಎಫ್.ಐ.ಆರ್. ದಾಖಲಿಸಿದ್ದು ಗಮನೀಯ ಮತ್ತು ಪ್ರಶಂಸನೀಯ ವಿಚಾರ. ಆದರೆ ಇದೇನೂ ಹೊಸ ವಿಷಯವಲ್ಲ. ಏಕೆಂದರೆ ಎಡಪಕ್ಷಗಳು ಕಾರ್ಪೊರೇಟ್ ಶಕ್ತಿಗಳ ಕರಾಮತ್ತುಗಳು ಮತ್ತು ಸುಲಿಗೆಯ ವಿರುದ್ಧ ದನಿ ಎತ್ತುತ್ತಲೇ ಬಂದಿವೆ. ಭಾರತ ಕಮ್ಯುನಿಸ್ಟ್ ಪಕ್ಷ (ಸಿಪಿಐ)ದ ರಾಜ್ಯಸಭೆಯ ಸಂಸದ ಗುರುದಾಸ್ ದಾಸ್‌ಗುಪ್ತಾ ಸಂಸತ್ತಿನಲ್ಲಿ ಮತ್ತು ಹೊರಗೆ ನೈಸರ್ಗಿಕ ಅನಿಲ ದರ ಏರಿಕೆಯ ವಿಷಯದಲ್ಲಿ ರಿಲಯನ್ಸ್ ಕೈವಾಡದ ಬಗೆಗೆ ಜನರ ಗಮನವನ್ನು ಸೆಳೆದರು. ಈ ವಿಷಯದ ಆಳ, ವಿಸ್ತಾರಗಳ ಬಗೆಗೆ ಒಂದು ಹೊತ್ತಿಗೆಯನ್ನು ಬರೆದರು. ಸುಪ್ರೀಂ ಕೋರ್ಟಿನಲ್ಲಿ ಪಿಐಎಲ್ ದಾಖಲಿಸಿದರು. ಎಎಪಿ ಈ ಅಂಶಕ್ಕೆ ಚುನಾವಣಾ ಪ್ರಚಾರದಲ್ಲಿ ಒತ್ತು ನೀಡುತ್ತಿರುವುದು ಸ್ವಾಗತಾರ್ಹ ಬೆಳವಣಿಗೆ.

ಆದರೆ ಎಎಪಿ ಪಕ್ಷದ ಮುನ್ನೋಟ ದಸ್ತಾವೇಜನ್ನು

ವಿಶ್ಲೇಷಿಸಿದವರಿಗೆ, ಆ ಪಕ್ಷದ, ಮೇಲೆ ಪ್ರಸ್ತಾಪಿಸಿದಂತಹ ವರಸೆಗಳು, ಪ್ರಹಸನಗಳು ಮತ್ತು ವಿವಾದಗಳು ಅಚ್ಚರಿಯನ್ನುಂಟುಮಾಡುವುದಿಲ್ಲ. ಮುನ್ನೋಟ ದಸ್ತಾವೇಜಿನಲ್ಲಿ ನಮ್ಮ ಸಂವಿಧಾನದ ಪೀಠಿಕಾ ಭಾಗವನ್ನು ಉಲ್ಲೇಖಿಸಲಾಗಿದೆ. ಇದರರ್ಥ, ಆ ಪಕ್ಷ ಸಂಸದೀಯ ಪ್ರಜಾಪ್ರಭುತ್ವವನ್ನಾಗಲೀ ಅಥವಾ ಪ್ರಜಾಪ್ರಭುತ್ವದ ಮೂಲ ತತ್ವಗಳನ್ನಾಗಲೀ ಎತ್ತಿ ಹಿಡಿಯುತ್ತದೆ ಎಂದಲ್ಲ. ಏಕೆಂದರೆ, ಆ ದಸ್ತಾವೇಜಿನ ಪ್ರಥಮ ಭಾಗದಲ್ಲೇ "ಹಮ್ ಸತ್ತಾ ಕೆ ಕೇಂದ್ರ ಕೊ ಧ್ವಸ್ತ್ ಕರ್ಕೆ ರಾಜನೀತಿಕ್ ಸತ್ತಾ ಸೀದೇ ಜನತಾ ಕೆ ಹಾಥ್‌ಮೆ ದೇನೆ ಜಾ ರಹೆ ಹೈ" (ನಾವು ಅಧಿಕಾರದ ಕೇಂದ್ರಗಳನ್ನು ಧ್ವಂಸ ಮಾಡಿ, ರಾಜಕೀಯ ಅಧಿಕಾರವನ್ನು ನೇರವಾಗಿ ಜನತೆಯ ಕೈಗೆ ನೀಡುತ್ತೇವೆ) ಎಂಬ ಹೇಳಿಕೆಗೆ ಒತ್ತನ್ನು ನೀಡಲಾಗಿದೆ. ಈ ದಸ್ತಾವೇಜಿನ ಕರ್ತೃಗಳಿಗೆ, ನಮ್ಮ ಸಂವಿಧಾನದಡಿ, ರಾಜಕೀಯ ಅಧಿಕಾರದ ಪರಮೋಚ್ಚ ಕೇಂದ್ರವೆಂದರೆ ಅದು ಭಾರತದ ಸಂಸತ್ತು ಎಂದು ತಿಳಿದೇಇರುತ್ತದೆ. ಆದುದರಿಂದ ಎಎಪಿಯ ಈ ಹೇಳಿಕೆ 'ಅರಾಜಕವಾದಿ' ಎಂದೆನಿಸುವುದಿಲ್ಲವೇ ? ಇಂತಹ ನಿಲುವು ನಕ್ಸಲೀಯರದ್ದೂ ಆಗಿದೆ. ಆದರೆ ನಕ್ಸಲೀಯರ ಸಿಪಿಐ (ಮಾವೋವಾದಿ) ಪಕ್ಷವನ್ನು ಕೇಂದ್ರ ಸರ್ಕಾರ ನಿಷೇಧಿಸಿದೆ. ಸ್ವಾತಂತ್ರ್ಯ ಗಳಿಸಿದ ಒಂದೆರಡು ವರ್ಷಗಳಲ್ಲೇ, ಅವಿಭಜಿತ ಭಾರತ ಕಮ್ಯುನಿಸ್ಟ್ ಪಕ್ಷ, ಸಮಸಮಾಜ ರಚಿಸಲು ಶಸ್ತ್ರಾಸ್ತ್ರ ಹೋರಾಟ ಮಾರ್ಗವನ್ನು ಕೈಬಿಟ್ಟು ಸಂಸದೀಯ ಪ್ರಜಾಪ್ರಭುತ್ವ ವ್ಯವಸ್ಥೆ ಒಪ್ಪಿಕೊಂಡಿದ್ದನ್ನು ಸ್ಮರಿಸಬಹುದು. ಆದರೂ ಎಡಪಂಥೀಯರನ್ನು ಈಗಲೂ ಆಗಾಗ್ಗೆ 'ಅರಾಜಕವಾದಿಗಳು' ಎಂದು ದೂಷಿಸಲಾಗುತ್ತದೆ! ನಮ್ಮ ಪ್ರಭುತ್ವ, ಎಎಪಿಯ ಅರಾಜಕತೆಯ ನಿಲುವನ್ನು ಹೇಗೆ ಅರ್ಥೈಸುತ್ತದೆ ಮತ್ತು ಸಮರ್ಥಿಸುತ್ತದೆ ಎಂಬುದನ್ನು ಕಾದು ನೋಡಬೇಕು.



ಎಎಪಿಯ ಮುನ್ನೋಟ ದಸ್ತಾವೇಜನ್ನು ವಿಶ್ಲೇಷಿಸಿದಾಗ, ಕೆಳಕಂಡ ಇತರ ಕೆಲವು ಅಂಶಗಳು ವೇದ್ಯವಾಗುತ್ತವೆ :

ಅ) ಎಎಪಿ ಭ್ರಷ್ಟಾಚಾರ ಕೇಂದ್ರಿತ ಪಕ್ಷವಾಗಿದೆ. ಭಾರತವನ್ನು ಒಳಗೊಂಡು ಪ್ರಪಂಚದಾದ್ಯಂತ ವ್ಯಾಪಕವಾಗಿ ಹರಡಿರುವ ಅಸಮಾನತೆಯನ್ನು ಪೊರೆಯುವ ಶೋಷಕ ಆರ್ಥಿಕ ವ್ಯವಸ್ಥೆಯನ್ನು ಪಲ್ಲಟಗೊಳಿಸಲು ದೀರ್ಘ, ತೃಣಮೂಲ ಮಟ್ಟದ, ಎಲ್ಲ ಜನವರ್ಗಗಳನ್ನು ಒಳಗೊಂಡ ಹೋರಾಟಗಳ ಅವಶ್ಯಕತೆಯಿದೆ. ಈ ಪಕ್ಷಕ್ಕೆ ಸಂಪತ್ತು / ಸಂಪನ್ಮೂಲಗಳ ನ್ಯಾಯಯುತ ವಿತರಣೆ ಬಗೆಗೆ ಖಚಿತ ನೀತಿಗಳಿಲ್ಲ. ಈ ಪಕ್ಷದ ಪ್ರಮುಖ ನೇತಾರ ಯೋಗೇಂದ್ರ ಯಾದವ್ ಸಂದರ್ಶನವೊಂದರಲ್ಲಿ, ಎಡಪಕ್ಷಗಳಿರುವ ತೃತೀಯರಂಗದ ಬಗೆಗಿನ ಪ್ರಶ್ನೆಯನ್ನು ಉತ್ತರಿಸುತ್ತ ತಮ್ಮ ಪಕ್ಷ ೧೯ನೇ ಶತಮಾನದ ಸಿದ್ಧಾಂತವನ್ನು ಆಧರಿಸುವುದಿಲ್ಲ ಎಂದು ಸ್ಪಷ್ಟವಾಗಿ ತಿಳಿಸಿದ್ದಾರೆ. ಇದರಿಂದ ಈ ಪಕ್ಷ ಸಮಾಜವಾದದ ಪರವಾಗಿ ಇಲ್ಲ ಎಂದು ಅರಿಯಬಹುದು.

ಆ) ನವಉದಾರವಾದಿ ನೀತಿಗಳು ಜಗತ್ತಿನಾದ್ಯಂತ ತಮ್ಮ ಪ್ರತಿಕೂಲ ಪರಿಣಾಮ ಗಳನ್ನು ಅಭಿವೃದ್ಧಿಶೀಲ ಮತ್ತು ಬಡ ದೇಶಗಳ ಮೇಲೆ ಬೀರುತ್ತಿವೆ. ಈ ದೇಶಗಳಲ್ಲಿರುವ ನೈಸರ್ಗಿಕ /ಸಾರ್ವಜನಿಕ ಸಂಪನ್ಮೂಲಗಳನ್ನು ಲೂಟಿ ಮಾಡುವ ಯಾಜಮಾನ್ಯ ಶಕ್ತಿಗಳಿಗೆ ಪುಷ್ಟಿ ನೀಡುತ್ತಿವೆ. ಮುನ್ನೋಟದ ದಸ್ತಾವೇಜಿನಲ್ಲಿ ಗಣಿಗಾರಿಕೆಯಿಂದ ಉಂಟಾಗುವ ಆದಿವಾಸಿಗಳ ನಿರ್ವಸತಿ ಗಂಡಾಂತರಗಳಂತಹ ವಿಷಯಗಳ ಪ್ರಸ್ತಾಪವಿದೆ. ಆದರೂ ಈ ನೀತಿಗಳ ಬಗೆಗೆ ಎಎಪಿಗೆ ಒಂದು ರ್‍ಯಾಡಿಕಲ್ ಮತ್ತು ನಿರ್ದಿಷ್ಟ ನಿಲುವು ಇಲ್ಲ.

ಇ) ದಸ್ತಾವೇಜಿನಲ್ಲಿ ಶಿಕ್ಷಣ ಮತ್ತು ಆರೋಗ್ಯದಂತಹ ವಿಷಯಗಳ ಪ್ರಸ್ತಾಪವೂ ಇದೆ. ಖಾಸಗಿ ರಂಗದಲ್ಲಿರುವ ಶಾಲೆಗಳು / ಆಸ್ಪತ್ರೆಗಳ ಸೌಲಭ್ಯಗಳು ಸರ್ಕಾರಿ ವಲಯದ ಎಲ್ಲ ಮಟ್ಟದಲ್ಲೂ ದೊರಕಬೇಕು ಎಂಬ ದೃಷ್ಟಿಕೋನವನ್ನು ವ್ಯಕ್ತಪಡಿಸಲಾಗಿದೆ. ಆದರೆ ಇತ್ತೀಚಿನ ದಶಕಗಳಲ್ಲಿ ನಮ್ಮ ಸರ್ಕಾರಗಳು ಕಲ್ಯಾಣ ರಾಜ್ಯದ ಪರಿಕಲ್ಪನೆಗೆ ಕೊಡಲಿ ಪೆಟ್ಟು ನೀಡಿವೆ. ಅಂತರರಾಷ್ಟ್ರೀಯ ಸಂಸ್ಥೆಗಳ ಷರತ್ತು / ಆದೇಶಗಳಿಗೆ ಅನುಗುಣವಾಗಿ ಸರ್ಕಾರಗಳು ಶಿಕ್ಷಣ ಮತ್ತು ಆರೋಗ್ಯದಂತಹ ಆದ್ಯತಾ ಕ್ಷೇತ್ರಗಳನ್ನೂ ಬಹುಮಟ್ಟಿಗೆ ಖಾಸಗೀಕರಣಕ್ಕೆ ಒಳಪಡಿಸಿವೆ. ಈ ನಿಟ್ಟಿನಲ್ಲಿ, ಮಾರುಕಟ್ಟೆ ಆಧಾರಿತ ಆರ್ಥಿಕ ವ್ಯವಸ್ಥೆಗೆ ಇಂಬು ಕೊಡುವ 'ಸರಕೀಕರಣ'ದ ಪ್ರಕ್ರಿಯೆಗೆ ಎಲ್ಲ ಸಾಮಾಜಿಕ ಕ್ಷೇತ್ರಗಳು ಬಲಿಯಾಗುತ್ತಿರುವಾಗ, ಎಎಪಿಗೆ ಇದರ ಕುರಿತು ಸ್ಪಷ್ಟವಾದ ನಿಲುವುಗಳಿಲ್ಲ.

ಅಲ್ಲದೆ, ದಸ್ತಾವೇಜಿನಲ್ಲಿ, ಅಂತರರಾಷ್ಟ್ರೀಯ ಪ್ರಕ್ರಿಯೆಗಳ ಬಗ್ಗೆ ಹೇಳಿಕೊಳ್ಳುವಂತಹ ಪ್ರಸ್ತಾಪಗಳೇ ಇಲ್ಲ. ಅಮೆರಿಕ ನೇತೃತ್ವದ ನವ ಸಾಮ್ರಾಜ್ಯಶಾಹಿ ಶಕ್ತಿಗಳ ಅಟ್ಟಹಾಸ, ಅಮೆರಿಕ-ಇಸ್ರೇಲ್‌ಗಳ ಹುನ್ನಾರಗಳು, ಇಡೀ ಪಶ್ಚಿಮ ಏಷ್ಯಾದಲ್ಲಿ ತಾಂಡವವಾಡುತ್ತಿರುವ ತಲ್ಲಣ, ಲ್ಯಾಟಿನ್ ಅಮೆರಿಕದಲ್ಲಿ ಜರುಗುತ್ತಿರುವ ಪ್ರಜಾತಾಂತ್ರಿಕ ಪ್ರಯೋಗಗಳು ಇತ್ಯಾದಿ ಗಹನ ವಿಚಾರಗಳ ಬಗೆಗೆ ತಳಸ್ಪರ್ಶಿ ವಿಮರ್ಶೆಯೇ ಇಲ್ಲ. ಬೇರೆ ಮಾತುಗಳಲ್ಲಿ ಹೇಳುವುದಾದರೆ, ಎಎಪಿ ಈ ವಿಷಯಗಳಿಗೆ ಸ್ಪಂದಿಸಿಯೇ ಇಲ್ಲ ಎಂದರೆ ತಪ್ಪಾಗುವುದಿಲ್ಲ. ಕೇಂದ್ರ ಸರ್ಕಾರದ ಅಧಿಕಾರ ಗದ್ದುಗೆ ಮೇಲೆ ಕಣ್ಣಿಟ್ಟಿರುವ ಎಎಪಿಯ ಈ ದೃಷ್ಟಿಕೋನ ಕ್ಷಣ ಭಂಗುರವಾದದ್ದು.

ಆದಾಗ್ಯೂ, ಭಾರತದ ಎರಡು ಪ್ರಮುಖ ರಾಜಕೀಯ ಪಕ್ಷಗಳಾದ ಕಾಂಗ್ರೆಸ್ ಮತ್ತು ಬಿಜೆಪಿಗೆ ಎಎಪಿ ದೆಹಲಿಯಲ್ಲಿ ಒಂದು ಧಕ್ಕಾ ಕೊಟ್ಟಿರುವುದು ನಗಣ್ಯ ವಿಷಯವಲ್ಲ. ಎಎಪಿ ತನ್ನ ಶಕ್ತಿಯ ವಾಸ್ತವತೆಯನ್ನು ಪರಿಗಣಿಸಿ, ತೃತೀಯ ರಾಜಕೀಯ ಶಕ್ತಿಯ ಬೆಳವಣಿಗೆಗೆ ಸೂಕ್ತ ಕೊಡುಗೆಗಳನ್ನು ನೀಡುವುದೇ ? ಎಂಬುದು ಪ್ರಜ್ಞಾವಂತ ರಾಜಕೀಯ ಕಾರ್ಯಕರ್ತರ ಮುಂದಿರುವ ಪ್ರಶ್ನೆ.


ಮ. ಶ್ರೀ. ಮುರಳಿ ಕೃಷ್ಣ
೩೮, ೩ನೇ ಕ್ರಾಸು, ರಾಜ ಗಾರ್ಡನಿಯ ಲೇಔಟ್, ತುರಹಳ್ಳಿ, ಸುಬ್ರಹ್ಮಣ್ಯಪುರ ಅಂಚೆ, ಬೆಂ. ೬೧


## ಸುದ್ದಿ ಚಿತ್ರ



ದಿನಾಂಕ ೧೪-೨-೨೦೧೪ರಂದು ಮಂಗಳೂರಿನಲ್ಲಿ ನಡೆದ ೫ನೇ ಅಖಿಲ ಕರ್ನಾಟಕ ಬೆಳದಿಂಗಳ ಸಾಹಿತ್ಯ ಸಮ್ಮೇಳನದಲ್ಲಿ ವಿವಿಧ ಸಾಹಿತ್ಯಿಕ ಕಾರ್ಯಕ್ರಮಗಳನ್ನು ಆಯೋಜಿಸಲಾಗಿತ್ತು. ಡಾ॥ ನಾ. ಮೊಗಸಾಲೆ ಅವರ ಅಧ್ಯಕ್ಷತೆಯಲ್ಲಿ ನಡೆದ ಈ ಸಮಾರಂಭದಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಮಾಜಿ ಅಧ್ಯಕ್ಷರು ನವಕರ್ನಾಟಕ ಪ್ರಕಾಶನ, ಬೆಂಗಳೂರು ಇವರಿಗೆ ಸಾಂಸ್ಥಿಕ 'ಸಾಧನಾ ಗೌರವ' ನೀಡಿ ಕೃತಜ್ಞತಾ ಪ್ರಮಾಣಪತ್ರವನ್ನು ನೀಡಿದರು. ಪ್ರಕಾಶನದ ಪರವಾಗಿ ನವಕರ್ನಾಟಕದ ಮಂಗಳೂರು ಶಾಖೆಯ ವ್ಯವಸ್ಥಾಪಕರಾದ ಶ್ರೀ ಹರೀಶ್ ಗೌರವವನ್ನು ಸ್ವೀಕರಿಸಿದರು.

# ಕ್ಷ - ಕಿರಣ

ಪ್ರಕಾಶ್ ಎಸ್.








ಬಿ. ರಾಜಶೇಖರಮೂರ್ತಿ

# ಜಾಗತೀಕರಣದ ಪರ್ವದಲ್ಲಿ ಹೆಚ್ಚುತ್ತಿರುವ ನಿರುದ್ಯೋಗ

೧೯೯೦-೯೧ರಿಂದ ಇತ್ತೀಚಿನವರೆಗೆ, ಅಂದರೆ ಎರಡು ದಶಕಗಳು ಕಾಂಗ್ರೆಸ್ ಮತ್ತು ಬಿಜೆಪಿಗಳೆರಡೂ ಕೇಂದ್ರ ಮತ್ತು ರಾಜ್ಯಗಳಲ್ಲಿ ಉದಾರೀಕರಣ-ಖಾಸಗೀಕರಣ-ಜಾಗತೀಕರಣದ ಮುಕ್ತ ನೀತಿಗಳನ್ನು ಶರವೇಗದಲ್ಲಿ ಜಾರಿಗೆ ತಂದ ಕಾಲಾವಧಿಯಾಗಿದೆ. ಈ ಉ-ಖಾ-ಜಾ ನೀತಿಗಳು ಎಲ್ಲಾ ಕ್ಷೇತ್ರಗಳಲ್ಲೂ ಮುಕ್ತ ಮಾರುಕಟ್ಟೆಯನ್ನು ವಿಸ್ತರಿಸಲು ಅನಿಯಂತ್ರಣವನ್ನು ಬಯಸಿದವು. ಅಂದರೆ ದೇಶ ವಿದೇಶಗಳ ಖಾಸಗಿ ಬಹುರಾಷ್ಟ್ರೀಯ ಕಂಪನಿಗಳು ಯಾವುದೇ ನಿರ್ಬಂಧವಿಲ್ಲದೆ ತಮ್ಮ ಖಾಸಗಿ ಕಂಪನಿಗಳ ವಹಿವಾಟುಗಳನ್ನು ನಡೆಸುವುದು. ಅಲ್ಲದೆ, ಬಹುಮುಖ್ಯವಾಗಿ ಖಾಸಗಿ ಕಂಪನಿಗಳು ಸಾಮಾಜಿಕ ಹೊಣೆಗಾರಿಕೆ ಮತ್ತು ಸಾಮಾಜಿಕ ಜವಾಬ್ದಾರಿಯಿಂದ ಮುಕ್ತಿ ಪಡೆಯುವುದು. ಇದರಿಂದಾಗಿ ಎಂತಹದ್ದೇ ದಾರಿ ಹಿಡಿದರೂ ಸರಿ, ಕೇವಲ ಲಾಭವೇ ಅಂತಿಮ ಗುರಿಯಾಯಿತು. ಹೀಗಾಗಿಯೇ ಖಾಸಗಿ ವಲಯದಲ್ಲಿನ ಉದ್ಯೋಗಸ್ಥರಿಗೆ ಕನಿಷ್ಠ ಉದ್ಯೋಗ ಭದ್ರತೆಯನ್ನು ಒದಗಿಸಿ ಎಂದು ಹೇಳುವ ಎದೆಗಾರಿಕೆ ಆಳುವ ಸರ್ಕಾರಗಳಿಗಿಲ್ಲ. ಹೀಗಾಗಿಯೇ ಖಾಸಗಿ ಕಂಪನಿಗಳು ವಿಶ್ವದಲ್ಲಿ ಏಕಸ್ವಾಮ್ಯ ಅಧಿಪತ್ಯವನ್ನು ಸಾಧಿಸುತ್ತಿವೆ. ಅಷ್ಟೇ ಅಲ್ಲ, ಸರ್ಕಾರಗಳ ಅಧೀನದಲ್ಲಿರುವ ಸಾರ್ವಜನಿಕ ಕಂಪನಿಗಳಲ್ಲಿ ಖಾಸಗಿ ಸಹಭಾಗಿತ್ವಕ್ಕೆ ಅವಕಾಶ ನೀಡುವುದು, ಸಾರ್ವಜನಿಕ ವಲಯಗಳಲ್ಲಿ ಖಾಸಗಿ ಕಂಪನಿಗಳ ಷೇರುಗಳಿಗೆ ಅವಕಾಶ ನೀಡುವುದು, ಅಂತೆಯೇ ಹಂತ ಹಂತವಾಗಿ ಸಂಪೂರ್ಣವಾಗಿ ಸಾರ್ವಜನಿಕ ಉದ್ದಿಮೆಗಳ ಮೇಲೂ ಹಿಡಿತವನ್ನು ಸಾಧಿಸುತ್ತಿವೆ.

ಸಮಾಜ ಕಲ್ಯಾಣ ಕ್ಷೇತ್ರಗಳಿಗೂ ಖಾಸಗಿ ಕಂಪನಿಗಳು ಲಗ್ಗೆ ಇಟ್ಟು ಶಿಕ್ಷಣ, ಆರೋಗ್ಯ, ಮೂಲಭೂತ ಸೌಕರ್ಯ ಮುಂತಾದ ವಲಯಗಳಲ್ಲೂ ಕೇವಲ ಲಾಭಕೋರ ನೀತಿಗಳನ್ನು ಹರಿಯಬಿಡುತ್ತಿವೆ. ಇದರಿಂದಾಗಿ ಆಳುವ ಸರ್ಕಾರಗಳು ಸಾಮಾನ್ಯ ಜನತೆಗೆ ಒದಗಿಸಬೇಕಾದ ಅಗತ್ಯ ಸೌಲಭ್ಯಗಳನ್ನು ತಡೆಹಿಡಿಯುವುದು ಸಾಮಾನ್ಯವಾಗಿಬಿಟ್ಟಿದೆ. ಇಂದು ಶಿಕ್ಷಣದ ವ್ಯಾಪಾರೀಕರಣದಿಂದಾಗಿ ಶಿಶುವಿಹಾರಗಳಿಂದ ವೃತ್ತಿ ಶಿಕ್ಷಣದವರೆಗೆ ಲಕ್ಷ-ಕೋಟಿಗಳ ಹಗಲು ದರೋಡೆ ಮಾಡಲು ಕಾನೂನಿನಲ್ಲೇ ಖಾಸಗಿ ಶಿಕ್ಷಣ ಸಂಸ್ಥೆಗಳಿಗೆ ಅವಕಾಶ ಮಾಡಿಕೊಡಲಾಗಿದೆ. ಇದೇ ಅವಕಾಶವನ್ನು ಖಾಸಗಿ ಆಸ್ಪತ್ರೆಗಳಿಗೂ ನೀಡಲಾಗಿದೆ. ಹೀಗಾಗಿ ದುಡ್ಡಿದ್ದವರಿಗೆ ಶಿಕ್ಷಣ-ಉದ್ಯೋಗ, ಆರೋಗ್ಯ, ಸುಖಜೀವನ ಮೀಸಲು. ಹೀಗಾಗಿಯೇ ಬಹುತೇಕವಾಗಿ ಬಡಜನರು ಶಿಕ್ಷಣ, ಉದ್ಯೋಗ, ಆರೋಗ್ಯ ಮುಂತಾದ ಅಗತ್ಯ ಸೌಲಭ್ಯಗಳಿಂದ ವಂಚಿತರಾಗುತ್ತಿದ್ದಾರೆ. ಜೊತೆಗೆ, ಕನಿಷ್ಠ ಅಗತ್ಯ ಮೂಲಭೂತ ಸೌಕರ್ಯಗಳಾದ ಆಹಾರ ಧಾನ್ಯಗಳು, ಹಾಲು, ನೀರು, ಇಂಧನ, ಪ್ರಯಾಣ ವೆಚ್ಚ ಮುಂತಾದವುಗಳಿಗೆ ದುಬಾರಿ ವೆಚ್ಚವನ್ನು ಭರಿಸುವುದು ಜನಸಾಮಾನ್ಯರಿಗೆ ಸಾಧ್ಯವಾಗುತ್ತಿಲ್ಲ.

ಜಾಗತೀಕರಣವೆಂದರೆ ಆಮದು ನೀತಿಗಳನ್ನು ಅತ್ಯಂತ ಸರಳಗೊಳಿಸುವುದು. ಸಂಬಂಧಿಸಿದ ನೀತಿ-ನಿರ್ಬಂಧಗಳನ್ನು ಸಂಪೂರ್ಣವಾಗಿ ಸಡಿಲಗೊಳಿಸುವುದು. ಅಂದರೆ ಹಣಕಾಸು ಬಂಡವಾಳ ನಮ್ಮ ದೇಶಕ್ಕೆ ಮತ್ತು ನಮ್ಮ ದೇಶದಿಂದ ಮುಕ್ತವಾಗಿ ಹರಿದಾಡಲು ರಹದಾರಿ ತೆರೆದಿಡುವುದು. ಜೊತೆಗೆ, ವಿದೇಶಿ ಬಂಡವಾಳವನ್ನು ಆಕರ್ಷಿಸುವುದು. ಉದಾಹರಣೆಗೆ, ಕೇಂದ್ರ-ರಾಜ್ಯ ಸರ್ಕಾರಗಳು ವಿದೇಶಿ ಬಂಡವಾಳ ಮೇಳಗಳನ್ನು ದೇಶ ವಿದೇಶಗಳಲ್ಲಿ ನಡೆಸುವುದು. ಹೀಗೆ ಮುಖ್ಯವಾಗಿ ಹಣಕಾಸು ಬಂಡವಾಳವನ್ನು ದೇಶಕ್ಕೆ ತರುವುದು ಮತ್ತು ಹೊರಗೆ ತೆಗೆದುಕೊಂಡು ಹೋಗುವುದು ಸರ್ವೇಸಾಮಾನ್ಯವಾಗಿ ಬಿಟ್ಟಿದೆ. ಈ ವಿಚಾರದಲ್ಲಿ ನಮ್ಮ ಸರ್ಕಾರಗಳು ಮೂಗು ತೂರಿಸುವಂತಿಲ್ಲ. ಯಾವುದೇ ನಿರ್ಬಂಧ ಹೇರುವಂತಿಲ್ಲ. ಅಷ್ಟೇ ಅಲ್ಲ, ಸರ್ಕಾರ ತನ್ನ ಸಮಾಜ ಕಲ್ಯಾಣ ಕಾರ್ಯಕ್ರಮಗಳನ್ನು ಕಡಿತಗೊಳಿಸಬೇಕು. ಜೊತೆಗೆ ಸಮಾಜ ಕಲ್ಯಾಣ ಯೋಜನೆಗಳಿಗಾಗಿ ಮೀಸಲಿಡುವ ಹಣದ ಮೊತ್ತವನ್ನು ಮಿತಿಗೊಳಿಸಬೇಕು. ಹೀಗಾಗಿಯೇ ನಮ್ಮ ಕೇಂದ್ರ-ರಾಜ್ಯ ಸರ್ಕಾರಗಳು ಶಿಕ್ಷಣ-ಆರೋಗ್ಯ ಮುಂತಾದ ಸಮಾಜ ಕಲ್ಯಾಣ ಸೌಲಭ್ಯಗಳಿಗೆ ಮತ್ತು ಸಾರ್ವಜನಿಕ ವಲಯಗಳಿಗೆ ನೀಡುವ ಹಣವನ್ನು ನಿರಂತರವಾಗಿ ಕಡಿತಮಾಡಿಕೊಂಡು ಬರುತ್ತಿರುವುದು. ಸರ್ಕಾರಗಳು ಖಾಸಗಿ ಕಾರ್ಪೊರೇಟ್ ಕಂಪನಿಗಳಿಗೆ ಲಕ್ಷಗಟ್ಟಲೆ ತೆರಿಗೆ ವಿನಾಯಿತಿಯನ್ನು ಕೊಡುತ್ತಿವೆ. ಕಳೆದ ಬಜೆಟ್‌ನಲ್ಲಿ ಕೇಂದ್ರ ಸರ್ಕಾರ ಖಾಸಗಿ ಕಂಪನಿಗಳಿಗೆ ೫ ಲಕ್ಷ ಕೋಟಿ ತೆರಿಗೆ ವಿನಾಯಿತಿ ನೀಡಿದ್ದನ್ನು ಇಲ್ಲಿ ಗಮನಿಸಬಹುದು. ಇದರಿಂದಾಗಿ ಖಾಸಗಿ ಕಂಪನಿಗಳು ಮಜಬೂತಾಗಿ ಬೆಳೆದುನಿಂತಿವೆ. ವಿದೇಶಗಳಲ್ಲೂ ಬಂಡವಾಳ ಹೂಡಲು ಮುಂದಾಗುತ್ತಿವೆ. ಇಂತಹ ನೀತಿಗಳನ್ನು ಕಳೆದ ಎರಡು ದಶಕಗಳ ಕಾಲದಿಂದ ಜಾರಿಗೆ ತರುತ್ತಿರುವುದು ಜನಸಾಮಾನ್ಯರ ಪಾಲಿಗೆ ವಿನಾಶಕಾರಿಯಾಗಿ ಪರಿಣಮಿಸಿದೆ. ಇಂತಹ ನವ ಉದಾರೀಕರಣದ ನೀತಿಗಳ ಪರಿಣಾಮ ದಿಂದಾಗಿ ೧೯೯೭ರಿಂದ ೨೦೧೨ರವರೆಗೆ ೨,೫೦,೦೦೦ ಲಕ್ಷ ರೈತರು ಆತ್ಮಹತ್ಯೆ ಮಾಡಿಕೊಂಡಿದ್ದಾರೆ. ದೇಶದ ಶೇ. ೮೦ರಷ್ಟು ಜನತೆಗೆ ಸಾಮಾನ್ಯವಾದ ಶಿಕ್ಷಣ-ಆರೋಗ್ಯ, ಉದ್ಯೋಗ ಭದ್ರತೆ ಇಲ್ಲದಂತಹ ಸ್ಥಿತಿ ಉಂಟಾಗಿದೆ. ಕೇವಲ ಶೇ. ೨೦ರಷ್ಟು ಜನ ಮಾತ್ರ ದೇಶದಲ್ಲಿ ಸ್ಥಿತಿವಂತರಾಗಿದ್ದಾರೆ. ಇಂತಹ ದುಸ್ಥಿತಿ ಇರುವಾಗಲೂ ಸ್ವಾರ್ಥ, ಸಾಮಾಜಿಕ ಹೊಣೆಗಾರಿಕೆರಹಿತ ಮನೋಭಾವವನ್ನು ಯುವಜನರಲ್ಲಿ

ಮೂಡಿಸಲಾಗುತ್ತಿದೆ. ಅತ್ಯಂತ ಸುಲಭದಲ್ಲಿ ಹಣ ಮಾಡುವುದು ಹೇಗೆ, ಅತ್ಯಂತ ತುತ್ತ ತುದಿಯ ಜೀವನವನ್ನು ಎಂಜಾಯ್ ಮಾಡುವುದು ಹೇಗೆ, ಎಂಬ ಭ್ರಮೆಯಲ್ಲಿ ಯುವಜನರನ್ನು ಮುಳುಗಿಸಲಾಗುತ್ತಿದೆ.

ನಿರುದ್ಯೋಗ ವ್ಯಾಪಕವಾಗಿ ದಿನೇ ದಿನೇ ಹೆಚ್ಚುತ್ತಿದೆ. ಉತ್ತಮ ಮತ್ತು ಭದ್ರತೆಯುಳ್ಳ ಉದ್ಯೋಗಕ್ಕಾಗಿ ೨೫ರಿಂದ ೩೦ ವರ್ಷಗಳ ಕಾಲ ಎಂ.ಎ., ಎಂ.ಎಸ್ಸಿ., ಎಂ.ಕಾಂ., ಪಿಎಚ್.ಡಿ., ಮುಂತಾದ ಪದವಿ ಗಳಿಸಿರುವ ಯುವಜನರು ಕಾರಕೂನ ಕೆಲಸಗಳಲ್ಲಿದ್ದಾರೆ. ಯಾವುದೇ ಭದ್ರತೆ ಇಲ್ಲದ ಸ್ವಯಂ ಉದ್ಯೋಗಗಳಲ್ಲಿ ನಿರತರಾಗಿ ನರಳುತ್ತಿದ್ದಾರೆ. ವಿದ್ಯಾವಂತ ಮತ್ತು ಅವಿದ್ಯಾವಂತ ಯುವಜನತೆ ನಗರ ಪ್ರದೇಶಗಳಿಗೆ ವಲಸೆ ಹೋಗುತ್ತಿದ್ದಾರೆ. ನಗರಗಳಲ್ಲಿ ಉತ್ತಮ ಮತ್ತು ತಮ್ಮ ಓದಿಗೆ ತಕ್ಕ ಉದ್ಯೋಗ ಸಿಗದೆ ಸಮಾಜಘಾತುಕ ಕೃತ್ಯಗಳಲ್ಲಿ ಯುವಜನರು ತೊಡಗುತ್ತಿದ್ದಾರೆ. ಹಾಗೊಮ್ಮೆ ಉದ್ಯೋಗ ದೊರಕಿದರೂ ವೇತನದ ಭದ್ರತೆ ಇಲ್ಲ. ಉದಾಹರಣೆಗೆ, ರಾಜ್ಯ ವಿವಿಧ ಇಲಾಖೆಗಳಲ್ಲಿ ೫ ಲಕ್ಷಕ್ಕೂ ಹೆಚ್ಚಿನ ಯುವಕರು ವಿವಿಧ ಹುದ್ದೆಗಳಲ್ಲಿದ್ದಾರೆ. ಇವರಿಗೆ ಕನಿಷ್ಠ ವೇತನ ಭದ್ರತೆ ಇಲ್ಲ. ಇನ್ನು ಖಾಸಗಿ ಕ್ಷೇತ್ರ ಮತ್ತು ಅಸಂಘಟಿತ ವಲಯದ ಕಾರ್ಮಿಕರ ಬಗ್ಗೆ ಹೇಳತೀರದು. ಹೀಗಾಗಿಯೇ ದೇಶದ ಅರ್ಧದಷ್ಟಿರುವ ಯುವ ಸಂಪತ್ತು ನಾಶಗೊಳ್ಳುತ್ತಿದೆ. ಇಂತಹ ಸ್ಥಿತಿಗೆ ದಬ್ಬಿರುವ ನವ ಉದಾರೀಕರಣ ನೀತಿಗಳ ಫಲವಾಗಿ ಸರ್ಕಾರಿ–ಖಾಸಗಿ ರಂಗದಲ್ಲಿ ಉದ್ಯೋಗ ಭದ್ರತೆ ಅಥವಾ ಉದ್ಯೋಗ ಸೃಷ್ಟಿಯ ಪ್ರಶ್ನೆಯೇ ಇಲ್ಲ. ಏನಿದ್ದರೂ ಖಾಸಗಿ ಕಂಪನಿಗಳಿಗೆ ಲಾಭಗಳಿಸುವುದೇ ಮೂಲ ಗುರಿ. ಹೀಗಾಗಿಯೇ ಖಾಸಗಿ–ಸರ್ಕಾರಿ ಇಲಾಖೆಗಳಲ್ಲೂ ದಿನಗೂಲಿ, ಗುತ್ತಿಗೆ, ಹೊರಗುತ್ತಿಗೆ, ಸಂಭಾವನೆ, ತರಬೇತಿ, ಅಪ್ರೆಂಟಿಸ್, ಅತಿಥಿ ಕೆಲಸ ಮುಂತಾದ ಹೆಸರಿನಲ್ಲಿ ಗುತ್ತಿಗೆದಾರರ ಅಡಿಯಲ್ಲಿ ಜೀತದಾಳುಗಳಾಗಿ ದುಡಿಯುವ ಪರಿಸ್ಥಿತಿ ಉಂಟಾಗಿದೆ. ದುಡಿಮೆಗೆ ತಕ್ಕ ಪ್ರತಿಫಲ, ಪ್ರಜಾಸತ್ತಾತ್ಮಕ ಹಕ್ಕು ಎಂದೆಲ್ಲಾ ಕೇಳಿದರೆ ಎಸ್ಮಾ ಜಾರಿ. ಇನ್ನು ಉದ್ಯೋಗ ಸೃಷ್ಟಿಸುವ ಸಾರ್ವಜನಿಕ ಉದ್ದಿಮೆಗಳ ಆರಂಭದ ಮಾತಿರಲಿ. ಮುಂದಿನ ಪೀಳಿಗೆಗಳಿಗೆ ಮೀಸಲಿರಿಸಬೇಕಿರುವ ಅರಣ್ಯ, ಕಲ್ಲಿದ್ದಲು, ಅದಿರು, ನೀರು, ಭೂಮಿ ಮುಂತಾದ ನೈಸರ್ಗಿಕ ಸಂಪನ್ಮೂಲಗಳನ್ನೇ ಸರ್ವನಾಶ ಮಾಡುವಂತಹ ಅವಕಾಶಗಳನ್ನು ಖಾಸಗಿ ಕಂಪನಿಗಳಿಗೆ ಕಾನೂನಿನಲ್ಲೇ ಮುಕ್ತ ಅವಕಾಶವನ್ನು ನೀಡಲಾಗಿದೆ. ಉದಾಹರಣೆಗೆ, ವಿಶೇಷ ಆರ್ಥಿಕ ವಲಯಗಳ ಹೆಸರಿನಲ್ಲಿ ನೆಲ–ಜಲ ಮತ್ತು ಮಾನವ ಸಂಪನ್ಮೂಲವನ್ನು ಅತ್ಯಲ್ಪ ಬೆಲೆಗೆ ಧಾರೆಯೆರೆಯುವುದು. ಜೊತೆಗೆ, ಆಧುನಿಕ ವಿಜ್ಞಾನ ತಂತ್ರಜ್ಞಾನದ ಯಂತ್ರೋಪಕರಣಗಳ ಮೂಲಕ ಕೇವಲ ಲಾಭಕ್ಕಾಗಿ, ರೈತ–ಕೃಷಿಕೂಲಿಕಾರರ ಮತ್ತು ಸಕಲಜೀವ ವೈವಿಧ್ಯಮಯ ಪರಿಸರವನ್ನು ನಾಶಗೊಳಿಸಲಾಗುತ್ತಿದೆ. ಸಾವಿರಾರು ಎಕರೆ ಕೃಷಿ ಯೋಗ್ಯ ಭೂಮಿಯನ್ನು ಕಾರ್ಪೊರೇಟ್ ಕಂಪನಿಗಳಿಗೆ ಧಾರೆಯೆರೆಯಲಾಗುತ್ತಿದೆ. ತಮ್ಮ ಮತ್ತು ತಾಯ್ನಾಡಿನ ಭೂಮಿಯನ್ನು ಕಳೆದುಕೊಂಡು ರೈತಾಪಿಗಳು ಭಿಕಾರಿಗಳಾಗುತ್ತಿದ್ದಾರೆ. ಇಂತಹ ಅನ್ಯಾಯಗಳ ವಿರುದ್ಧ ಧ್ವನಿ ಎತ್ತುವ ಗೋಜಿಗೆ ಯುವಜನತೆ ಹೋಗದಂತೆ ದಿಕ್ಕು ತಪ್ಪಿಸಲಾಗಿದೆ. ಜಾತಿ–ಧರ್ಮ, ಕೋಮು, ಗಡಿ, ಭಾಷೆ ಮುಂತಾದ ಹೆಸರಲ್ಲಿ ಯುವಜನರು ಪರಸ್ಪರ ಕಚ್ಚಾಡಿಕೊಂಡು ತಮ್ಮ ನಿರುದ್ಯೋಗದ ಮೂಲ ಕಾರಣವನ್ನು ಅರಿಯದಂತೆ ನೋಡಿಕೊಳ್ಳಲಾಗುತ್ತಿದೆ. ಹೀಗಿರುವಾಗ ದೇಶದ ಬೆನ್ನೆಲುಬಾದ ಯುವಜನತೆಗೆ ಎಲ್ಲಿಂದ ಖಾಯಂ ಉದ್ಯೋಗ ದೊರಕಲು ಸಾಧ್ಯ?



ಇಂದು ನಮ್ಮನ್ನಾಳುವ ಸರ್ಕಾರಗಳ ನವ ಉದಾರೀಕರಣ ನೀತಿಗಳನ್ನು ಹಿಮ್ಮೆಟ್ಟಿಸುವಂಥ ಬೌದ್ಧಿಕ ತಿಳುವಳಿಕೆಯನ್ನು ಪಡೆಯಬೇಕಿದೆ. ನಮ್ಮ ಸರ್ಕಾರಗಳ ಹಿಂದಿರುವ ಬಹುರಾಷ್ಟ್ರೀಯ ಕಂಪನಿಗಳ ರಾಜಕೀಯ ಅರ್ಥಶಾಸ್ತ್ರವನ್ನು ಅರ್ಥ ಮಾಡಿಕೊಳ್ಳಬೇಕು. ನಿರುದ್ಯೋಗ ಸೃಷ್ಟಿಸುವಂತಹ ಜಾಗತೀಕರಣ ನೀತಿಗಳನ್ನು ಹಿಮ್ಮೆಟ್ಟಿಸದೇ ಹೋದರೆ ಇನ್ನಷ್ಟು ನಿರುದ್ಯೋಗ – ಅರೆ ಉದ್ಯೋಗ ಕಟ್ಟಿಟ್ಟ ಬುತ್ತಿ. ಆದ್ದರಿಂದ ಉದ್ಯೋಗಿ ಯುವಕರು ತಮ್ಮ ಉದ್ಯೋಗದ ಉಳಿವಿಗಾಗಿ, ನಿರುದ್ಯೋಗಿಗಳು ಉದ್ಯೋಗಕ್ಕಾಗಿ, ಅರೆ ಉದ್ಯೋಗಿಗಳು ಉದ್ಯೋಗ ಭದ್ರತೆಗಾಗಿ ಒಂದಾಗಿ ಐಕ್ಯತೆಯಿಂದ ಮುಂದಾಗಿ ಪ್ರಜಾಸತ್ತಾತ್ಮಕ ನೆಲೆಗಟ್ಟಿನಲ್ಲಿ ಚಳುವಳಿಯನ್ನು ರೂಪಿಸಬೇಕಿದೆ. ತನ್ನ ದೇಶದ ಸ್ವಾತಂತ್ರ್ಯಕ್ಕಾಗಿ ೨೫ರ ಹರೆಯದಲ್ಲೇ ಸರ್ವರಿಗೂ ಸಮಬಾಳು ಸರ್ವರಿಗೂ ಸಮಪಾಲು ದೊರಕಿಸಿಕೊಡುವಂತಹ ಸ್ವಾತಂತ್ರ್ಯ ಲಭಿಸಬೇಕೆಂದು ವೈಜ್ಞಾನಿಕವಾಗಿ ಮನಗಂಡು ಅದಕ್ಕಾಗಿ ಪ್ರಾಣತೆತ್ತ ಭಗತ್‌ಸಿಂಗ್ ನಮ್ಮ ಯುವಜನತೆಗೆ ಆದರ್ಶನಾಗಬೇಕಿದೆ. ಅತ್ಯಂತ ಹೀನಾಯ ಮಟ್ಟದಲ್ಲಿ ಬದುಕುತ್ತಿದ್ದರೂ ತನ್ನ ಜಾತಿನಾಯಕರ ವಂಚಕತನಕ್ಕೆ ಬಲಿಯಾಗದೆ, ಧರ್ಮ ಎಂಬ ಮೋಹಕ್ಕೂ ಬೀಳದೆ ನಿರುದ್ಯೋಗ–ಬಡತನಕ್ಕೆ ಕಾರಣವಾಗಿರುವ ನವ ಉದಾರವಾದದ ಆರ್ಥಿಕ ನೀತಿಗಳನ್ನು ಹಿಮ್ಮೆಟ್ಟಿಸುವಂತಹ ಬೌದ್ಧಿಕ ತಿಳುವಳಿಕೆ, ಛಲವನ್ನು ಯುವಜನತೆ ಮೈಗೂಡಿಸಿಕೊಳ್ಳಬೇಕಿದೆ. ಭೂಹೀನರಿಗೆ ಭೂಮಿ. ಸ್ಥಳೀಯ ಸಂಪನ್ಮೂಲಗಳನ್ನು ಆಧರಿಸಿ ಬೃಹತ್ ಪ್ರಮಾಣದ ಸಾರ್ವಜನಿಕ ಉದ್ದಿಮೆಗಳ ಸ್ಥಾಪನೆ ಈ ಕೂಡಲೇ ಆಗಬೇಕಿದೆ. ಕೇಂದ್ರ–ರಾಜ್ಯ ಸರ್ಕಾರಗಳ ಎಲ್ಲಾ ಖಾಲಿ ಹುದ್ದೆಗಳ ಭರ್ತಿಯಾಗಬೇಕಿದೆ. ಅಸಂಘಟಿತ ವಲಯದಲ್ಲಿ ದುಡಿಯುತ್ತಿರುವವರಿಗೆ ಕನಿಷ್ಠ ಕೂಲಿ ನಿಗದಿಯಾಗಬೇಕು. ಇಂತಹ ಕ್ರಮಗಳು ನಿರುದ್ಯೋಗ ನಿವಾರಣೆಗೆ ನೆರವಾಗುವ ಸಾಧ್ಯತೆಯಿದೆ.

ಬಿ. ರಾಜಶೇಖರಮೂರ್ತಿ
೩೮, ೧೧ನೇ ಮುಖ್ಯರಸ್ತೆ, ೩೯ನೇ ಅಡ್ಡರಸ್ತೆ, ೪ನೇ 'ಟಿ' ಬ್ಲಾಕ್ ಜಯನಗರ, ಬೆಂಗಳೂರು – ೧೧

## ಅಭಿನಂದನೆ



ಡಾ॥ ಎಲ್. ಬಸವರಾಜು ಪ್ರತಿಷ್ಠಾನ (ರಿ). ಕೋಲಾರ – ಇವರು ನೀಡುವ ೨೦೧೩ನೇ ಸಾಲಿನ ಡಾ॥ ಎಲ್. ಬಸವರಾಜು ಪ್ರಶಸ್ತಿಯನ್ನು 'ಹೊಸತು'ವಿನ ಗೌರವ ಸಂಪಾದಕರೂ ಭೌತವಾದಿ ಲೇಖಕರೂ ನಾಡಿನ ಜನಪರ ಚಿಂತಕರೂ ಆದ ಡಾ॥ ಜಿ. ರಾಮಕೃಷ್ಣ ಅವರಿಗೆ ನೀಡಿ ಗೌರವಿಸಲಾಗಿದೆ. ಪ್ರಶಸ್ತಿಯನ್ನು ೨೨, ಮಾರ್ಚ್ ೨೦೧೪ರಂದು ಕೋಲಾರದಲ್ಲಿ ಜರುಗಿದ ಕಾರ್ಯಕ್ರಮದಲ್ಲಿ ಪ್ರದಾನ ಮಾಡಲಾಯಿತು. ಕಾರ್ಯಕ್ರಮದಲ್ಲಿ ಡಾ॥ ಬರಗೂರು ರಾಮಚಂದ್ರಪ್ಪ, ಶ್ರೀ ಕಾಮರೂಪಿ (ಎಂ. ಎಸ್. ಪ್ರಭಾಕರ), ಶ್ರೀಮತಿ ವಿಶಾಲಾಕ್ಷಿ ಬಸವರಾಜು, ಲಕ್ಷ್ಮೀಪತಿ ಕೋಲಾರ, ಬೇಗೂರು ರಾಮಲಿಂಗಪ್ಪ ಮುಂತಾದವರು ಭಾಗವಹಿಸಿದ್ದರು. ಡಾ॥ ಜಿ. ಆರ್. ಅವರಿಗೆ ನವಕರ್ನಾಟಕ ಮತ್ತು 'ಹೊಸತು' ಬಳಗದ ಅಭಿನಂದನೆಗಳು.

# ಬೆಳ್ಳಿ ಕೋಲು

■ ಶಿವಮೊಗ್ಗ ರಮೇಶ್

ನನ್ನ ತಾಬೇದಾರಿಯ ಕೊನೆಯ ದಿನಗಳಲ್ಲಿ ದಿಲ್ಲಿಯ ನನ್ನ ಕಛೇರಿಯಲ್ಲಿ ಭೇಟಿಯಾದ ವ್ಯಕ್ತಿ 'ವರದರಾಜ ಬೆಳ್ಳಿ ಕೋಲು'. ಅವರು ಅಹಮದಾಬಾದ್‌ನ ಒಂದು ವಿಮಾ ಕಂಪನಿಯ ಹಿರಿಯ ಅಧಿಕಾರಿ. ಸರಕಾರಿ ಕೆಲಸದ ಮಾತುಗಳು ಮುಗಿದ ಮೇಲೆ, ಅವರ ಹೆಸರಿನ ಭಾಗವಾದ 'ಬೆಳ್ಳಿಕೋಲಿ'ನ ಬಗ್ಗೆ ಕುತೂಹಲ ಮೂಡಿ ಪ್ರಶ್ನಿಸಿದಾಗ ಅವರು, "ನಮ್ಮ ಪೂರ್ವಜರು ಮೈಸೂರು ನಗರದ ವಾಸಿಗಳು. ಅವರಲ್ಲಿ ವರದಯ್ಯ ಎಂಬ ಹಿರಿಯರು ಆಯುರ್ವೇದದ ಖ್ಯಾತ ವೈದ್ಯರು. ಮೈಸೂರು ಮಹಾರಾಜರ ಅಂತಃಪುರದ ಹಿರಿಯ ವ್ಯಕ್ತಿ ಕಾಯಿಲೆ ಬಿದ್ದು ಮರಣಶಯ್ಯೆಯಲ್ಲಿದ್ದಾಗ, ಆಸ್ಥಾನದ ವೈದ್ಯರೆಲ್ಲರೂ ಅಸಹಾಯಕರಾಗಿ ಕೈಚೆಲ್ಲಿದರು. ಆಗ ವರದಯ್ಯನವರು ತಮ್ಮ ಚಿಕಿತ್ಸೆಯಿಂದ ಕಾಯಿಲೆ ಗುಣಪಡಿಸಿದರು. ಮಹಾರಾಜರು ವರದಯ್ಯನವರ ಸೇವೆಯನ್ನು ಮೆಚ್ಚಿ ಒಂದು ಬೆಳ್ಳಿಯ ಕೋಲನ್ನು ಬಹುಮಾನವಾಗಿ ಕೊಟ್ಟರು. ಹೀಗಾಗಿ ನಮ್ಮ ಮನೆತನಕ್ಕೆ ಈ ಹೆಸರು ಬಂದಿದೆ ಎಂದು ಹಿಂದಿನವರು ತಿಳಿಸಿದ್ದಾರೆ. ಇಷ್ಟಲ್ಲದೆ ಇನ್ನಾವ ವಿವರವೂ ನನಗೆ ತಿಳಿದಿಲ್ಲ. ನಾಲ್ಕು ತಲೆಮಾರುಗಳ ಹಿಂದೆ ನಮ್ಮ ಹಿರೀಕರು ದೂರದ ಗುಜರಾತಿಗೆ ಬಂದು ನೆಲೆಸಿದರು. ಹಿಂದಿನ ಎಲ್ಲಾ ಸಂಪರ್ಕಗಳೂ ಕಡಿದಿವೆ. ನನಗೆ ನನ್ನ ಬೇರುಗಳನ್ನು ಅರಸುವ ಇಚ್ಛೆ ಬಹಳವಾಗಿದೆ. ಈ ಬಗ್ಗೆ ನನ್ನ ಒಂದೆರಡು ಪ್ರಯತ್ನಗಳು ವಿಫಲವಾದವು. ನನಗೆ ವೈದ್ಯ ವರದಯ್ಯನವರ ಸಾಧನೆಯ ಬಗ್ಗೆ ತಿಳಿಯುವ ತವಕ ಇದೆ. ನೀವು ನಿವೃತ್ತರಾದ ನಂತರ ಮೈಸೂರಿನಲ್ಲಿ ನೆಲೆಸುವಿರೆಂದು ತಿಳಿಯಿತು. ನೀವು ದಯವಿಟ್ಟು ನನಗೆ ಈ ಬಗ್ಗೆ ಸಹಾಯ ಮಾಡಬೇಕೆಂದು ವಿನಂತಿಸಿಕೊಳ್ಳುತ್ತೇನೆ" ಎಂದರು. ಅವರ ಕೋರಿಕೆಗೆ ನಾನು ಕೂಡಲೇ ಸ್ಪಂದಿಸಿ, ನನ್ನ ಕೈಲಾದ ಸಹಾಯ ಮಾಡುವ ಆಶ್ವಾಸನೆಯನ್ನು ಕೊಟ್ಟು, ವಿಳಾಸ, ಫೋನ್ ನಂಬರ್‌ಗಳನ್ನು ಪರಸ್ಪರ ವಿನಿಮಯ ಮಾಡಿಕೊಂಡೆವು.




ಕೇಂದ್ರ ಸರ್ಕಾರದ ಹಣಕಾಸು ಸಚಿವಾಲಯದ ನಿರ್ಜೀವ ಕಡತಗಳೊಂದಿಗೆ ಮೂವತ್ತೈದು ವರ್ಷಗಳು ಸೆಣೆಸಿದ ನಂತರ, ಮೈಸೂರಿನ ನನ್ನ ಮನೆಯಲ್ಲಿ ನಿವೃತ್ತ ಜೀವನ ಆರಂಭಿಸಿದೆ. ನನ್ನ ಬಾಲ್ಯ ಸ್ನೇಹಿತ ಶ್ರೀನಿವಾಸ ಅಯ್ಯಂಗಾರ್ ಉರುಫ್ ಸೀನಿ ಈಗ ನನ್ನ ಸಂಗಾತಿ. ಸೀನಿ ಮೈಸೂರಿನಲ್ಲಿ ಹುಟ್ಟಿ, ಬೆಳೆದು, ಓದಿ, ಇಲ್ಲಿಯ ಕಾಲೇಜಿನಲ್ಲಿ ಸಮಾಜಶಾಸ್ತ್ರದ ಅಧ್ಯಾಪಕನಾಗಿ, ನಂತರದಲ್ಲಿ ಪ್ರೊಫೆಸರ್ ಆಗಿ ನಿವೃತ್ತನಾಗಿದ್ದಾನೆ. ಮೈಸೂರಿನ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡು ಕ್ರಿಯಾಶೀಲನಾಗಿರುವ ವ್ಯಕ್ತಿ ಸೀನಿ.

ಬೆಳ್ಳಿ ಕೋಲಿನ ಸಂಗತಿ ನನ್ನ ಮನಸ್ಸಿನಲ್ಲಿ ಕೊರೆಯುತ್ತಿತ್ತು. ಈ ಬಗ್ಗೆ ಸ್ವಲ್ಪ ಹುಡುಕಾಟ ಮಾಡಬೇಕೆನಿಸಿತು. ಸೀನಿಗೆ ಬೆಳ್ಳಿ ಕೋಲಿನ ವೃತ್ತಾಂತವನ್ನು ತಿಳಿಸಿ ಅವನ ಸಹಾಯ ಕೋರಿದೆ. ಅವನು ಬೆಳ್ಳಿ ಕೋಲಿನ ಕಥೆ ಕೇಳಿ ಬಹಳ ಉತ್ಸುಕನಾದ ಹಾಗೂ ಕೂಡಲೇ ಕಾರ್ಯಪ್ರವೃತ್ತನಾದ. ಮೈಸೂರು ನಗರದಲ್ಲಿ ಈ ವಿಚಾರದ ಬಗ್ಗೆ ಮಾಹಿತಿ ನೀಡಬಲ್ಲ ಜನರ ಪಟ್ಟಿ ಮಾಡಿ ಅವರ ಭೇಟಿಗೆ ಏರ್ಪಾಡು ಮಾಡಿದ. ಮೈಸೂರು ವಿಶ್ವವಿದ್ಯಾನಿಲಯದ ಇತಿಹಾಸ ವಿಭಾಗದ ಮುಖ್ಯಸ್ಥ ಪ್ರೊ॥ ನಾಗಯ್ಯನವರು, ಸಂಸ್ಕೃತ ಕಾಲೇಜಿನ ಉಪನ್ಯಾಸಕರಾದ ರಾಜಂ ಅಯ್ಯರ್, ಪೆನ್ಶನ್ ಮೊಹಲ್ಲಾದಲ್ಲಿರುವ ಹಿರಿಯ ಉಸ್ತಾದ್ ಪೈಲ್ವಾನ್ ದಸ್ತಗೀರ್ ಖಾನ್, ಮೈಸೂರು ರಾಜ ಮನೆತನದ ಬಗ್ಗೆ ಅಪಾರ ತಿಳುವಳಿಕೆ ಮತ್ತು ಮಾಹಿತಿಯ ಭಂಡಾರವೇ ಇರುವ ನಂಜರಾಜೇ ಅರಸ್, ನಂಜನಗೂಡಿನ ಪಂಡಿತರು ಹಾಗೂ ಇತರರನ್ನು ನಾನು, ಸೀನಿ ಭೇಟಿ ಮಾಡಿದೆವು. ಆದರೆ ಅವರಲ್ಲಿ ಯಾರಿಗೂ ಈ ಪ್ರಸಂಗದ ಬಗ್ಗೆ ಯಾವುದೇ ಮಾಹಿತಿ ಇರಲಿಲ್ಲ ಮತ್ತು ಈ ಹಿಂದೆ ಇಂತಹ ಘಟನೆ ಬಗ್ಗೆ ಎಲ್ಲಿಯೂ ಪ್ರಸ್ತಾಪವಾದ ನೆನಪು ಇಲ್ಲಾ ಎಂದು ತಿಳಿಸಿದರು.

"ನನಗೆ ಈ ಅನ್ವೇಷಣೆಯಲ್ಲಿ ಯಶ ಸಿಗುವ ಯಾವುದೇ ಲಕ್ಷಣ ಕಾಣಿಸುತ್ತಿಲ್ಲ. ಇನ್ನು ಸಾಕುಮಾಡೋಣ. ಯಾರದ್ದೋ ಮನೆತನದ ಹಿರಿಯರ ಮೂಲ ಅರಸುವ ಕೆಲಸ ಕೈ ಬಿಡೋಣ" ಎಂದು ಸೀನಿಗೆ ಹೇಳಿದೆ.

ಅವನು "ಬೇರೆ ದಾರಿ ಕಾಣುತ್ತಿಲ್ಲಾ, ಸದ್ಯಕ್ಕೆ ನಿಲ್ಲಿಸೋಣ. ಮುಂದೆ ಎಂದಾದರೂ ಸುಳಿವು ಸಿಗಬಹುದೆಂದು ಆಶಿಸೋಣ" ಎಂದ. ಈ ಪ್ರಸಂಗ ಕ್ರಮೇಣ ನನ್ನ ನೆನಪಿನಿಂದ ದೂರ ಸರಿಯಿತು. ಆದರೆ ಸೀನಿ ಇದರ ವಿಚಾರದಲ್ಲಿ ಇನ್ನೂ ಆಶಾವಾದಿಯಾಗಿದ್ದು, ಭೇಟಿ ಆದಾಗಲೆಲ್ಲಾ ನೆನಪಿಸುತ್ತಿದ್ದ. ಈ ಬಗ್ಗೆ ಅವನು ಮಾಡಿದ ಒಂದೆರಡು ಪತ್ರ ವ್ಯವಹಾರದಿಂದ ಯಾವ ಸಹಾಯವೂ ಆಗಲಿಲ್ಲ ಎಂದು ಹೇಳಿದ.

ಕೆಲ ದಿನಗಳ ನಂತರ ಒಂದು ಬೆಳಗ್ಗೆ ಸೀನಿ ಹಾಜರಾಗಿ, ಬಹಳ ಉತ್ಸುಕನಾಗಿ, "ನೋಡಯ್ಯ, ನಿನ್ನ ಬೆಳ್ಳಿ ಕೋಲಿನ ವಿಚಾರ ತಿಳಿದವರು ಒಬ್ಬ ಮಹನೀಯರು ಇದ್ದಾರೆ. ನಮ್ಮ ಶ್ರಮ ಸಾರ್ಥಕವಾಗುವ ಸಾಧ್ಯತೆ ಇದೆ" ಎಂದು ಹೇಳಿದ. ಹಿಂದೆ ನಿರಾಸೆ ಅನುಭವಿಸಿದ ಹಿನ್ನೆಲೆಯಲ್ಲಿ ನಾನು



ಅಷ್ಟೇನೂ ಉತ್ಸಾಹ ತೋರಲಿಲ್ಲ. ಅವನು ಮುಂದುವರಿದು, "ನನ್ನ ಸಹಪಾಠಿ ಸುರೇಶಾಚಾರ್, ಶಿವರಾಮಪೇಟೆಯಲ್ಲಿ ಒಂದು ಗ್ರಂಧಿಗೆ ಅಂಗಡಿಯ ಮಾಲೀಕರು. ಆಚಾರ್‌ರವರ ಪೂರ್ವಿಕರು ಲಾಗಾಯ್ತಿನಿಂದ ಇದೇ ವ್ಯಾಪಾರ ನಡೆಸಿಕೊಂಡು ಬಂದವರು. ಒಂದು ವಾರದ ಹಿಂದೆ ಅವರಿಗೆ ಬೆಳ್ಳಿ ಕೋಲಿನ ಪ್ರಸಂಗ, ವೈದ್ಯ ವರದಯ್ಯನವರ ಮೂಲದ ಹುಡುಕಾಟದ ವಿವರವನ್ನು ತಿಳಿಸಿದ್ದೆ. ಆಚಾರ್‌ರವರು 'ತಮ್ಮ ತಂದೆಯವರಿಗೆ ಈಗ ಎಂಬತ್ತೈದು ವರ್ಷ. ಅವರಿಗೆ ಹಿಂದಿನ ಅನೇಕ ಆಯುರ್ವೇದ ವೈದ್ಯರ ಪರಿಚಯ ಇದೆ, ಅವರನ್ನು ವಿಚಾರಿಸುತ್ತೇನೆ' ಎಂದಿದ್ದರು. ಆಚಾರ್‌ರವರು ನಿನ್ನೆ ಫೋನ್ ಮಾಡಿ, ತಂದೆಯವರಿಗೆ ವರದಯ್ಯ ಎಂಬ ವೈದ್ಯರ ಬಗ್ಗೆ ಮಾಹಿತಿ ಇದೆ, ನೀವು ಬಂದರೆ ತಮಗೆ ಗೊತ್ತಿರುವ ವಿಷಯವನ್ನು ತಿಳಿಸುತ್ತಾರೆ ಎಂದು ಹೇಳಿದರು. ಆ ಹಿರಿಯರ ಭೇಟಿ ನಾಳೆ ಸಂಜೆ ನಾಲ್ಕು ಘಂಟೆಗೆ ನಿಗದಿಯಾಗಿದೆ." ಎಂದು ಹೇಳಿದ.

ಮಾರನೆಯ ದಿನ ಸಂಜೆ ನಾನು, ಸೀನಿ, ನಜರ್‌ಬಾದ್‌ನ ಮೈಲಾರಿ ಹೋಟೆಲ್ ಪಕ್ಕದ ರಸ್ತೆಯಲ್ಲಿನ ಸುರೇಶಾಚಾರ್ ಮನೆಗೆ ಹೋದೆವು. ಸುರೇಶಾಚಾರ್ ನಮ್ಮನ್ನು ಅವರ ತಂದೆ ಕಾಳಾಚಾರ್‌ರವರಿಗೆ ಪರಿಚಯಿಸಿದರು. ಕಾಳಾಚಾರ್‌ರವರು ಜೀವನದಲ್ಲಿ ಸಾಕಷ್ಟು ಮಾಗಿದ ವ್ಯಕ್ತಿ ಎಂದು ಅವರು ಆಡಿದ ಪ್ರಾಸ್ತಾವಿಕ ಮಾತುಗಳಿಂದ ತಿಳಿಯಿತು. ಸ್ವಲ್ಪ ಕಣ್ಣಿನ ದೋಷದ ವಿನಾ ಆರೋಗ್ಯವನ್ನು ಚೆನ್ನಾಗಿ ಕಾಪಾಡಿಕೊಂಡ ಹಿರಿಯರು. ಅವರು, "ನನ್ನ ಮಗ ಈಗಾಗಲೇ ನೀವು ವರದಯ್ಯನವರ ಬಗ್ಗೆ ವಿವರ ಅರಸುತ್ತಿರುವ ವಿಚಾರ ತಿಳಿಸಿದ್ದಾನೆ. ನನಗೆ ತಿಳಿದ ವಿವರವನ್ನು ನಿಮಗೆ ಹೇಳುತ್ತೇನೆ" ಎಂದರು. ಕಾಳಾಚಾರ್‌ರವರು ತಿಳಿಸಿದ ವಿವರಗಳನ್ನು ಅವರ ಮಾತುಗಳಲ್ಲಿ ಮುಂದಿಡುವುದು ಸಮಂಜಸ ಎಂದು ಭಾವಿಸಿ ಅದನ್ನು ಕೆಳಗೆ ಕಾಣಿಸಿದ್ದೇನೆ.

"ನಾವು ಅಕ್ಕಸಾಲಿಗ ಪಂಗಡದವರು. ಆದರೆ ಐದಾರು ತಲೆಮಾರಿನಿಂದ ಆಯುರ್ವೇದ ವೈದ್ಯರಾಗಿ, ಹಾಗೂ ಗ್ರಂಧಿಗೆ ವ್ಯಾಪಾರಿಗಳಾಗಿದ್ದೇವೆ. ನಾನು ಈ ಮುಂದೆ ಹೇಳಲಿರುವ ಪ್ರಸಂಗ ಸುಮಾರು ಒಂದು ನೂರ ಇಪ್ಪತ್ತೈದು ವರ್ಷಗಳಿಗೂ ಹಿಂದಿನದು. ವರದಯ್ಯನವರ ವಿವರ ಮತ್ತು ಇತರೇ ಪ್ರಸಂಗಗಳು ನನಗೆ ತಿಳಿದಿದ್ದು ನನ್ನ ಅಜ್ಜ ಮಾಯಾಚಾರ್‌ರವರಿಂದ. ನನ್ನ ತಂದೆಯವರು ನನ್ನ ಸಣ್ಣ ಪ್ರಾಯದಲ್ಲಿ ತೀರಿಹೋದರು. ನನ್ನನ್ನು ಅಜ್ಜನವರು ಸಾಕಿ, ಸಲಹಿದರು. ಬಾಲ್ಯದಿಂದಲೂ ಅಜ್ಜನೇ ನನ್ನ ಒಡನಾಡಿ. ನಮ್ಮ ಗ್ರಂಧಿಗೆ ಅಂಗಡಿಗೆ ಸುತ್ತಮುತ್ತಲಿನ ಅನೇಕ ವೈದ್ಯರು ಬರುತ್ತಿದ್ದರು. ಅಂತಹ ಸಂದರ್ಭದಲ್ಲಿ ನಡೆದ ಹಲವಾರು ವಿಚಾರ ವಿನಿಮಯ, ಹರಟೆಗಳಿಂದ ಸಹ ಈ ಬಗ್ಗೆ ಮಾಹಿತಿ ದೊರಕಿದೆ. ಅಜ್ಜನವರು ನನ್ನ ಮೂವತ್ತನೆಯ ವಯಸ್ಸಿನಲ್ಲಿ ಕಾಲವಾದರು. ಹೀಗಾಗಿ ಐವತ್ತು ವರ್ಷಗಳ ಹಿಂದೆ ಕೇಳಿದ ಪ್ರಸಂಗದ ಅನೇಕ ವಿವರಗಳ ನೆನಪು ಮಾಸಿದೆ. ಅಲ್ಲದೆ ಬಹಳಷ್ಟು ತಪ್ಪಿದ ಕೊಂಡಿಗಳಿವೆ. ನನ್ನ ಊಹೆ, ಕಲ್ಪನೆಗಳು ಸಹ ಈ ವಿವರಣೆಯಲ್ಲಿ ಸೇರಿರುವ ಸಾಧ್ಯತೆ ಇದೆ.

"ವರದಯ್ಯನವರು ಅರಕಲಗೂಡಿನವರು. ಅಲ್ಲಿನ ಈಶ್ವರ ದೇವಸ್ಥಾನದ ಅರ್ಚಕರ ನಾಲ್ಕನೆಯ ಮಗ. ಪೌರೋಹಿತ್ಯ, ಆಯುರ್ವೇದ ಮತ್ತು ಜೋತಿಷ್ಯ ಅವರ ತಂದೆಯವರಿಂದ ಕಲಿತಿದ್ದರು. ತಂದೆಯವರ ನಿಧನದ ನಂತರ ಈಶ್ವರ ದೇವಾಲಯದ ಅರ್ಚಕ ವೃತ್ತಿ ಹಿರಿಯ ಮಗನ ಪಾಲಾಯಿತು. ಅರಕಲಗೂಡಿ ನಂತಹ ಸಣ್ಣ ಊರಿನಲ್ಲಿ ಹೆಂಡತಿ ಇಬ್ಬರು ಮಕ್ಕಳ ಸಂಸಾರ ನಿರ್ವಹಣೆ ವರದಯ್ಯನವರಿಗೆ ದುಸ್ತರವಾಯಿತು. ಅವರ ಹಿತಚಿಂತಕರು ಮತ್ತು ಆಪ್ತರು ಅವರಿಗೆ ಮುಂದಿನ ಜೀವನವನ್ನು ಹಾಗೂ ಅದೃಷ್ಟವನ್ನು ಅರಸಲು, ಅಪರಿಮಿತ ಅವಕಾಶಗಳು ಇರುವ ದೊಡ್ಡ ನಗರ ಮೈಸೂರಿಗೆ ವಲಸೆಹೋಗಲು ಸಲಹೆ ನೀಡಿದರು. ವರದಯ್ಯನವರು ಈ ಸಲಹೆಯನ್ನು ಸ್ವೀಕರಿಸಿ ನಂಜನಗೂಡು ರಸ್ತೆ ಸಮೀಪದ ಪುಟ್ಟಯ್ಯನ ಅಗ್ರಹಾರದ ಒಂದು ವಠಾರದಲ್ಲಿ ಸಂಸಾರ ಹೂಡಿದರು. ಆದರೆ ಇಲ್ಲಿಯೂ ಅವರ ಸ್ಥಿತಿ ಅಷ್ಟೇನೂ ಉತ್ತಮವಾಗಲಿಲ್ಲ. ಪೌರೋಹಿತ್ಯ, ಜೋತಿಷ್ಯದಲ್ಲಿ ಅವರಿಗೆ ಆಸಕ್ತಿ ಇರಲಿಲ್ಲ. ವೈದ್ಯ ವೃತ್ತಿಯನ್ನೇ ನಂಬಿದರು. ಇದರಲ್ಲಿ ಸ್ವಲ್ಪಮಟ್ಟಿನ ಯಶಸ್ಸನ್ನೂ ಕಂಡರು. ಹಾಗೂ ಹೀಗೂ ಉಪವಾಸವಿಲ್ಲದೆ ಜೀವನ ಸಾಗುತಿತ್ತು.

"ಸರಿಸುಮಾರು ಇದೇ ಕಾಲದಲ್ಲಿ ಮೈಸೂರು ನಗರಕ್ಕೆ ಇನ್ನೊಂದು ವ್ಯಕ್ತಿಯ ಆಗಮನವಾಯಿತು. ಆಕೆ ದೂರದ ಮಲೆಸೀಮೆ, ಗೇರುಸೊಪ್ಪೆಯ ನಾಗಾಸಾನಿ. ಅವಳ ಪೂರ್ವದ ಹೆಸರು ನಾಗವೇಣಿ ಅಥವಾ ನಾಗಮಣಿ ಇರಬಹುದು. ಅವಳು ಗೇರುಸೊಪ್ಪೆಯಿಂದ ಮೈಸೂರಿಗೆ ಹೇಗೆ ಬಂದು ಸೇರಿದಳು ಎಂಬುದು ನಿಶ್ಚಿತವಾಗಿ ತಿಳಿದಿಲ್ಲ. ಅವಳೊಬ್ಬಳು ಗಣಿಕೆ. ಹದಿನೆಂಟರ ಪ್ರಾಯದ ಚೆಲುವೆ ನಾಗಾಸಾನಿ, ನಗರದ ಪ್ರಖ್ಯಾತ ಜವಳಿ ವರ್ತಕರಾದ ಕಡಕೊಳ ಭದ್ರಯ್ಯನವರ ಪ್ರೇಯಸಿಯಾಗಿ, ರಸಿಕ ವೃಂದದಲ್ಲಿ ಸುದ್ದಿ ಮಾಡಿದವಳು. ನಾನು ಅವಳನ್ನು ನೋಡಿರದ ಕಾರಣ ಅವಳ ರೂಪದ ಬಗ್ಗೆ ಹೇಳಲಾರೆ. ಪ್ರತೀತಿಯ ಪ್ರಕಾರ ಅವಳು ಅನುಪಮ ಲಾವಣ್ಯವತಿ. ಅವಳು ಮಂದಹಾಸ ಬೀರಿದಾಗ, ಎಡ ಕೆನ್ನೆಯ ಮೇಲೆ ಮೂಡುವ ಗುಳಿಯಲ್ಲಿ ಅನೇಕ ರಸಿಕರ ಕಾಮನೆಗಳು ಮತ್ತು ಕೆಲ ಶ್ರೀಮಂತರ ಸಂಪತ್ತು ಹುದುಗಿಹೋದವು, ಎಂಬ ಮಾತು ಆ ಕಾಲದಲ್ಲಿ ಪ್ರಚಲಿತವಾಗಿತ್ತು. ಅವಳ ಅಪ್ರತಿಮ ಸೌಂದರ್ಯದ ಸುದ್ದಿ ರಸಿಕರಾದ ಸಂಸ್ಥಾನದ ದಿವಾನರ ಕಿವಿ ಮುಟ್ಟಲು ಬಹಳ ದಿನ ಬೇಕಾಗಲಿಲ್ಲ. ಅರಮನೆಯ ಸಿಬ್ಬಂದಿಯ ಸಮವಸ್ತ್ರದ ಸರಬರಾಜಿನ ವಹಿವಾಟು ಮತ್ತು ಸುಂಕದಲ್ಲಿನ ರಿಯಾಯತಿಯ ಆಮಿಷಕ್ಕೆ ಭದ್ರಯ್ಯನವರು ಒಳಗಾದ ಪರಿಣಾಮ, ನಾಗಾಸಾನಿ ದಿವಾನರ ಪ್ರೇಯಸಿಯಾದದ್ದು. ದಿವಾನರು ತಮ್ಮ ಅಂತಸ್ತಿಗೆ ಅನುಗುಣವಾಗಿ ತಮ್ಮ ಹೊಸ ಪ್ರಿಯತಮೆಗೆ ಎಲ್ಲಾ ರೀತಿಯ ಅನುಕೂಲ ಗಳನ್ನೂ ಒದಗಿಸಿದರು. ಮುಖ್ಯ ಪೇಟೆ ಬೀದಿಯ ಸಮೀಪದ ಕಸ್ತೂರಿ ಶ್ರೀರಂಗಶೆಟ್ಟರ ದೊಡ್ಡ ಮನೆಯನ್ನು ಬಾಡಿಗೆಗೆ ಪಡೆದು, ಅಲ್ಲಿಗೆ ನಾಗಾಸಾನಿಯ ಬಿಡಾರ ವನ್ನು ವರ್ಗಾಯಿಸಿದರು. ಅವಳ ದೇಖರೇಖೆಗೆ ಮೂವರು ಸೇವಕಿಯರನ್ನು ನೇಮಕ ಮಾಡಿದರು. ಮನೆಯನ್ನು ಮಜಬೂತಾಗಿ ಸಿಂಗರಿಸಿ, ಅನೇಕ ಬೆಲೆಬಾಳುವ ಉಡುಗೊರೆಗಳನ್ನು ನೀಡಿ, ದಿವಾನರು ತಮ್ಮ ಪ್ರೇಯಸಿಯ ಮನ ಗೆಲ್ಲುವಲ್ಲಿ ಯಶಸ್ವಿ ಯಾದರು. (ಕಾಳಾಚಾರ್ ದಿವಾನರ ಹೆಸರನ್ನು ಹೇಳಿದರಾದರೂ ನಿರ್ದಿಷ್ಟ ಕಾರಣಗಳಿಂದ ನಾನು ಅದನ್ನು ಇಲ್ಲಿ ಮರೆ ಮಾಡಿದ್ದೇನೆ.)

"ನಾಗಾಸಾನಿ ಸಂಗೀತ ಕಲಿಯುವ ಅಪೇಕ್ಷೆ ತೋರಿದಾಗ, ದಿವಾನರು ವಿದ್ವಾನ್ ತ್ಯಾಮಗೊಂಡ್ಲು

ರಂಗಪ್ಪನವರಲ್ಲಿ ಸಂಗೀತ ಶಿಕ್ಷಣಕ್ಕೆ ಏರ್ಪಾಡು ಮಾಡಿದರು. ವಿದ್ವಾನ್ ರಂಗಪ್ಪನವರು ದೇವಾಂಗದವರ ಪೈಕಿ. ಅವರು ಕುಲಕಸಬನ್ನು ಬಿಟ್ಟು ಸಂಗೀತಕ್ಕೆ ತಮ್ಮನ್ನು ಅರ್ಪಿಸಿಕೊಂಡವರು. ರಂಗಪ್ಪನವರ ಇಳಿ ವಯಸ್ಸಿನಲ್ಲಿ ನನ್ನ ಅಜ್ಜ ಅವರಿಗೆ ಹತ್ತಿರವಾಗಿದ್ದರು. ಈ ಪ್ರಸಂಗದ ಬಹಳಷ್ಟು ವಿವರಗಳನ್ನು ಖುದ್ದು ಅವರು ಅಜ್ಜನವರಿಗೆ ತಿಳಿಸಿದ್ದಾರೆ. ರಂಗಪ್ಪನವರು ತಿರುಚ್ಚಿಯಲ್ಲಿ ಓರ್ವ ಘನ ವಿದ್ವಾಂಸರಲ್ಲಿ ಸಂಗೀತವನ್ನು ಅಭ್ಯಾಸ ಮಾಡಿದವರು. ಅವರಿಗೆ ಕನ್ನಡ, ತೆಲುಗು, ಮತ್ತು ತಮಿಳು ಭಾಷೆಗಳ ಪರಿಚಯ ಇತ್ತು. ಅವರು ಒಳ್ಳೆಯ ಶಿಕ್ಷಕರು ಎಂದು ಹೆಸರು ಪಡೆದಿದ್ದು, ಅನೇಕ ಹಿರಿಯ ವಿದ್ವಾಂಸರು, ತಮ್ಮ ನೆಚ್ಚಿನ ಶಿಷ್ಯರನ್ನು ಕೀರ್ತನೆಗಳ ಸ್ಪಷ್ಟ ಉಚ್ಚಾರದ ಬಗ್ಗೆ ಪಾಠ ಹೇಳಿಸಿಕೊಳ್ಳಲು ಕೆಲಕಾಲ ರಂಗಪ್ಪನವರ ಬಳಿ ಬಿಡುತ್ತಿದ್ದರು. ವಾರದಲ್ಲಿ ಮೂರು ದಿನ ನಾಗಾಸಾನಿ ರಂಗಪ್ಪನವರ ಮನೆಗೆ ಸಂಗೀತ ಪಾಠಕ್ಕೆ ಹೋಗಲು, ಪರದೆ ಇದ್ದ ಟಾಂಗಾ ಏರ್ಪಾಡಾಗಿತ್ತು. ಗಾಡಿ ಹತ್ತುವಾಗ ಮತ್ತು ಇಳಿಯುವಾಗ ನಾಗಾಸಾನಿಯ ಅಪ್ರತಿಮ ಸೌಂದರ್ಯವನ್ನು ನೋಡಲು ಹೆಣ್ಣು ಗಂಡಿನ ಭೇದವಿಲ್ಲದೆ ಜನ ಸಂಕೋಚವಿಲ್ಲದೆ ಜಮಾಯಿಸುತ್ತಿದ್ದರಂತೆ. ನಾಗಾಸಾನಿ ಶ್ರದ್ಧೆಯಿಂದ ಸಂಗೀತದ ಅಭ್ಯಾಸದಲ್ಲಿ ತೊಡಗಿಸಿಕೊಂಡಳು. ಗುರು ರಂಗಪ್ಪನವರಿಗೆ ಅವಳು ಭವಿಷ್ಯದಲ್ಲಿ ಒಳ್ಳೆಯ ಗಾಯಕಿ ಆಗುವ ಭರವಸೆ ಇತ್ತು.

"ಆದರೆ, ದಿವಾನರ ಪ್ರೇಯಸಿಯಾಗಿ ಎಂಟು ತಿಂಗಳ ನಂತರ ನಾಗಾಸಾನಿಯ ಆರೋಗ್ಯ ಹದಗೆಟ್ಟಿತು. ಆಹಾರ ದಕ್ಕದೆ ನಿತ್ರಾಣಿಯಾದಳು. ಏನೇ ಸೇವಿಸಿದರೂ ವಾಂತಿ ಆಗುತ್ತಿತ್ತು. ಭಯಂಕರ ಉದರ ಶೂಲೆಯಿಂದ ಬಾಧೆ ಅನುಭವಿಸಿದಳು. ಇದು ಸ್ತ್ರೀ ಸಹಜ ಕಾಯಿಲೆ ಆಗಿರದೆ, ಉದರ ಸಂಬಂಧಿ ವ್ಯಾಧಿ ಆಗಿತ್ತು. ದಿನದಿಂದ ದಿನಕ್ಕೆ ರೋಗ ಉಲ್ಬಣಗೊಂಡು, ಚೆಲುವಿನ ಖನಿಯಾಗಿದ್ದವಳು, ಚಕ್ಕಳ ಮೂಳೆಗಳ ಹಂದರವಾದಳು. ದಿವಾನರು ಅವಳಿಗೆ ಪ್ರಸಿದ್ಧ ವೈದ್ಯರಿಂದ ಚಿಕಿತ್ಸೆ ಕೊಡಿಸುವ ಏರ್ಪಾಡು ಮಾಡಿದರು. ಆಸ್ಥಾನದ ರಾಜವೈದ್ಯರಾದ ಪಾಲ್ಘಾಟ್ ಶಂಕರನ್ ಪೊಟ್ಟಿ ಮತ್ತು ಅದೋನಿ ಪೆದ್ದ ಅಪ್ಪಾರಾವ್, ನಾಗಾಸಾನಿಯನ್ನು ಪರೀಕ್ಷಿಸಿ ಸೂಕ್ತ ವೈದ್ಯಕೀಯ ಉಪಚಾರಗಳನ್ನು ಮಾಡಿದರು. ಆದರೆ ಇವರ ಲೇಹ್ಯ, ಕಷಾಯ ಯಾವುದೇ ಪರಿಣಾಮ ಬೀರಲಿಲ್ಲ. ಅವಳು ದಿನೇ ದಿನೇ ಕೃಶಳಾಗಿ, ರೋಗ ಹತೋಟಿಗೆ ಬರದೆ ಸ್ಥಿತಿ ಗಂಭೀರವಾಯಿತು. ರಾಜವೈದ್ಯರು ಕೈ ಚೆಲ್ಲಿದರು. 'ಅಭಿನವ ಸಂಜೀವಿನಿ' ಎಂದು ಹೆಸರು ಪಡೆದ ಭವಾನಿ ಶಂಕರ ಪಂಡಿತರು ಸಹ ಸಾನಿಯನ್ನು ನೋಡಿ ಕೆಲ ಉಪಶಮನ ಸೂಚಿಸಿದರು. ಅದೂ ಫಲಕಾರಿ ಆಗಲಿಲ್ಲ. ದಿವಾನರು ಗಂಜಾಂನ ಪ್ರಖ್ಯಾತ ಹಕೀಂ ಅಜ್ಮಲ್ ಖಾನ್‌ರವರನ್ನು ಬರಹೇಳಿ ಅವರಿಂದಲೂ ಚಿಕಿತ್ಸೆ ಕೊಡಿಸಿದರು. ಇಲ್ಲಿಯೂ ರೋಗವೇ ಗೆದ್ದಿತು. ಓರ್ವ ಆಂಗ್ಲ ಡಾಕ್ಟರ್ ಕೂಡ ಪರೀಕ್ಷಿಸಿ ಮದ್ದು ನೀಡಿದರೂ ಸಹಾಯವಾಗಲಿಲ್ಲ.

"ನಾಗಾಸಾನಿ ಹಾಸಿಗೆ ಹಿಡಿದು ಆರು ತಿಂಗಳು ಕಳೆಯಿತು. ಸಾವು ಅವಳ ಬಳಿ ಸುಳಿದಾಡುತಿತ್ತು. ಬಚ್ಚಲಿಗೂ ಸಹ ನಡೆದು ಹೋಗಲಾರದಷ್ಟು ನಿತ್ರಾಣಿ ಯಾದಳು. ಕಾಯಿಲೆ ಗುಣವಾಗುವ ಯಾವ ಲಕ್ಷಣಗಳೂ ಕಂಡುಬರಲಿಲ್ಲ. ಔಷಧೋಪಚಾರಗಳು ನಿಂತವು. ಉಪ್ಪು, ಖಾರ ತಿಂದ ದಿವಾನರ ರಸಿಕ ದೇಹ ಎಷ್ಟು ದಿನ ಸುಮ್ಮನಿದ್ದೀತು ? ಶಾಲ್ಯದ (ಇಂದಿನ ಸೇಲಂ) ಕೃಷ್ಣ ಸುಂದರಿ ಮರುಗವಲ್ಲಿ ದಿವಾನರ ಹೊಸ ಪ್ರೇಯಸಿಯಾದಳು. ಹಳೆಯವಳು ನೆನಪಿನಿಂದ ಕ್ರಮೇಣ ಮರೆಯಾದಳು. ನಾಗಾಸಾನಿಯ ಮನೆಯ ಒಂದೊಂದೇ ವಸ್ತುಗಳು ಮರುಗವಲ್ಲಿಯ ಬಿಡಾರ ಸೇರಿದವು. ಸಾನಿಯ ಇಬ್ಬರು ಸೇವಕಿಯರಿಗೆ ಮರುಗವಲ್ಲಿಯ ಮನೆಗೆ ವರ್ಗಾವಣೆ ಆಯಿತು. ಸೇವಕಿಯರು ಸಾನಿಯ ಒಡವೆಗಳು, ಹಣ, ಬೆಲೆಬಾಳುವ ಸಾಮಾನುಗಳನ್ನು ಅಪಹರಿಸಲು ಮರೆಯಲಿಲ್ಲ.

## ಸಾಕ್ಷಿ !



ವಿವಾಹಕ್ಕೆ
ಸಾಕ್ಷಿಯಾದ
ಅಗ್ನಿ
ವಿಚ್ಛೇದನಕ್ಕೆ
ಸಾಕ್ಷಿಯಾಗಲಾರದು

**ಪಿ. ಜೆ. ರಾಘವೇಂದ್ರ**
ಮೈಸೂರು – ೫೭೦೦೨೩

ಸಾನಿಯ ಸಹಾಯಕ್ಕೆ ವಯಸ್ಸಾದ ಸೇವಕಿಯೊಬ್ಬಳು ಮಾತ್ರ ಉಳಿದಳು. ದಿವಾನರ ಉಪೇಕ್ಷೆಯಿಂದಾಗಿ, ಗಂಜಿಗೂ ತತ್ವಾರ ಬಂದಿತು. ಶೆಟ್ಟರಿಗೆ ಮೂರು ತಿಂಗಳ ಬಾಡಿಗೆ ಬಾಕಿ ಬಿದ್ದು, ಮನೆ ಖಾಲಿ ಮಾಡಲು ವರಾತ ಹಚ್ಚಿದರು. ದಿವಾನರು ಶೆಟ್ಟರನ್ನು ಬರಹೇಳಿ ಬಾಡಿಗೆ ಬಾಕಿ ಚುಕ್ತಾಮಾಡಿ, ನಾಗಾಸಾನಿಯನ್ನು ಅವರ ಮನೆಯಿಂದ ಹೊರಹಾಕುವ ಜವಾಬ್ದಾರಿಯನ್ನು ಅವರಿಗೆ ವಹಿಸಿದರು. ದಿವಾನರ ಆದೇಶವನ್ನು ಪಾಲಿಸಿ, ಸಾನಿ ಮತ್ತು ಅವಳ ಸೇವಕಿಯನ್ನು ಊರ ಹೊರಗಿನ ಸಿದ್ದಯ್ಯನ ಮಠದ ಛತ್ರದ ಮುರುಕು ಕೋಣೆಗೆ ಸಾಗಹಾಕಲು ಕಸ್ತೂರಿ ಶ್ರೀರಂಗಶೆಟ್ಟರು ಏರ್ಪಾಡು ಮಾಡಿದರು.

"ಸಂಗೀತ ವಿದ್ವಾನ್ ರಂಗಪ್ಪನವರಿಗೆ ನಾಗಾಸಾನಿಯ ಅನಾರೋಗ್ಯದ ವಿಚಾರ ತಿಳಿದಿತ್ತು. ದಿವಾನರ ಆಸರೆಯಲ್ಲಿ ಅವಳಿಗೆ ಹೆಚ್ಚಿನ ತೊಂದರೆ ಆಗಲಾರದು ಎಂದು ಭಾವಿಸಿದ್ದರು. ಆದರೆ ಅವಳನ್ನು ಮುರುಕು ಛತ್ರಕ್ಕೆ ಸಾಗಹಾಕುವ ಹುನ್ನಾರ ತಿಳಿದ ಕೂಡಲೆ ಅವರು ಅವಳ ಮನೆಗೆ ಧಾವಿಸಿ, ಅಲ್ಲಿನ ಸ್ಥಿತಿ ನೋಡಿ ದಿಗ್ಭ್ರಮೆಗೊಂಡರು. ಅರೆ ಪ್ರಜ್ಞೆಯ ಸ್ಥಿತಿ, ನಿಸ್ತೇಜ ಕಣ್ಣುಗಳು, ನಿತ್ರಾಣ ದೇಹ ಕಂಡ ಅವರಿಗೆ ಅವಳ ಅಂತ್ಯ ದೂರವಿಲ್ಲ ಎಂದು ಅನ್ನಿಸಿತು. ಅವಳನ್ನು ತಮ್ಮ ಮನೆಗೆ ಕರೆದುಕೊಂಡು ಹೋಗುವ ನಿರ್ಧಾರ ಮಾಡಿದರು. ಅವಳ ಅಳಿದುಳಿದ ಸಾಮಾನುಗಳನ್ನು ಒಂದು ಗಾಡಿಯಲ್ಲಿ ಪೇರಿಸಿ, ಅದರಲ್ಲಿ ಅವಳನ್ನೂ ಮಲಗಿಸಿಕೊಂಡು ಮನೆ ಸೇರಿದರು. ಅವರ ಮನೆಯಲ್ಲಿ ಪರಸ್ಥಳದ ಶಿಷ್ಯರ ಅನುಕೂಲಕ್ಕೆ ಇದ್ದ ಪ್ರತ್ಯೇಕ ಕೋಣೆಯಲ್ಲಿ ನಾಗಾಸಾನಿಗೆ ಆಶ್ರಯ ನೀಡಿದರು. ರಂಗಪ್ಪನವರ ಹೆಂಡತಿ, ನಂಜಮ್ಮನವರಿಗೆ ಸಾನಿಯ ಅವಸ್ಥೆ ನೋಡಲಾಗಲಿಲ್ಲ. ಅವರು ಅವಳನ್ನು ತಮ್ಮ ಮಗಳಂತೆ ತಿಳಿದು ಶುಶ್ರೂಷೆ ಮಾಡಿದರು. ತಮ್ಮ ಮನೆಯ ಸಮೀಪ ವಾಸವಾಗಿದ್ದು, ಪರಿಚಿತರೂ ಆದ ವೈದ್ಯ ವರದಯ್ಯನವರಿಗೆ ನಾಗಾಸಾನಿಯ ಕಾಯಿಲೆ ಬಗ್ಗೆ ತಿಳಿಸಿ, ಚಿಕಿತ್ಸೆ ನೀಡಲು ರಂಗಪ್ಪನವರು ಕೇಳಿಕೊಂಡರು. ವರದಯ್ಯನವರು ಸಾನಿಯನ್ನು ಪರೀಕ್ಷಿಸಿ "ಈಗಾಗಲೇ ಘಟಾನುಘಟಿಗಳ ಪ್ರಯತ್ನ ವಿಫಲವಾಗಿರುವಾಗ, ನನ್ನಿಂದ ರೋಗ ಗುಣವಾಗುವ ಅವಕಾಶ ಕಡಿಮೆ. ಕಾಯಿಲೆ ಬಹಳ ಉಲ್ಬಣ ಸ್ಥಿತಿಯಲ್ಲಿದೆ. ನಾಡಿಮಿಡಿತ ಬಹಳ ಕ್ಷೀಣವಾಗಿದೆ, ರಕ್ತಹೀನತೆಯಿಂದ ದೇಹ ದುರ್ಬಲವಾಗಿದೆ, ನನ್ನ ಶಕ್ತ್ಯಾನುಸಾರ ಚಿಕಿತ್ಸೆ ಮಾಡುತ್ತೇನೆ, ಮುಂದಿನದು ದೈವೇಚ್ಛೆ" ಎಂದು ಹೇಳಿ, ಚೂರ್ಣ, ಭಸ್ಮಗಳ ಉಪಚಾರ ಪ್ರಾರಂಭ ಮಾಡಿದರು.

"ವರದಯ್ಯನವರ ಚಿಕಿತ್ಸೆ, ರಂಗಪ್ಪ ಮತ್ತು ನಂಜಮ್ಮನವರ ವಾತ್ಸಲ್ಯಭರಿತ ಶುಶ್ರೂಷೆಯಿಂದ ನಾಗಾಸಾನಿಯ ಆರೋಗ್ಯದಲ್ಲಿ ಕ್ರಮೇಣ ಸುಧಾರಣೆ ಕಂಡುಬಂದಿತು. ಸಹಾಯವಿಲ್ಲದೆ ಬಚ್ಚಲಿಗೂ ಹೋಗದ ಸ್ಥಿತಿಯಿಂದ, ಗೋಡೆ ಹಿಡಿದು ನಡೆಯುವ ಸ್ಥಿತಿಗೆ ಬರಲು ಒಂದು ತಿಂಗಳ ಕಾಲ ಬೇಕಾಯಿತು. ಸೇವಿಸಿದ ಆಹಾರ ಸರಿಯಾಗಿ ದಕ್ಕಲು, ಎರಡು ತಿಂಗಳು ಬೇಕಾಯಿತು. ವರದಯ್ಯನವರು ಪ್ರತಿದಿನ ಬಂದು ಔಷಧೋಪಚಾರಗಳನ್ನು ಸೂಚಿಸಿ, ಅವಳ ಆರೋಗ್ಯ ದಿನದಿಂದ ದಿನಕ್ಕೆ ಉತ್ತಮವಾಗುವುದಕ್ಕೆ ಬಹಳ ಶ್ರಮಿಸಿದರು. ನಂಜಮ್ಮನವರು ಪುಷ್ಟಿದಾಯಕ ಹಾಗೂ ರುಚಿಕರ ಅಡುಗೆ ಮಾಡಿ ಹೊತ್ತು ಹೊತ್ತಿಗೆ ಪ್ರೀತಿವಿಶ್ವಾಸದಿಂದ ಉಣಬಡಿಸಿದರು. ಇಂತಹ ಸಜ್ಜನರ ನಿರ್ವಿಕಾರ, ನಿಸ್ವಾರ್ಥ ಸೇವೆಯ ಪರಿಣಾಮವಾಗಿ, ನಾಗಾಸಾನಿ ಆರು ತಿಂಗಳಲ್ಲಿ ಸುಧಾರಿಸಿ, ಪೂರ್ಣ ಆರೋಗ್ಯವಂತಳಾದಳು. ನಾಗಾಸಾನಿಯ ಪವಾಡಸದೃಶ ಚೇತರಿಕೆಗೆ ಇಂತಹುದೇ ಕಾರಣ ಎಂದು ಹೇಳುವುದು ಕಷ್ಟ. ವರದಯ್ಯನವರ ವೈದ್ಯದ ಪರಿಣಿತಿಯೋ, ರಂಗಪ್ಪ ದಂಪತಿಗಳ ನಿರ್ಮಲ ಅಂತಃಕರಣಪೂರ್ವಕ ಸೇವೆಯೋ ಅಥವಾ ಯಾರೂ ಕಾಣದ ದೇವರ ಕೃಪೆಯೋ ತಿಳಿಯದು. ಎಲ್ಲವನ್ನೂ ಕಳೆದುಕೊಂಡು, ಬರಿಗೈ ಆದ ನಾಗಾಸಾನಿ ಇವರುಗಳ ಋಣ ತೀರಿಸುವ ರೀತಿ ತಿಳಿಯದೆ ಪೇಚಾಡಿದಳು.

"ಒಂದು ವರ್ಷಕ್ಕೂ ಹೆಚ್ಚು ಕಾಡಿದ ಅನಾರೋಗ್ಯ, ಅವಳ ಚೆಲುವಿನ ಮೇಲೆ ಯಾವುದೇ ಪರಿಣಾಮ ಬೀರಲಿಲ್ಲ. ಮೊದಲಿನ ಚೆಲುವು ಮತ್ತು ಲಾವಣ್ಯಕ್ಕೆ ಯಾವುದೇ ಕುಂದು ಬರಲಿಲ್ಲ. ಆದರೆ ಅವಳು ಹೆಚ್ಚು ಗಂಭೀರಳಾದಳು. ನಾಗಾಸಾನಿ ಗುಣಮುಖಳಾದ ಸುದ್ದಿ ನಗರದ ಶ್ರೀಮಂತ ರಸಿಕರ ಆಸಕ್ತಿ ಕೆರಳಿಸಿತು. ಈ ಬಗ್ಗೆ ಕೆಲವು ವಿಚಾರಣೆಗಳು ರಂಗಪ್ಪನವರಲ್ಲಿ ಜಿಗುಪ್ಸೆ ಮೂಡಿಸಿತು. ಆದರೆ ನಾಗಾಸಾನಿ ತನ್ನ ಹಿಂದಿನ ಜೀವನಕ್ಕೆ ಹಿಂದಿರುಗುವ ವಿಚಾರದಲ್ಲಿ ಯಾವ ರೀತಿಯ ಆಸಕ್ತಿಯನ್ನೂ ತೋರಲಿಲ್ಲ. ನಗರದ ರಸಿಕರಿಂದ ಬಂದ ಅನೇಕ ಲಾಭದಾಯಕ ಪ್ರಸ್ತಾಪಗಳನ್ನು ನಾಗಾಸಾನಿ ಮುಲಾಜಿಲ್ಲದೆ ತಿರಸ್ಕರಿಸಿದಳು. ಅವಳು ತನ್ನ ಹಿಂದಿನ ಜೀವನಕ್ಕೆ ಯಾವ ಕಾರಣಕ್ಕೂ ಮತ್ತೆ ಹೋಗುವುದಿಲ್ಲವೆಂಬ ದೃಢನಿರ್ಧಾರವನ್ನು ಜಾಹಿರ್‌ಪಡಿಸಿದ್ದು ನಗರದ ರಸಿಕ ವೃಂದದಲ್ಲಿ ತೀವ್ರ ನಿರಾಸೆ ಮತ್ತು ಹತಾಶೆ ಮೂಡಿಸಿತು. ಆದರೂ ಆಶಾಭಾವನೆ ಹೊಂದಿದ ಕೆಲವರು ಸಾನಿಯ ಒಲವನ್ನು ಪಡೆಯಲು ನಿರಂತರ ಪ್ರಯತ್ನ ಮಾಡುತ್ತಲೇ ಇದ್ದರು.

"ಆ ಸಮಯದಲ್ಲಿ, ಮೈಸೂರು ನಗರಕ್ಕೆ ಶ್ರವಣಬೆಳಗೊಳದ ಭಟ್ಟಾರಕ ಸ್ವಾಮಿಗಳು ಭೇಟಿ ನೀಡಿದಾಗ, ನಾಗಾಸಾನಿ ಅವರನ್ನು ಕಾಣಲು ಅಪ್ಪಣೆ ಪಡೆದುಕೊಂಡಳು. ಆ ಸಂದರ್ಭದಲ್ಲಿ, ಅವಳು ತಾನು ಇನ್ನು ಮುಂದೆ ಹಳೆಯ ಜೀವನಕ್ಕೆ ಮತ್ತೆ ಹಿಂದಿರುಗದ ಮತ್ತು ಜೈನ ಧರ್ಮ ಸ್ವೀಕಾರಮಾಡುವ ನಿರ್ಧಾರ ತಿಳಿಸಿ, ಸ್ವಾಮಿಗಳಲ್ಲಿ ಆಶ್ರಯ ನೀಡುವಂತೆ ಪ್ರಾರ್ಥನೆ ಮಾಡಿದಳು. ಆಶ್ರಯ ಇಲ್ಲದಿದ್ದಲ್ಲಿ ಸಾವಿಗೆ ಶರಣಾಗುವುದಾಗಿ ತಿಳಿಸಿದಳು. ಹರೆಯದ ಚೆಲುವೆ, ಅದರಲ್ಲೂ ಸಂಸ್ಥಾನದ ದಿವಾನರ ಸೂಳೆಗೆ, ಸ್ವಾಮಿಗಳು ಆಸರೆ ನೀಡುವುದಕ್ಕೆ ಹಿಂಜರಿದರು. ಆದರೆ ಅವಳನ್ನು ಸಾವಿಗೆ ಅಥವಾ ಬೇಡದ ಹೀನಾಯ ಬದುಕಿಗೆ ಅಟ್ಟುವುದು ಅವರಿಗೆ ಅಸಹನೀಯವಾಗಿತ್ತು. ಮಾನವೀಯತೆ ಮತ್ತು ಕರುಣೆಯ ಸಾಕಾರಮೂರ್ತಿಗಳಾಗಿದ್ದ ಸ್ವಾಮಿಗಳು, ಕೆಲವರ ಆಕ್ಷೇಪಣೆಯನ್ನು ಮೀರಿ, ಶ್ರವಣಬೆಳಗೊಳದಲ್ಲಿ ತಮ್ಮ ಧರ್ಮದ ಓರ್ವ ವೃದ್ಧೆಯ ಸಂಗಾತಿಯಾಗಿರಲು ಸಾನಿಗೆ ವ್ಯವಸ್ಥೆ ಮಾಡಿದರು.

"ನಾಗಾಸಾನಿ ತನ್ನ ಗುರುಗಳೂ ಆಶ್ರಯದಾತರೂ ಆದ ರಂಗಪ್ಪನವರು, ಅವರ ಹೆಂಡತಿ ನಂಜಮ್ಮ ಮತ್ತು ತನಗೆ ಪುನರ್ಜನ್ಮ ನೀಡಿ ಕಾಪಾಡಿದ ವೈದ್ಯ ವರದಯ್ಯನವರ ಕಾಲುಗಳಿಗೆ ಭಕ್ತಿಪೂರ್ವಕವಾಗಿ ಎರಗಿ, ಅವರೆಲ್ಲರಿಗೂ ಮನಸಾರೆ ವಂದಿಸಿ, ಉಟ್ಟ ಉಡುಗೆಯಲ್ಲಿ ಮೈಸೂರು ತೊರೆದು ಶ್ರವಣಬೆಳಗೊಳ ಸೇರಿದಳು. ಅವಳು ರಂಗಪ್ಪನವರಿಗೆ ಆಗಿಂದಾಗ್ಗೆ ತನ್ನ ಕ್ಷೇಮ ಸಮಾಚಾರ ತಿಳಿಸುತ್ತಿದ್ದಳು. ಅವಳು ಸುಮಾರು ಆರು ವರುಷ ಬೆಳಗೊಳದಲ್ಲಿ ಇದ್ದು, ತನ್ನ ಆಶ್ರಯದಾತೆ ವೃದ್ಧೆಯ ನಿಧನದ ನಂತರ, ಮಲೆನಾಡು ಸೀಮೆಯ ಇನ್ನೊಂದು, ಜೈನ ಕ್ಷೇತ್ರ ಹೊಂಬುಜಕ್ಕೆ (ಇಂದಿನ ಹುಂಚ) ಸ್ಥಳಾಂತರಗೊಂಡಳು. ಅವಳು ಆ ಕ್ಷೇತ್ರದ ಮಠ ಮತ್ತು ಪದ್ಮಾವತಿ ಅಮ್ಮನವರ ದೇವಸ್ಥಾನದ ಪರಿಚಾರಿಕೆ ಮಾಡಿಕೊಂಡು ಸುಮಾರು ಹತ್ತು ವರುಷ ಅಲ್ಲಿಯೇ ಇದ್ದಳು. ನಂತರದಲ್ಲಿ ಅವಳ ಆರೋಗ್ಯ ಹದಗೆಟ್ಟ ಕಾರಣ, ತನ್ನ ಹುಟ್ಟೂರು ಗೇರುಸೊಪ್ಪೆಗೆ ಹೋಗಿ ನೆಲಸಿದಳು. ನಾಗಾಸಾನಿ ಗೇರುಸೊಪ್ಪೆಗೆ ಹಿಂದಿರುಗಿದ ಕೆಲವು ವರ್ಷಗಳ ನಂತರ, ಸುಮಾರು ಅವಳ ನಲವತ್ತನೆಯ ವಯಸ್ಸಿನಲ್ಲಿ ಕಾಲವಾದ ಸುದ್ದಿ ರಂಗಪ್ಪನವರಿಗೆ ಕೆಲದಿನಗಳ ಬಳಿಕ ತಿಳಿಯಿತು.

"ಇತ್ತ ವರದಯ್ಯನವರಿಗೆ ಸಾನಿಯ ಕಾಯಿಲೆಯನ್ನು ಗುಣಪಡಿಸಿದ್ದು ವರವಾಗಿ ಪರಿಣಮಿಸಬೇಕಿತ್ತು. ಆದರೆ ಅವರು ವಿನಾಕಾರಣ ಅಪಮಾನ, ಲೇವಡಿ, ಕುಹಕದ ಮಾತುಗಳನ್ನು ಎದುರಿಸಬೇಕಾಯಿತು. ವೃತ್ತಿವೈಷಮ್ಯ, ಅಸೂಯೆ, ಕೀಟಲೆಗಳು ಮೆರೆದವು. 'ಸಾನಿಯ ಕಾಯಿಲೆ ವರದಯ್ಯನವರು ಚಿಕಿತ್ಸೆ ಮಾಡುವ ಪೂರ್ವದಲ್ಲಿಯೇ ಗುಣವಾಗಿತ್ತು, ಅವರು ಕೇವಲ ಪುಷ್ಟಿದಾಯಕ ಲೇಹ್ಯ ಕೊಟ್ಟು ಹೆಸರು ಪಡೆದುಕೊಂಡರು' ಎಂದರು ರಾಜವೈದ್ಯರು. ಕೆಲವರು 'ಅವರು ಕೊಟ್ಟಿದ್ದು ಮದ್ದಲ್ಲ, ಮಾಡಿದ್ದು ಮಾಟ' ಎಂದರು. ಇನ್ನು ಕೆಲವರು, 'ವರದಯ್ಯನವರು ತಮ್ಮ ವೈದ್ಯದಿಂದ ಸಾನಿಯ ಸ್ತ್ರೀ ಸಹಜ ಬಯಕೆ ಕಾಮನೆಗಳನ್ನು ಕೊಂದುಹಾಕಿದರು' ಎಂಬ ಕುಹಕದ ಮಾತುಗಳನ್ನು ಆಡಿ ಸಂತಸಪಟ್ಟರು. ಆದರೆ ಮೈಸೂರಿನ ಸಾನಿಗಳು ಅವರನ್ನು ಬಹಳ ಆದರ, ಗೌರವದಿಂದ ಕಂಡರು. ಅವರೆಲ್ಲರೂ ಚಿಕಿತ್ಸೆಗೆ ವರದಯ್ಯನವರಲ್ಲಿಗೆ ಬರುತ್ತಿದ್ದರು. ಇದೂ ಸಹ ಲೇವಡಿಗೆ ಅವಕಾಶವಾಗಿ, ಅವರನ್ನು "ಸಾನಿಯರ ಧನ್ವಂತ್ರಿ" ಎಂದು ಅಪಹಾಸ್ಯ ಮಾಡುತ್ತಿದ್ದರು. ಸೂಕ್ಷ್ಮ ಸ್ವಭಾವದ ವ್ಯಕ್ತಿಯಾದ ವರದಯ್ಯನವರು ಮಾನಸಿಕವಾಗಿ ಕುಗ್ಗಿಹೋದರು. ಇಂತಹ ಅಸಹನೀಯ ವಾತಾವರಣದಲ್ಲಿ ಅವರಿಗೆ ಮೈಸೂರಿನಲ್ಲಿ ಬಾಳು ಸಾಗಿಸುವುದು ಅಸಾಧ್ಯವಾಯಿತು. ಅವರು ಮೈಸೂರನ್ನು ತೊರೆಯುವ ನಿರ್ಧಾರ ಮಾಡಿ, ಹಿತೈಷಿಯೊಬ್ಬರ ಸಲಹೆ ಮೇರೆಗೆ, ಬೆಂಗಳೂರು ಸಮೀಪದ ಯಲಹಂಕಕ್ಕೆ ತಮ್ಮ ಸಂಸಾರವನ್ನು ವರ್ಗಾಯಿಸಿದರು. ನಂತರ ಅವರು ಮೈಸೂರಿನ ಸಂಪರ್ಕವನ್ನು ಸಂಪೂರ್ಣವಾಗಿ ಕಡಿದುಕೊಂಡರು. ಇಂದು ನಿಮ್ಮಿಂದ, ಅವರ ಸಂತತಿ ಉತ್ತರೋತ್ತರ ಅಭಿವೃದ್ಧಿ ಹೊಂದಿದ ಸಂಗತಿ ತಿಳಿದು ಸಂತೋಷವಾಯಿತು.

"ಇದು ಎರಡು ಜೀವಿಗಳ ಕತೆ, ವ್ಯಥೆ. ಆಸೆ ಆಕಾಂಕ್ಷೆಗಳನ್ನು ಹೊತ್ತುಕೊಂಡು, ರಾಜಧಾನಿಯಲ್ಲಿ ತಮ್ಮ ಭವಿತವ್ಯವನ್ನು ರೂಪಿಸಿಕೊಳ್ಳಲು ಬಂದು, ವಿಭಿನ್ನ ಅನುಭವವನ್ನು ಕಂಡುಕೊಂಡ ಪ್ರಸಂಗ. ಇವಿಷ್ಟು, ನೀವು ಅರಸಿ ಬಂದ ವಿಚಾರದಲ್ಲಿ ನನಗೆ ತಿಳಿದಿರುವ ವಿವರಗಳು. ನಿಮ್ಮ ಅನ್ವೇಷಣೆಗೆ ಈಗ ಸಮರ್ಪಕ ಸಮಾಧಾನ ದೊರಕಿದೆ ಎಂದು ಭಾವಿಸಿದ್ದೇನೆ" ಎಂದು ಹೇಳಿ, ತಮ್ಮ ವಿವರಣೆ ಮುಗಿಯಿತು ಎಂದು ಕಾಳಾಚಾರ್ ಸೂಚಿಸಿದರು.

ಸಂಬಂಧವಿಲ್ಲದ ವ್ಯಕ್ತಿಗಳ ನಡುವಿನ ಮಾನವೀಯ ಕಳಕಳಿ, ದೊಡ್ಡವರ ಸಣ್ಣತನ, ಸಣ್ಣವರ ದೊಡ್ಡತನ ಇವುಗಳನ್ನು ಕಾಳಾಚಾರ್‌ರವರು ಮನಮುಟ್ಟುವಂತೆ ನಿರೂಪಿಸಿದ್ದರು. ಆದರೆ ನಿರೂಪಣೆಯಲ್ಲಿ ಕೊರತೆ ಇರುವದನ್ನು ಗಮನಿಸಿ, "ತಾವು ಮಹಾರಾಜರು ದಯಪಾಲಿಸಿದ ಬೆಳ್ಳಿ ಕೋಲಿನ ಪ್ರಸ್ತಾಪ ಮಾಡಲಿಲ್ಲವಲ್ಲ" ಎಂದು ನಮ್ರವಾಗಿ ಹೇಳಿದೆ. ಅದಕ್ಕೆ ಅವರು, "ಮರೆತಿದ್ದೆ, ನೀವು ಬೆಳ್ಳಿ ಕೋಲಿನ ಹಿಂದೆ ಬಿದ್ದು ಬಂದವರಲ್ಲವೆ? ಹರಿಕಥೆಯಲ್ಲಿ ಬರುವ ಉಪಕಥೆಯಂತೆ ಅದು ಇನ್ನೊಂದು ಪ್ರಸಂಗ. ಅದನ್ನು ಸಹ ತಿಳಿಸುತ್ತೇನೆ. ಆದರೆ ನೀವು ತಿಳಿದಂತೆ ಅದು ಬೆಳ್ಳಿ ಕೋಲು ಅಲ್ಲ, ಅದು ಬೆಳ್ಳಿಯ ಕಡೆಗೋಲು.

"ಹಿಂದೆ, ಮಳೆಗಾಲದ ಆಷಾಢ, ಶ್ರಾವಣ ಮಾಸಗಳಲ್ಲಿ ಮೈಸೂರು ಅರಮನೆಯಲ್ಲಿ ಪ್ರತಿ ಸಂಜೆ ಪುರಾಣ ಪ್ರವಚನ, ಹರಿಕಥೆ, ಭಜನೆ ಮುಂತಾದ ಕಾರ್ಯಕ್ರಮ ನಿಯೋಜಿಸಲಾಗುತ್ತಿತ್ತು. ಇದರಲ್ಲಿ ಹೆಚ್ಚಾಗಿ ರಾಜ ಪರಿವಾರದ ಹೆಂಗಸರು, ಉನ್ನತ ಅಧಿಕಾರಿಗಳ ಮನೆಯವರು ಶ್ರೋತೃಗಳು. ಪ್ರಸಕ್ತ ಪ್ರಸಂಗದ ಸಂದರ್ಭದಲ್ಲಿ ಉಡುಪಿಯ ಮಠದ ವಿದ್ವಾಂಸರಾದ ಅನಂತಾಚಾರ್ ಎಂಬವರಿಂದ ಭಾಗವತದ ಉಪನ್ಯಾಸ ವ್ಯವಸ್ಥೆಯಾಗಿತ್ತು. ಉಪನ್ಯಾಸದಲ್ಲಿ ಭಾಗವತಕ್ಕಿಂತ ಉಡುಪಿಯ ಕೃಷ್ಣನ ಮಹಿಮೆ ಪ್ರಧಾನವಾಗಿತ್ತು. ಉತ್ತಮ ವಾಗ್ಮಿಗಳೂ ಹಾಡುಗಾರರೂ ಆದ ಆಚಾರ್ಯರು, ತಮ್ಮ ಚತುರ ಮಾತು ಮತ್ತು ಹಾಡುಗಳಿಂದ ಎಲ್ಲರ ಪ್ರಶಂಸೆಗೆ ಭಾಜನರಾದರು. ಒಮ್ಮೆಯಾದರೂ ಉಡುಪಿಯ ಕೃಷ್ಣನ ದರ್ಶನ ಮಾಡಿ ಅವನ ಸೇವೆ ಸಲ್ಲಿಸದಿದ್ದರೆ, ಜೀವನವೇ ವ್ಯರ್ಥ ಎಂಬ ಸಂದೇಶ ಮನಮುಟ್ಟುವಂತೆ ವಾಚಿಸಿದರು. ಆಚಾರ್ಯರ ಉಪನ್ಯಾಸವನ್ನು ಒಂದು ಕಿವಿಯಲ್ಲಿ ಕೇಳಿ ಇನ್ನೊಂದು ಕಿವಿಯಿಂದ ಬಿಟ್ಟವರೇ ಹೆಚ್ಚಿನ ಮಂದಿ. ಆದರೆ ರಾಜಮಾತೆಯವರು ಬಹಳ ಪ್ರಭಾವಿತರಾಗಿ, ಕೂಡಲೇ ಕೃಷ್ಣನ ದರ್ಶನಕ್ಕೆ ಸೂಕ್ತ ಸಮಯದ ನಿಗದಿಗೆ ಭಕ್ಷಿಗಳನ್ನು ಉಡುಪಿಗೆ ಕಳುಹಿಸಲು ದಿವಾನರಿಗೆ ಆದೇಶ ನೀಡಿದರು. ದಿವಾನರ ಅಪ್ಪಣೆ ಮೇರೆಗೆ ಭಕ್ಷಿಗಳು ಉಡುಪಿಗೆ ಧಾವಿಸಿ, ಕೃಷ್ಣ ಮಠದ ಅಧಿಕಾರಿಗಳಲ್ಲಿ ರಾಜಮಾತೆಯವರ ಭೇಟಿಗೆ ಕೂಡಲೆ ಏರ್ಪಾಡು ಮಾಡುವಂತೆ ಬಿನ್ನವಿಸಿದರು. ಹಿಂದಿನಿಂದಲೂ ಉಡುಪಿ ಮಠ ಮತ್ತು ಮೈಸೂರು ರಾಜಮನೆತನ ಸಂಬಂಧ ಅಷ್ಟಕ್ಕಷ್ಟೆ. ಮಠದವರು, ಭಕ್ಷಿಯವರನ್ನು ಎರಡು ದಿನ



ರಾಜ್ಯದಲ್ಲಿ ಮೂಢನಂಬಿಕೆ ನಿಲ್ಲಲೀಂತ ಪಕ್ಷದಿಂದಲೇ ಹೋಮ ಹವನ ಮಾಡಿಸೋಣ. ಸರ್ಕಾರಕ್ಕೆ ತೊಂದರೆ ಇರೊಲ್ಲ.

ಕಾಯಿಸಿ, "ಮಳೆ, ನೆರೆ, ಪರ್ಯಾಯ, ಮಠ-ದೇವಾಲಯದ ದುರಸ್ತಿ ಕೆಲಸ, ಇತ್ಯಾದಿ ಕಾರಣಗಳಿಂದ, ಇನ್ನು ಒಂದು ವರ್ಷ ರಾಜಮಾತೆಯವರ ಭೇಟಿ ಸೂಕ್ತವಲ್ಲ" ಎಂದು ಹೇಳಿ ಅವರನ್ನು ಸಾಗಹಾಕಿದರು. ಈ ಸುದ್ದಿ ತಿಳಿದು ರಾಜಮಾತೆಯವರಿಗೆ ಬಹಳ ಖೇದವಾಯಿತು. ಉಡುಪಿಯ ಕೃಷ್ಣನ ದರ್ಶನ ಭಾಗ್ಯ ದೊರಕುವ ತನಕ, ಅವನ ಒಂದು ಮೂರ್ತಿಯನ್ನು ಅರಮನೆಯ ದೇವರ ಮಂದಿರದಲ್ಲಿ ಇಟ್ಟು ಪ್ರತಿದಿನ ದರ್ಶನ ಮತ್ತು ಪೂಜೆ ಮಾಡುವ ತೀವ್ರ ಅಭಿಲಾಷೆಯನ್ನು ಹೊಂದಿದರು. ಸುಮಾರು ಮೂರು ಅಡಿ ಎತ್ತರದ ಉಡುಪಿಯಲ್ಲಿನ ಕೃಷ್ಣನ ತದ್ವತ್ ಮೂರ್ತಿಯನ್ನು ಬೆಳ್ಳಿಯಲ್ಲಿ ಮಾಡಿಸಲು ಕೂಡಲೆ ದಿವಾನರಿಗೆ ಅಪ್ಪಣೆ ಕೊಟ್ಟರು. ದಿವಾನರು ಪ್ರಸಿದ್ಧ ಸೊನ್ನಗಾರರಾದ ಕಟಪಾಡಿ ವೀರೇಶಾಚಾರ್‌ರವರಿಗೆ ಹುಝೂರ್ ಟ್ರಜರಿಯಿಂದ ಮೂರ್ತಿಯ ತಯಾರಿಕೆಗೆ ಬೇಕಾಗುವ ಬೆಳ್ಳಿಯನ್ನು ಬಿಡುಗಡೆ ಮಾಡಿ, ವಿಗ್ರಹವನ್ನು ಒಂದು ತಿಂಗಳಿನಲ್ಲಿ ಸಿದ್ಧಪಡಿಸಲು ತಾಕೀತು ಮಾಡಿದರು. ವೀರೇಶಾಚಾರ್ ಒಬ್ಬ ನುರಿತ ಕಲೆಗಾರರು. ಆದರೆ ವೃತ್ತಿಯಲ್ಲಿ ಎಲ್ಲರಂತೆ ನಿಶ್ಚಿತ ಗಡುವನ್ನು ಎಂದೂ ಪರಿಗಣಿಸದವರು. ಅದರಲ್ಲೂ ಸರ್ಕಾರಿ ಕೆಲಸ. ಮೂರ್ತಿಯ ಕೆಲಸ ನಿಧಾನವಾಗಿ ಸಾಗಿತ್ತು. ಏತನ್ಮಧ್ಯೆ ರಾಜಮಾತೆಯವರು ಹಠಾತ್ತಾಗಿ ನಾಲ್ಕು ದಿನದ ಜ್ವರದಿಂದ ನರಳಿ ಕಾಲವಶವಾದರು. ಅವರ ಸಾವಿನೊಂದಿಗೆ ಕೃಷ್ಣನ ಮೂರ್ತಿಯ ನೆನಪು ಸರಿಯಿತು. ನಾಗಾಸಾನಿ ಮತ್ತು ದಿವಾನರ ಪ್ರಣಯ ಪ್ರಸಂಗ ಉತ್ಕಟಾವಸ್ಥೆ ತಲುಪಿದ ಸಂದರ್ಭದಲ್ಲಿ, ವೀರೇಶಾಚಾರ್ ಬೆಳ್ಳಿಯ ಸುಂದರ ಕೃಷ್ಣನ ವಿಗ್ರಹವನ್ನು ದಿವಾನರಿಗೆ ತಲುಪಿಸಿದರು. ಒಬ್ಬ ಕಲಾಕಾರ ತನ್ನ ಎಲ್ಲಾ ಕೌಶಲ್ಯವನ್ನು ಧಾರೆ ಎರೆದು ರಚಿಸಿದ ಸುಂದರ ಅನುಪಮ ಕೃತಿ, ಆ ವಿಗ್ರಹ. ಮೂರು ಅಡಿಯ ಮೂರ್ತಿ, ಮೂರ್ತಿಯಿಂದ ಬೇರ್ಪಡಿಸಬಹುದಾದ, ಅಷ್ಟೇ ಎತ್ತರದ ದಪ್ಪ ಕಡೆಗೋಲು ವಿಗ್ರಹದ ಸೌಂದರ್ಯವನ್ನು ಹೆಚ್ಚಿಸಿತ್ತು. ಇಂತಹ ಅನುಪಮ ಕಲಾಕೃತಿ ಅರಮನೆಯ ಯಾವುದೋ ಮೂಲೆಯ ದೇವರ ಕೋಣೆಯಲ್ಲಿ ಮರೆಯಾಗುವುದು ದಿವಾನರಿಗೆ ಸರಿ ತೋರಲಿಲ್ಲ. ಅದನ್ನು ತನ್ನ ಪ್ರಿಯತಮೆಗೆ ಒಲುಮೆಯ ದ್ಯೋತಕವಾಗಿ ಕೊಡುಗೆ ನೀಡಿದಲ್ಲಿ ಕೃತಿ ಮತ್ತು ಕಲಾಕಾರನಿಗೆ ನ್ಯಾಯ ದೊರಕೀತು ಎಂದು ನಿರ್ಧರಿಸಿ, ದಿವಾನರು ನಾಗಾಸಾನಿಗೆ ಆ ಸುಂದರ ಮೂರ್ತಿಯನ್ನು ಅರ್ಪಿಸಿದರು. ಸಾನಿಯ ಅನಾರೋಗ್ಯದ ಸಮಯದಲ್ಲಿ ಅವಳ ಸೇವಕಿಯರು ಅನೇಕ ಆಭರಣ ಉಡುಗೊರೆಗಳನ್ನು ಲಪಟಾಯಿಸಿದ್ದರು. ಆದರೆ ವಿಲೇವಾರಿಗೆ ತೊಂದರೆ ಎಂದು ಈ ವಿಗ್ರಹವನ್ನು ಸಾನಿಯ ಬಳಿಯೇ ಉಳಿಸಿದ್ದರು. ನಾಗಾಸಾನಿ ಮೈಸೂರಿನಿಂದ ಶ್ರವಣಬೆಳಗೊಳಕ್ಕೆ ಹೊರಡುವ ಮುನ್ನ ರಂಗಪ್ಪ ಮತ್ತು ವರದಯ್ಯನವರ ಕಾಲಿಗೆ ಎರಗಿ 'ಗುರುಗಳಿಗೆ ಮತ್ತು ನನ್ನ ಜೀವ ಉಳಿಸಿದ ವೈದ್ಯರಿಗೆ ಕಾಣಿಕೆ ಕೊಡಲಿಕ್ಕೆ ಈ ಕೃಷ್ಣನ ಮೂರ್ತಿಯಲ್ಲದೇ ಬೇರೇನೂ ನನ್ನಲ್ಲಿ ಇಲ್ಲ, ಇದನ್ನು ದಯವಿಟ್ಟು ಸ್ವೀಕರಿಸಿ' ಎಂದು ಹೇಳಿ ಮೂರ್ತಿಯನ್ನು ನೀಡಿದಳು. ಪರಸ್ಪರ ಮಾತುಕತೆ ನಡೆಸಿ ಮೂರ್ತಿಯನ್ನು ರಂಗಪ್ಪನವರೂ ಮೂರ್ತಿಯಿಂದ ಬೇರ್ಪಡಿಸಿದ ಕಡೆಗೋಲನ್ನು ವರದಯ್ಯನವರೂ ಸಾನಿಯ ನೆನಪಿಗೆ ಇಟ್ಟುಕೊಂಡರು. ಬಹುಶಃ ವರದಯ್ಯನವರೋ, ಅವರ ಮುಂದಿನ ಪೀಳಿಗೆಯವರೋ, ಬೆಳ್ಳಿ ಕೋಲು ಸೂಳೆಯ ಕಾಣಿಕೆ ಎಂದು ಹೇಳಲು ಮುಜುಗರಪಟ್ಟು ಮಹಾರಾಜರ ಕಾಣಿಕೆ ಎಂದು ಕಥೆ ಕಟ್ಟಿರಬೇಕು" ಎಂದು ಹೇಳಿ ತಮ್ಮ ಮಾತು ಮುಗಿಸಿದರು.

ಕಾಳಾಚಾರ್‌ರವರ ದೀರ್ಘ ವಿವರಣೆಗೆ ಮನಃಪೂರ್ವಕವಾಗಿ ವಂದಿಸಿ, ಸಾರ್ಥಕ ಭಾವದಿಂದ ಅವರ ಮನೆಯಿಂದ ರಸ್ತೆಗೆ ನಾನು, ಸೀನಿ ಇಳಿದೆವು.

**ಶಿವಮೊಗ್ಗ ರಮೇಶ್**
'ಗಣಪ', ನಂ. ೧೨೧, ೫ನೇ 'ಎ' ಕ್ರಾಸ್, ಜೆ. ಪಿ. ನಗರ ಒಂದನೇ ಹಂತ, ಬೆಂಗಳೂರು-೭೮

## ಅಕ್ಕನ ಆತ್ಮಶ್ರೀ



ಅಕ್ಕನೋದಿರಲಿಕ್ಕಿಲ್ಲ
ತರ್ಕದ ಗ್ರಂಥಭಂಡಾರವ
ಯಾವ ಮಾಯಾ ಮೋಹಬಂಧದ
ಕಟ್ಟು ಕಟ್ಟಳೆಗಳು
ಕಟ್ಟಿಡಲಾಗಲಿಲ್ಲ ಅವಳ ಮನವ.

ಹೂವದು ಅರಳಿದ್ದೇ
ಮಲ್ಲಿಕಾರ್ಜುನನ ಪದತಲಕ್ಕಾಗಿ
ಮತ್ತಾರೋ ಕಾಪುರುಷರ ಕೋರಿಕೆ
ಕಂಡಿತ್ತು ತಿರಸ್ಕಾರವಾಗಿ
ಜಗದೊಡೆಯನೇ ಗಂಡನೆಂದ ಬಳಿಕ
ಅಂಗಾಂಗಗಳ ಹಂಗೇ ಇಲ್ಲವಾಗಿ.
ಕಂದನೊದ್ದನೆಂದು ಕೊರಗದು ತಾಯಿ ಜೀವ
ಹಸಿದ ಕಂಗಳಿಗೆಲ್ಲ ಮಣಿಯದು ಅಕ್ಕನ ಜೀವ
ಕಿವಿ – ಕಣ್ಣು – ಚಿತ್ತವೆಲ್ಲ ಒಲಿದವನತ್ತವಿರಲು
ಕಿಂವದಂತಿಗಳೆಲ್ಲ ಗಾಳಿಪಾಲು.

ಹದಿವಯದ ಹೆಣ್ಮಗಳು
ಹರನೊಂದಿಗೆ ಲೀನವಾಗಿ
ಬಟ್ಟೆ – ಬಂಗಾರ – ಬಾಳೆಂಬ
ಗುರಿಗಳನೇ ತೃಣವಾಗಿಸಿ
ಹೊರಟಿದ್ದರ ದಿಟ್ಟತನ – ಗಟ್ಟಿತನ
ತಿಳಿಯಬಲ್ಲಿರೇ ನೀವು ?




ತನ್ನಾತ್ಮದ ಹಾಡಿಗೆ ದನಿಯಾದಳು ಅಕ್ಕ
ದಿಟ – ಸಟೆಗಳ ಒಣ ಗಲಾಟೆಗಳ ಮೆಟ್ಟಿ.
ಆತ್ಮಶಕ್ತಿಗುಪಮೆಯಾದಳು ಅಕ್ಕ
ಹೆಣ್ಣು – ಗಂಡುಗಳೆಂಬ ತರತಮವ ಮೀರಿ

**ಎ. ಎಂ. ಜಯಶ್ರೀ**
'ಶ್ರೀಗೌರಿ', ಸಂ. ೨೦
ಟಿ. ಜಿ. ಲೇಔಟ್, ಗಾಂಧಿನಗರ
ಬಳ್ಳಾರಿ – ೫೮೩ ೧೦೩



## ಹೆಣ್ಣೆಂದರೆ... ?

**(ಕಥಾ ಸಂಕಲನ)**

*ಡಾ॥ ಶಿವರಾಮ ಅಸುಂಡಿ*

**ಪುಟ : x + ೧೧೦ = ೧೨೦**

**ಬೆಲೆ : ರೂ. ೧೦೦**

**ಪ್ರಗತಿ ಗ್ರಾಫಿಕ್ಸ್**, ನಂ. ೧೧೯, ೩ನೇ ತಿರುವು, ೮ನೇ ಮುಖ್ಯರಸ್ತೆ, ಹಂಪಿನಗರ, ಬೆಂಗಳೂರು – ೧೦೪

*ಹತ್ತು ಕಥೆಗಳನ್ನೊಳಗೊಂಡಿರುವ ಈ ಕಥಾ ಸಂಕಲನ, ಹೈದರಾಬಾದ್ ಕರ್ನಾಟಕ ಭಾಗದ ಅನೇಕ ಸಮಸ್ಯೆಗಳನ್ನು, ಈ ನೆಲದ ಸ್ಥಿತಿಗತಿಗಳನ್ನು ವಾಸ್ತವಿಕ ನೆಲೆಗಟ್ಟಿನ ಮೇಲೆ ಬಿಂಬಿಸುತ್ತದೆ. ಇಲ್ಲಿನ ಬಹುತೇಕ ಕಥೆಗಳು ಕುತೂಹಲ ಕೆರಳಿಸುತ್ತವೆ. ಮನಮುಟ್ಟುವ, ಹೃದಯ ತಟ್ಟುವ ಕೆಲಸವನ್ನು ಮಾಡುತ್ತವೆ. ಚಿಂಚೋಳಿ ತಾಲೂಕಿನ ಕೊಂಚಾವರಂ ಲಂಬಾಣಿ ತಾಂಡಾಗಳಲ್ಲಿ ನಡೆದ ಮಕ್ಕಳ ಮಾರಾಟ ಪ್ರಕರಣ, ನಂತರ ನಡೆಯುತ್ತಿರುವ ಅಮಾನವೀಯ ಘಟನೆಗಳನ್ನು ಹೃದಯಸ್ಪರ್ಶಿಯಾಗಿ 'ಹೆಣ್ಣೆಂದರೆ' ಕಥೆ ಮೂಲಕ ಬಿಚ್ಚಿಟ್ಟಿದ್ದಾರೆ. ಲಂಬಾಣಿ ತಾಂಡಾಗಳಲ್ಲಿ ಆರ್ಥಿಕ ವ್ಯವಸ್ಥೆ ಸುಧಾರಣೆಗೆ ಪರಿಹಾರೋಪಾಯಗಳನ್ನೂ ಸೂಚಿಸಿದ್ದಾರೆ. ಹೆಣ್ಣು ಹುಟ್ಟಿದರೆ ಹುಣ್ಣು ಹುಟ್ಟಿದಂತೆ ಎಂದು ಪರಿಭಾವಿಸುವ ಈ ಸಮಾಜದಲ್ಲಿ ಹೆಣ್ಣು ಯಾವ ರೀತಿ ಸಮಸ್ಯೆಗೀಡಾಗುತ್ತಿದ್ದಾಳೆ, ಅನಕ್ಷರಸ್ಥ ಬಡ ಕುಟುಂಬದೊಳಗಿನ ಹೆಣ್ಣಿನ ದಯನೀಯ ಸ್ಥಿತಿ ಇತ್ಯಾದಿ ಹೆಣ್ಣಿನ ಬದುಕಿನ ವಿವಿಧ ಮಜಲುಗಳನ್ನು ಕಥೆಗಳು ಬಿಂಬಿಸಿವೆ. ಜೊತೆಗೆ ರೈತರ ಸಂಕಷ್ಟಗಳನ್ನು, ಪ್ರಸ್ತುತ ರಾಜಕೀಯ ಸ್ಥಿತಿಗತಿಗಳನ್ನು, ಪರ್ಯಾಯದ ಸಾಧ್ಯತೆಗಳನ್ನು ಬಿಚ್ಚಿಟ್ಟಿದ್ದಾರೆ. ಕೃತಿಯಲ್ಲಿ ಹೈದರಾಬಾದ್ ಕರ್ನಾಟಕ ಮತ್ತು ಬಳ್ಳಾರಿಯ ಸೊಗಡಿದ್ದು, ಗ್ರಾಂಥಿಕ ಭಾಷೆಯ ಮೂಲಕ ಕಥೆಗಳನ್ನು ಕಟ್ಟಿಕೊಡುವ ಕೆಲಸಗಳನ್ನು ಲೇಖಕರು ಮಾಡಿದ್ದಾರೆ.*

– ***ಪ್ರೊ॥ ನಾಗಾಬಾಯಿ ಬುಳ್ಳಾ**, ಗುಲ್ಬರ್ಗಾ*

## ಹಿಂಸೆ ದೌರ್ಜನ್ಯಕ್ಕೊಳಗಾದ ಮಕ್ಕಳ ಮನೋವಿಕಾಸ

*ಡಾ॥ ಕೆ. ಎಸ್. ಶುಭ್ರತಾ*

**ಪುಟ : ೧೧೬** | **ಬೆಲೆ : ರೂ. ೫೦**

**ನವಕರ್ನಾಟಕ ಪ್ರಕಾಶನ**, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

*ಮಕ್ಕಳ ಮೇಲಿನ ಹಿಂಸೆ–ದೌರ್ಜನ್ಯಗಳು ಹೆಚ್ಚಾಗುತ್ತಿರುವ ಇಂದಿನ ದಿನಗಳಲ್ಲಿ ಅದರ ಸ್ವರೂಪವನ್ನು ಪೋಷಕರಿಗೂ – ನಾಗರಿಕರಿಗೂ ತಿಳಿಸುವಲ್ಲಿ ಈ ಕೃತಿ ನೆರವಾಗಿದೆ. ಹೂವು ಅರಳಿದಂತೆ ಸಹಜವಾಗಿ ವಿಕಸಿತಗೊಳ್ಳಬೇಕಾದ ಮಕ್ಕಳ ದೈಹಿಕ–ಬೌದ್ಧಿಕ ಬೆಳವಣಿಗೆಯನ್ನು ನಾವು ನಮ್ಮ ಸ್ವಾರ್ಥಕ್ಕಾಗಿ ಎಲ್ಲೋ ನಿರ್ಬಂಧಿಸುತ್ತಿರುವುದು ಎಷ್ಟೋ ಹೆತ್ತವರಿಗೆ ತಿಳಿದಿರುವುದೇ ಇಲ್ಲ. ಇಂದಿನ ಮಕ್ಕಳು ತಮ್ಮ ಬಾಲ್ಯವನ್ನು ಆನಂದ–ಸಂತೃಪ್ತಿಯಿಂದ ಕಳೆಯುತ್ತಾರೆಯೇ ? ಖಂಡಿತ ಇಲ್ಲ. ಸ್ಕೂಲ್ ಬಸ್ಸಿನಲ್ಲಿ ಕಾನ್ವೆಂಟ್ ಶಾಲೆಗೆ ತೆರಳಿ ಅಲ್ಲಿನ ಶಿಸ್ತು ನಿಯಮಗಳಿಂದ ತರಗತಿಯಲ್ಲಿ ಕುಳಿತು ಗಂಭೀರ ವಾತಾವರಣದಲ್ಲಿ ಪಾಠ ಕಲಿತು ಅದೇ ಬಸ್ಸಿನಲ್ಲಿ ಹಿಂತಿರುಗಿ ಮನೆಯಲ್ಲಿ ತನಗಾಗಿ ಮೀಸಲಿರುವ ಕೋಣೆಯಲ್ಲಿ ಕಂಪ್ಯೂಟರ್ ಮುಂದೆ ಕುಳಿತರೆ ಅದು ಬೌದ್ಧಿಕ ಶಿಕ್ಷಣವೇ ? ಅದು ವಿಕಸನದ ದಾರಿಯೇ ? ಶ್ರೀಮಂತರ ಕಥೆ ಹೀಗಾದರೆ ನಿರ್ಗತಿಕ ತೀರ ಕೆಳವರ್ಗದ ಶಾಲಾ ವಂಚಿತ ಮಕ್ಕಳು ಬೀದಿ ಪಾಲಾಗಿ ಮುಷ್ಟಿ ಅನ್ನಕ್ಕಾಗಿ ಬಾಲಕಾರ್ಮಿಕರಾಗಿ ದುಡಿಯಬೇಕಾದ ಕಟುವಾಸ್ತವ ಇನ್ನೊಂದೆಡೆ. ನಮ್ಮ ದೇಶದಲ್ಲಿ ಇಂಥ ಮಕ್ಕಳನ್ನು ಯಾರು ಹೇಗೆ ಬೇಕಾದರೂ ಬಳಸಿಕೊಳ್ಳಬಹುದಾದ ಅವಕಾಶವೊಂದು ತನ್ನಿಂದ ತಾನೇ ಸೃಷ್ಟಿಯಾಗಿ ಸಮಾಜಘಾತುಕರಿಗೆ ಇನ್ನಷ್ಟು ಲಾಭ ಮಾಡಿಕೊಳ್ಳಲು ಸಾಧ್ಯವಾಗಿದೆ. ಆಸರೆ ಇಲ್ಲದ ಮಕ್ಕಳು ನಿರಂತರ ದೌರ್ಜನ್ಯಕ್ಕೆ ಒಳಗಾಗಿ ಮುಂದೆ ಮಾರ್ಗದರ್ಶನದ ಕೊರತೆಯಿಂದ ಹೇಗೆ ಸಮಾಜಕಂಟಕರಾಗಿ ರೂಪುಗೊಳ್ಳುತ್ತಾರೆಂದು ಯಾರೂ ಚಿಂತಿಸುವುದಿಲ್ಲ. ಇಲ್ಲಿ ಓದಿ ನೋಡಿ ನಮ್ಮ ಮುಂದಿನ ಭಾವೀ ಪ್ರಜೆಗಳ ಗೋಳು ತುಂಬಿದ ಬದುಕನ್ನು !*



## ನಿಮ್ಮ ಉಚ್ಚಾರಣೆ, ಧ್ವನಿಯನ್ನು ಸುಧಾರಿಸಿಕೊಳ್ಳಿ

*ಎಂ. ಅಬ್ದುಲ್ ರೆಹಮಾನ್ ಪಾಷ*

**ಪುಟ : ೧೧೬** | **ಬೆಲೆ : ರೂ. ೫೦**

**ನವಕರ್ನಾಟಕ ಪ್ರಕಾಶನ**, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

*ಜಗತ್ತಿನ ಯಾವ ಭಾಷೆಯೇ ಆಗಿರಲಿ ಅದಕ್ಕೆ ಸತ್ವ–ಕಸುವು ಇರಬೇಕಾದರೆ ಅದನ್ನಾಡುವ ಜನರು ಸಮರ್ಪಕವಾಗಿ ಅದನ್ನು ಬಳಸುತ್ತಿರಬೇಕು. ಬಳಸುವುದೆಂದರೆ ಬೇಕಾಬಿಟ್ಟಿಯಾಗಿ ಒದರುವುದಲ್ಲ; ಸ್ಪಷ್ಟ ಉಚ್ಚಾರಣೆ, ಧ್ವನಿಯ ಮೂಲಕವೇ ನವರಸಗಳನ್ನೂ ಅರ್ಥವತ್ತಾಗಿ ತಿಳಿಸುವ ಜಾಣ್ಮೆ, ಆಯಾ ಭಾಷೆಯಲ್ಲಿನ ವ್ಯಾಕರಣ–ಸಂಧಿ–ಸಮಾಸಗಳ ತಿಳುವಳಿಕೆ, ಭಾಷೆಯ ಬಗ್ಗೆ ಪ್ರೀತಿ ಮತ್ತು ಆಸಕ್ತಿ ಇವೆಲ್ಲವೂ ಒಟ್ಟಾಗಿ ಒಂದು ಭಾಷೆಯನ್ನು ಶ್ರೀಮಂತಗೊಳಿಸಿ ಅದರ ಉಳಿವಿಗೆ ನೆರವಾಗಬಲ್ಲವು. ಇತ್ತೀಚೆಗಂತೂ ಭಾಷಾ ಬಳಕೆಯ ಬಗ್ಗೆ ತೀವ್ರ ಅಸಡ್ಡೆ ಎದ್ದು ಕಾಣುತ್ತಿದೆ. ಅನೇಕ ಮಾಧ್ಯಮಗಳಲ್ಲಿ – ಜನರಾಡುವ ಮಾತುಗಳಲ್ಲಿ ಭಾಷಾಪ್ರೇಮ ಹಾಗಿರಲಿ, ತಾನು ಹೇಳಿದ್ದು ಇತರರಿಗೆ ಅರ್ಥವಾಗಬೇಕೆಂಬ ಕನಿಷ್ಠ ಜವಾಬ್ದಾರಿ ಸಹ ಇರುವುದಿಲ್ಲ ! ಮಾತನಾಡುವಾಗ ಸ್ಪಷ್ಟ ಉಚ್ಚಾರ, ಸಂದರ್ಭೋಚಿತವಾದ ಧ್ವನಿಯ ಏರಿಳಿತ, ಭಾವನೆಗಳ ಸುಂದರ ಅಭಿವ್ಯಕ್ತಿ ಇವೆಲ್ಲವನ್ನು ರೂಢಿಸಿಕೊಂಡಾಗ ಜನರೊಂದಿಗೆ ವ್ಯವಹರಿಸಲು ರಾಜಮಾರ್ಗ ತೆರೆದಂತೆ. ಆತ ಯಶಸ್ಸಿನೆಡೆಗೆ ಹೆಜ್ಜೆ ಹಾಕಬಲ್ಲ; ಎಲ್ಲರ ಸ್ನೇಹ ಸಂಪಾದಿಸಿ ತನ್ನ ವಿಚಾರಗಳನ್ನು ಇತರರಿಗೆ ಪರಿಣಾಮಕಾರಿಯಾಗಿ ತಿಳಿಸುವ ಸಂವಹನಕಾರ ಆಗಬಲ್ಲ. ತಪ್ಪು ಉಚ್ಚಾರಣೆ – ತೊದಲು ಮಾತಿನಿಂದ ಆಗುವ ಅನಾಹುತಗಳು ಅಪಾರ. ಈ ಬಗ್ಗೆ ಅನೇಕ ಉಪಯುಕ್ತ ವಿಚಾರಗಳನ್ನು ಈ ಕೃತಿಯಲ್ಲಿ ತಿಳಿಸಿಕೊಡಲಾಗಿದೆ. ಆಕಾಶವಾಣಿಯಲ್ಲಿ ತಮ್ಮ ಉದ್ಯೋಗದಲ್ಲಿನ ಮಾತಿನ ಮಹತ್ವವನ್ನು ಕಂಡುಕೊಂಡು ತಮ್ಮ ಅನುಭವಗಳಿಂದ ಕೃತಿರಚನೆ ಮಾಡಿದ್ದಾರೆ – ಶ್ರೀ ಅಬ್ದುಲ್ ರೆಹಮಾನ್ ಪಾಷ.*

– **ಇಂದಿರಾ ಕುಮಾರಿ**, *ಯಶವಂತಪುರ, ಬೆಂಗಳೂರು – ೨೨*

## ಹಿಂದಿನ ಬೆಂಚಿನ ಹುಡುಗಿಯರು

ಎನ್. ಶೈಲಜಾ ಹಾಸನ

**ಪುಟ : ೧೦೪** | **ಬೆಲೆ : ರೂ. ೬೦**

**ಶ್ರೀ ಸಿದ್ಧಲಿಂಗೇಶ್ವರ ಪ್ರಕಾಶನ**, ಗುಲಬರ್ಗಾ

*ಈ ಕಥಾಗುಚ್ಛದಲ್ಲಿ ಒಟ್ಟು ೧೦ ಕಥೆಗಳಿವೆ. ಒಂದೊಂದು ಕಥೆ ಒಂದೊಂದು ಬದುಕಿನ ವ್ಯಥೆ ಹೇಳುತ್ತದೆ. ಮಧ್ಯಮ ವರ್ಗದ ಕುಟುಂಬ ಬದುಕಿನ ಸಣ್ಣ–ಪುಟ್ಟ ಒಳಿತು–ಕೆಡಕುಗಳತ್ತ ಮುಖಮಾಡಿ ಕಥಾಹಂದರ ಬೆಳೆದು, ಅದರೊಳಗೆ ಬದುಕು ಪ್ರೀತಿಸುವ ಅದಮ್ಯವಾದ ಜೀವಪರ ಕಾಳಜಿಯ ಸಹಜ ಸೆಳೆತವಿದೆ. ಕಥೆ ಕಲಾತ್ಮಕತೆಯಲ್ಲಿ ವಾಸ್ತವ ಲೋಕದ ಬವಣೆಯ ಬೇರುಗಳಿವೆ. ಹದವಾದ ಸರಳ ಸುಲಲಿತ ಭಾಷೆ ಕಥಾ ನಿರೂಪಣೆಯ ದಾರಿ ಉದ್ದಕ್ಕೂ ಸಾಗಿ ಓದುಗರನ್ನು ಸದ್ದಿಲ್ಲದೆ ಓದಿಸಿಕೊಂಡು ಹೋಗುತ್ತದೆ. ಈ ಕೃತಿಯಲ್ಲಿನ ಕಥೆಗಳು ಒಂದೊಂದೂ ಅನನ್ಯ. ಹಿಂದಿನ ಬೆಂಚಿನ ಹುಡುಗಿಯರು, ಎಲ್ಡುಕೊಡ ನೀರು, ಆಳ ಕಥೆಗಳು, ಸಾಮಾಜಿಕ ವಿದ್ಯಮಾನಗಳತ್ತ ಗಮನ ಸೆಳೆದಿವೆ. ಇನ್ನುಳಿದ ಕಥೆಗಳು ಬಾಳಿಗೆ ಪ್ರೇರಕವಾಗಿ ಮೌಲ್ಯಗಳಾದ ಪ್ರೀತಿ–ಪ್ರೇಮ, ಮಮತೆ, ತ್ಯಾಗ, ಆಸರೆ, ಪ್ರಾಮಾಣಿಕತೆ ಬಂಧನದ ಬವಣೆಗಳತ್ತ ತಿರುಗುತ್ತವೆ. 'ಸಾಬು' ಕಥೆ ಸೈಕಲ್ ತುಳಿಯುತ್ತಾ ಊರಿಂದೂರಿಗೆ ಅಲೆದು ಪಾತ್ರೆಗಳ ವ್ಯಾಪಾರ ಮಾಡುವ ಸಾಬು ಕೇವಲ ವರ್ತಕನಾಗಿರದೆ, ಆ ಗ್ರಾಮದಲ್ಲಿನ ಜನರ ನೋವುಗಳಿಗೂ ಸ್ಪಂದಿಸುವ ಸ್ಪಂದನಾ ಜೀವಿ. ಗೌರಕ್ಕನ ಮಗ ವಾಸು ಚಿಕ್ಕವನಿದ್ದಾಗ ಹಾವು ಕಡಿದು ಸತ್ತೇ ಹೋಗುವನೆಂಬ ಆತಂಕದಲ್ಲಿದ್ದಾಗ, ಸಾಬು ನಾಟಿ ವೈದ್ಯನನ್ನು ಕರೆತಂದು ಚಿಕಿತ್ಸೆ ಕೊಡಿಸಿ ಜೀವ ಉಳಿಸಿದ. ಅಂದಿನಿಂದ ಗೌರಕ್ಕ ಮತ್ತು ಅವಳ ಸೊಸೆ ಪದ್ಮಾ ಇವನನ್ನು ತುಂಬಾ ಗೌರವಾದರಗಳಿಂದ ನೋಡುತ್ತಿದ್ದರು. 'ಹಿಂದಿನ ಬೆಂಚಿನ ಹುಡುಗಿಯರು' ಕಥೆ ಶಾಲೆಯಲ್ಲಿ ಪಾಠಮಾಡುವ ಮೇಷ್ಟ್ರು ತರಗತಿಯೊಳಗಿನ ಮುಗ್ಧ ಹದಿಹರೆಯದ ಬಾಲಕಿಯರೊಡನೆ ನಡೆಸುವ ಸರಸ, ಇವರು ಆತನ ಬಗ್ಗೆ ಇರಿಸಿಕೊಂಡ ಹೊಂಗನಸು, ಗೌರವ, ರಮ್ಯತೆಯ ಸೋಗಲಾಡಿತನವನ್ನು ಬಯಲಿಗೆಳೆಯುತ್ತದೆ. 'ಎಲ್ಡುಕೊಡ ನೀರು' ಜಾತಿ ಸಂಘರ್ಷದ ಕಥೆ. ಕೆಳಜಾತಿ ಜನರ ಮೇಲೆ ಮೇಲ್ಜಾತಿ ಜನ ನಡೆಸುವ ಅನ್ಯಾಯ, ಶೋಷಣೆ, ಅಪಮಾನ ಕಥೆಗೆ ಹೂರಣವಾಗಿದೆ. ಭಾರತೀಯ ಗ್ರಾಮೀಣ ಬದುಕಿನ ಸಾಮಾಜಿಕ ವ್ಯವಸ್ಥೆ ಕಥೆಯೊಳಗಡೆ ಉಸಿರಾಡುತ್ತದೆ. 'ತುಮುಲ' ಲಿಂಗಜ್ಜನ ಬದುಕಿನ ಗೊಂದಲಗಳತ್ತ ಸುತ್ತಿಕೊಂಡ ಕಥೆ. ಬದುಕು ಕಟ್ಟಿಕೊಳ್ಳಲು ಅವನು ಶ್ರಮಿಸುವ ಪರಿ, ನೋವಿನ ಮೇಲೆ ನೋವು ತಿನ್ನುತ್ತಾ ಸಾಗುವ ಅವನ ದುರಂತ ಓದುಗರನ್ನು ಸಹಜವಾಗಿ ಸೆಳೆಯುತ್ತದೆ.*

– ***ದಯಾನಂದ ಪಿ. ಕಾಂಬಳೆ**, ಚಿಂಚೋಳಿ – ೫೮೫ ೩೦೭*




# ನಮ್ ಸ್ಕೂಲೂ ಮತ್ತು ನಮ್ ಮೇಷ್ಟ್ರುಗಳೂ!

ಸಂತೆಬೆನ್ನೂರು ಫೈಜ್ನಟ್ರಾಜ್

**ಪ**ರ್‌ಗಿರೀಕ್ಷೆ ಮಾಡ್ತಾನೌನು
ಭಕ್ತನ್ ಮೇಲೌನ್ ಕಣ್ಣು

– ಎಂಬ ರತ್ನನ್ ಪದ ಕನ್ನಡ ಹೊಗಳಕ್ ಹೇಳಿದ್ರೂ ಅದು ನಂ ಮೇಷ್ಟ್ರಿಗೇ ಹೇಳ್ದಂಗಾಗಿ ನಮ್ಮನ್ನ ಕ್ಷಣ–ಕ್ಷಣವೂ ಹೆಂಗ್ ಹೆಂಗಾರೆ ಪರೀಕ್ಷೆ ಮಾಡಿ ಇಡೀ ಮಾನವ ಜನ್ಮ; ಜನ್ಮ–ಜನ್ಮಾಂತರಕ್ಕೂ ಬ್ಯಾಡ, ಅದ್ರಾಗೂ ನಂ ಕಾಲದ ಅಂದಿನ ಮೇಷ್ಟ್ರ ಕೈಯಾಗೆ ಸಿಕ್ಕಿಹಾಕಿಕೊಳ್ಳೋ ಹುಡುಗರ ಪಾಡು ನಾಯಿಪಾಡು ಅನ್ನಂಗಾಗಿತ್ತು!

ನಾವ್ ಓದ್ವಾಗ ಮೇಷ್ಟ್ರಿಗಿಂತ ಜವಾನನಿಗೇ ಭಾಳ ಹೆದರ್ತಿದ್ವಿ! ಆತ ಜವಾನ ಅಲ್ಲ ದಿವಾನ; ದಿವಾನ್ಗಿರಿಗಿಂತ ಕಮ್ಮಿ, ಮೇಷ್ಟ್ರಿಗಿಂತ ಜಾಸ್ತಿ ಅನ್ನಂಗಿರೋನು! ಚೆಂಬಸಣ್ಣ ಅಂತ ಆತ ಯಮಸ್ವರೂಪಿ ಆಸಾಮಿ. ನಮ್ ಮೂರು–ನಾಲ್ಕನೇ ಕ್ಲಾಸಿನ ಜೀವನದಲ್ಲಿ ಅರ್ಧ ಸಿನಿಮಾ ಆದ ಮೇಲೆ ಬರೋ ಕೇಡಿಯಂತೆ ಬಂದ್‌ಬಿಟ್ಟ! ಈ 'ಕೇಡಿ'. ಪದ ಹೇಗೆ ಹುಟ್ಟೋ ನಂಗೊತ್ತಿಲ್ಲ ಈಗಿನ ವಿಲನ್ ಅಂದಿನ ಕೇಡಿ; ಬಹುಶಃ ಕಳ್ಳರ ಡಿಪಾರ್ಟ್‌ಮೆಂಟ್‌ಗೆ ಶಾರ್ಟಾಗಿ ಕೇಡಿ ಅಂತಿದ್ರೇನೋ! ಈ ಚೆಂಬಸಣ್ಣ ಎಂಬ ಚೆನ್ನಬಸಪ್ಪ ಬಿಳಿ ಜುಬ್ಬದಂಥಾ ಅಂಗಿ, ಪಟ್ಟೆಪಟ್ಟೆ ನಿಕ್ಕರ್ ಕಾಣಂಗೆ ಬಿಳೀ ಲುಂಗಿ ಹಾಕ್ಕಂಡ್ ಎಲ್ ಹೋದ್ರೂ, ಬಂದ್ರೂ ನೋಡಿದ್ರೆ ಅರ್ಧ ಜೀವ ಹೋಗೇ ಬಿಡ್ತಿತ್ತು! ಶಾಲೆಗೆ ಬರದಿರೋ ಹುಡುಗರ್‍ನ ಅವರ ಮನೇಗೇ ಹೋಗಿ ಅಕ್ಷರಶಃ ಹೆಗಲಿಗೆ ಹಾಕ್ಕಂಡ್ ಹೋಗ್‌ಬಿಡಾನು ಮಾರಾಯ. ಹೊತ್ಕೊಂಡ್ ಹೋಗ್ಲಿ, ಶಾಲೆ ಮುಟ್ಟಿದ್ ಮೇಲೆ ನಿಧಾನ ಇಳಿಸಬೇಕಲ್ಲ; ಊಹ್ಞುಂ, ರಾಗಿ ಮೂಟೆ ಬಿಸಾಡಿದಂತೆ ಧೊಪ್ ಅಂತ ಬಿಸಾಕನು! ಅಲ್ಲಿಗೂ ಭಂಡ್ಬಿದ್ದು ಕೆಲ ಹುಡುಗ್ರು ತಪ್ಪಿಸ್ಕಳಾಕೆ ಹೋದ್ರೆ ಕೈ–ಕಾಲ್ ತಿರುವಿ ಬೆನ್ಮೇಲ್ ಹತ್ತಿ ಕೂತು ಬಿಡಾನು! ಇಂಥಾ ಉಗ್ರ ಸ್ವರೂಪಿ ಚೆಂಬಸಣ್ಣನಿಂದ ಶಾಲೆ ಮುಖ ಕಂಡವರು ನಾವು!

ಇನ್ ಶಾಲೆ ಅಂದ್ರೆ ಬಿಡಿ, ಮಲ್ಲಿಕಾರ್ಜುನ ಮನಸೂರರು ಓದಿದ್ರಂತಲ್ಲಾ ಗಾಂವಟಿ ಶಾಲೆ ಅಂಥಾದು! ಗಾಳಿ, ಬೆಳಕು ಅಷ್ಟೆ ಏನು? ಜ್ಞಾನಾನೂ ಒಳಗೆ ಬರದಿರೊ ಹಳೇ ಗೋಡಾನೇ ಅಂದಿನ ನಮ್ ಶಾಲೆಗಳು! ಹಜಾರದಂಥಾ ದೊಡ್ಡ ಹಾಲ್‌ಗಳಲ್ಲಿ ಉದ್ದಕ್ಕೆ, ಅಡ್ಡಕ್ಕೆ ಸೀಮೆಸುಣ್ಣದಿಂದ ಗೆರೆ ಎಳೆದು ನಾಕು ಭಾಗ ಮಾಡಿ ೧,೨,೩,೪ನೇ ತರಗತಿ ಅಂತ ಕೂರಿಸಿಬಿಡೋರು. ೧,೨ ನೆಲದ ಮೇಲೆ ೩,೪ ಮರದ ಮಣೆ ಮೇಲೆ! ಅದೂ ಏಕ ವಿಶಾಲ ಕೋಣೆಯಲ್ಲಿ. ನಾಕು ದಿಕ್ಕಿಗೂ ಒಬ್ಬರೇ ಮೇಷ್ಟ್ರು! ಆದರೆ ಅದು ಏಕೋಪಾಧ್ಯಾಯ ಶಾಲೆ ಅಲ್ಲ. ಬೇರೆ–ಬೇರೆ ಮೇಷ್ಟ್ರು ಇದ್ರೂ ಶಾಲೆಗೆ ಬರೋ ಟೈಮಿಂಗ್ಸ್ ಮಾತ್ರ ಅವರೆ ಅಡ್ಜೆಸ್ಟ್ ಮಾಡ್ಕಂಡ್ ಬರೋರು! ಬೆಳಿಗ್ಗೆಯಿಂದ ಒಬ್ರು, ಮಧ್ಯಾನ್ನಕ್ಕೊಬ್ರು ಬಂದು ಹುಡುಗರನ್ನ ಕಾಯೋರು! ವರ್ಣಮಾಲೆ, ಕಾಗುಣಿತ, ಮಗ್ಗಿ ಈ ಮೂರೇ ಇಡೀ ವರ್ಷ ನಾಕೂ ತರಗತಿಗಳಿಗೆ!

ನಮ್ ಶಾಲೆಯ ಹಿತ್ತಲಿಗೆ ಭಾರೀ ಕಣಗಳು; ಈಗಿನ ಕೆಲ ಮಕ್ಳು ಕಣ ಅಂದ್ರೆ ವಿಜ್ಞಾನದ ಕಣ ಅಂದ್ಕಂತವೆ! ರಾಗಿ, ಜೋಳ, ಮೆಕ್ಕೆಜೋಳ ಮುಂತಾದ ದವಸಧಾನ್ಯಗಳನ್ನ ಹೊಲದಿಂದ ತಂದು ಕಣದಲ್ಲಿ ಒಟ್ಟಿ, ತುಳಿಸಿ, ತೂರಿ, ರಾಶಿ ಮಾಡಿ ಧಾನ್ಯದ ರಾಶಿ ಪೂಜೆ ಮಾಡಿ ಬಂದೋರಿಗೆ ಮರಗಳಲ್ಲಿ (ನೆರಳಿನ ಮರ ಅಲ್ಲ, ಧಾನ್ಯ ಚಪ್ಪರಿಸೋ ಮೊರ!) ದಾನ ನೀಡಿ ನಂತರ ಚೀಲ ತುಂಬೋರು! ಈಗ? ಬೆಳೆದಿದ್ದನ್ನೆಲ್ಲಾ ತಂದು ಡಾಂಬರ್ ರೋಡಿಗೆ, ಹೈವೇಗೆ, ಜಿ/ಮು/ರಸ್ತೆಗೆ ಸುರಿದು, ಬರೋ ಲಾರಿ, ಬಸ್ಸು, ಟ್ಯಾಕ್ಸಿಗಳನ್ನ ಕಾದು ಅವು ಹಾದು ಹೋದ್ಮೇಲೆ ಕಸ ಕಡ್ಡೀನೆಲ್ಲಾ ದುಂಡಗೆ ಮಾಡಿ ಚೀಲ ತುಂಬ್ಕಂಡ್ ಹೋಗೋ ಕಾಲವಿದು! ಕಣಗಳೆಲ್ಲವೂ ಈಗೀಗ ಸೈಟು–ಕಾಂಪ್ಲೆಕ್ಸ್‌ಗಳಾಗಿ ಬದಲಾಗಿವೆ–ಬದಲಾಗ್ತಿವೆ. ನಮ್ಮ ರೈತ ಕೂಡ ಜಾಗತೀಕರಣದ ಬಲಿಪಶುವಾಗಿಯೋ, ಆಧುನಿಕತೆಯ ಸೋಗಿನಲ್ಲೋ ಕಳೆದು ಹೋಗುತ್ತಿರುವುದು ಮಾತ್ರ ದುರಂತ!

ಇಂಥಾ ಕಣದಲ್ಲಿರೋ ತೊಗರಿ ಬಣವೆಗಳಿಂದ ಬಲವಾದ ಕೋಲಂಥಾ ತೊಗರಿ ಕಡ್ಡಿ ಮಾನಿಟರ್ ಆದವನು ಅಂದ್ರೆ ಈಗಿನ ಕ್ಲಾಸ್ ಲೀಡರ್ ತಂದು ಮೇಷ್ಟ್ರ ಕೈಲಿ ಕೊಟ್ರೆ ಅಂದ್ರೆ ಎಂಥಾ ದಡ್ಡನಿಗೂ ಮಗ್ಗಿ, ಕಾಗುಣಿತ ಕರತಲಾಮಲಕವಾಗಿಬಿಡೋದು!

ರಾಜಕೀಯ ಇಲ್ಲದ, ಹೆಚ್ಚು ಸಂಬಳ ಇಲ್ಲದ, ಯಾವುದೇ ಗುಂಪುಗಾರಿಕೆ ಇಲ್ಲದ ನಂ ಮೇಷ್ಟ್ರು ಹಳೇ ಸಿನಿಮಾದ ಅಮಿತಾಭ್ ಬಚ್ಚನ್ ಹಾಕ್ಕಳ್ಳೋ ದೊಗಳೆಯಂಥಾ ಬೆಲ್ಬಾಟಮ್ ಪ್ಯಾಂಟ್, ಮೊಲದ ಕಿವಿಯ ಕಾಲರಿನ ಶರ್ಟ್ ಧರಿಸಿ ಬಂದ್ರೆ ನೋಡೋಕೊಂದ್ ಅಂದ! ಶೇಕ್ರಪ್ಪ ಮೇಷ್ಟ್ರು ಅಂತ ಇದ್ರು. ಸದಾ ಬೂದಿ ಬಣ್ಣದ ಸಫಾರಿ ಹಾಕ್ಕಂಡ್ ಬಿಳಿ ಕನ್ನಡಕ ಮೂಗಿನ್ ಮೇಲೆ ಏರಿಸಿ ಬಂದ್ರೆ ಥೇಟ್ ಸಾಹೇಬರಂತೆ ಕಾಣ್ತಿದ್ರು! ಕಲಿಸೋ ರೀತಿಯೂ ಸರಳಾತಿಸರಳ..."

ಇವನೆ ನೋಡು ಅನ್ನದಾತ
ಹೊಲದಿ ದುಡಿದೆ ದುಡಿವನು,
ನಾಡ ಜನರು ಬದುಕಲೆಂದು
ದವಸ ಧಾನ್ಯ ಬೆಳೆವನು

– ಎಂಬ ರೈತ ಗೀತೆ ರಾಗವಾಗಿ ಹಾಡ್ತಾ ಇದ್ರೆ ಅರ್ಥ ಗೊತ್ತಿರದ ನಾವು ದೊ...ಡ್ ಬಾಯ್ ಮಾಡ್ಕಂಡ್ ಏರಿಳಿತ ಇಲ್ದಂಗೆ ಒದರ್‍ತಾ ಇದ್ವಿ!

ಅಲ್ಲಿಂದ ಅದ್ಹೆಂಗೋ ಏನೋ ಜಂಪಾಗಿ ಹಿರಿಯ ಪ್ರಾಥಮಿಕ ಶಾಲೆಗೆ ಬಂದಿದ್ದು ಪವಾಡ! ಪ್ರೈಮರಿ ಪರೀಕ್ಷೆ ಮುಗಿದ ವಾರಕ್ಕೋ, ತಿಂಗಳಿಗೋ ಒಂದು ಒಳ್ಳೇ ದಿನ ನಿಗದಿ ಮಾಡಿ ಪಾಸು–ಫೇಲು ಇದೆ ಅನ್ನೋರು. ನಾವು ಬಿಸ್ಲಾಗೆ ನಾಯಿ ಥರಾ ಅಲ್ಲಿ–ಇಲ್ಲಿ ಸುತ್ತಿ, ಚಾನಲ್‌ನಾಗೆ ಧುಮುಕಿ ಈಜಾಡ್ಕಂಡ್ ಅಜ್ಜಂಗೋ, ಅಜ್ಜೀಗೋ

ಪಾಸು ಫೇಲಿನ ದಿನ ನೆಪ್ ಮಾಡಿ ಅಂತ ಆಲ್ಡರ್ ಮಾಡಿರ್ತಿದ್ವಿ! ಆ ದಿನ ಬಂದ್ರೂ ಶಾಲೆ ಕಡೆ ಹೋಗಾಕೇ ಭಯ ಆಗೋದು; ಪಾಸು ಫೇಲಿಗಲ್ಲ, ಮತ್ತೆ ಶಾಲೆ ಶುರು ಮಾಡ್ಯಾರಂತ! ಅದೂ ಅಲ್ದೆ ನಂ ಮೇಷ್ಟ್ರುಗಳ ಮೇಷ್ಟ್ರು ಚಂಬಸಣ್ಣ ಎಲ್ಲಿ ಅದಕ್ಕೂ ಹೆಗಲ್ ಕೊಟ್ಟುಬಿಡ್ತಾನೋ ಅನ್ನೋ ದಿಗಿಲು! ಅಂಡ್ ಕೆರ್ಕಂತಾ ಹರಕು ನಿಕ್ಕರ್‌ನಾಗೆ ಶಾಲೆ ಕಟ್ಟೆ ಹತ್ತಿ ಒಳಕ್ ಹೋದ್ರೆ ಹಂಗೇ ಘಂ ಅನ್ನೋ ವಾಸ್ನೆ ಬರ್ತಿರಾದು!

ಶಾರದ ಮಾತೆ ಫೋಟೋ ಇಟ್ಟು ಪೂಜೆ ಮಾಡಿ ಅದರ ಮುಂದೆ ಮೊದ್ಲಿಗೇ ಹೋಗಿರೋ ಹುಡುಗರನ್ನ ಕೂರ್‍ಸಿ ಮಂಡಕ್ಕಿ–ಬೆಲ್ಲ, ಬಾಳೆಹಣ್ಣು, ಕೊಬ್ರಿ ಮಿಶ್ರಣದ 'ಚೆರಪು' ಸಿದ್ಧ ಮಾಡ್ಕಂಡ್ ಯಾವತ್ತೂ ಇಲ್ಲದ ಎಲ್ಲಾ ಮೇಷ್ಟ್ರುಗಳೆಲ್ಲಾ ಸೇರ್ಕಂಡು ಕೂತಿರೋರು. ಕಿತ್ತೋದ ಹಳೇ ಫೈಲ್‌ನಂಥಾ ಹಾಜರಿ ಬುಕ್ ಹಿಡ್ಕಂಡು ಶ್...ಶ್ ಸದ್ದು, ಮುಚ್ರಲೆ ಬಾಯಿ ಅಂತಾ ಕೂಗ್ತಾನೇ ಪಾಸು–ಫೇಲು ಹೇಳ್ತೀವಿ ಕೇಳಿ ಅಂದ್ಕೂಡ್ಲೆ ವೋಟ್ರು ಗಪ್‌ಚುಪ್! ನಮಗೆ ಪಾಸು–ಫೇಲ್ಗಿಂತ ಆ ಚೆರಪಿನ ಮೇಲೆ ಕಣ್ಣಿತ್ತು!

ಕೆಂಚ, ಚನ್ನಬಸವ, ಬಸ್ರಾಜ, ಸರೋಜ, ಹುಸೇನಿ ಅಂತ ಅನ್ನೋರು ನಮಗೆ ಆಶ್ಚರ್ಯ. ಆ ಹೆಸರಿನವರು ಅಮಾಸಿಗೆ ಹುಣ್ಣಿಮೆಗೆ ಕೂಡಾ ಶಾಲೆ ನೋಡಿದವರಲ್ಲ ಇವರನ್ಯಾಕೆ ಕೂಗ್ತಿದ್ದಾರೆಂದು ಅಂದ್ಕಳ್ಳೋ ಹೊತ್ಗೆ ಒಂದ್ ೮–೧೦ ಹೆಸರು ಹೇಳಿ ಇವರೆಲ್ಲಾ... ಇವರೆಲ್ಲಾ ಅಂತ ಹಂಗೆ ನಿಲ್ಸರು. ನಮಗೆ ಕೊನೆ ಓವರ್‌ನ ಕೊನೇ ಬಾಲ್ ಸಿಕ್ಸರ್ರೇ ಆಗಬೇಕೆನ್ನುವಷ್ಟು ಟೆನ್ಷನ್ನು! ಮೇಷ್ಟ್ರುಗಳು ಎಲ್ಲಾ ಮಕ್ಕಳ ಮುಖ ನೋಡಿ, ನಮ್ ಗಾಬರಿ ಎಂಜಾಯ್ ಮಾಡಿದ ಮರುಗಳಿಗೆ ಇಷ್ಟು ಜನ ಬಿಟ್ಟು ಉಳಿದೋರೆಲ್ಲಾ... ಪಾಸು ಕಣ್ರಲೇ ಅನ್ನೋದೇ ತಡ ಕರಿಹೆಂಚಿನ ಸೂರ್ ಹಂಗೇ ಹಾರಿ ಹೋಗಂಗೆ ಹುಯ್ss... ಅಂತ ಕೇಕೆ ಹೊಡೀತಿದ್ವಿ! ಅದೇ ನಮ್ಮ ಚಂಬಸಣ್ಣ ಸಿಲವರ್ ಬೇಸನ್ನಾಗೆ ಆ ಚೆರಪು ಹಾಕ್ಕಂಡ್ ಒಂದೊಂದೇ ಹಿಡಿ ಹಾಕಿ ಹಾಕಿ ಹೊರಾಗ್ ಬಿಡಾನು, ಆ ಕ್ಷಣ ಇಡೀ ವರ್ಷ ಆತ ನಮಗೆ ಕೊಟ್ಟ ಕಾಟ ಮರ್ತೇ ಹೋಗಾದು! ಇದು ನಂ ಪ್ರೈಮರಿ ರಿಸಲ್ಟ್!

ಆ ಪ್ರೈಮರಿಯಿಂದ ನಮ್ಮೂರಾಗೆ ಮಿಡ್ಲಿಸ್ಕೂಲ್ ಅಂದ್ರೆ ಮಿಡಲ್ ಸ್ಕೂಲ್‌ಗೆ ಇಡ್ಲಿ ಎಂಬಂತೆ ನಾವೆಲ್ಲಾ ಮಿಡ್ಲಿಸ್ಕೂಲ್, ಮಿಡ್ಲಿಸ್ಕೂಲ್ ಅಂತಿದ್ವಿ! ಅದ್ರಾಗೂ ಸಾಬ್ರ ಗೆಳೆಯರು ನಾವೆಲ್ಲಾ 'ಸ'ಕಾರದ ಪದಗಳಿಗೆಲ್ಲಾ 'ಇ'ಕಾರ ಸೇರ್‍ಸಿ ಇಸ್ಕೂಲ್, ಇಸ್ಟೈಲ್, ಇಸ್ಕ್ರೂಡ್ರೈವರ್ ಅಂತಿದ್ವಿ! ನಮ್ಮ ಗೆಳೆಯ ಮಾಲೀಕ್ ಅಂತ ಇದ್ದ. ಅವನ ಬಾಯಲ್ಲಂತೂ ಸೈಕಲ್‌ಗೆ 'ಸೈಂಕಲ್' ಅಂತಾನೇ ಬರಾದು. ಇಂಥಾ 'ಮುಸ್ಲೀಮಗನ್ನಡಾ'ನ ನಮ್ಮಲ್ಲಿ ಡಿಗ್ರಿ ಮುಗಿಸ್ಕಂಡಿದ್ರೂ ಹಂಗೇ, ಅದೇ ಬಳಸ್ತಾರೆ.

ಇನ್ನ ಈ ಮಿಡ್ಲಿಸ್ಕೂಲ್‌ಗೆ ಬಂದ ಹೊಸಾದು. ಹಿಂದಿನ ಕರಿಹೆಂಚಿನ ಗೂಡಿಂದ ಕೆಂಪ್ಹೆಂಚು : ಅದೆ ಮಂಗ್ಳೂರ್ ಹೆಂಚು ಹೊದ್ಕಂಡಿರೋ ವಿಶಾಲವಾದ ಶಾಲೆಗೆ ಬಂದ್ವಿ. ಮೊನ್ನೆಮೊನ್ನೆ ಈ ಕೆಂಪು ಹೆಂಚು ತಯಾರಿಸೋ ಕಾರ್ಖಾನೆ ಮುಚ್ಚಿದ್ರು ಅಂತ ಪೇಪರ್ ಸುದ್ದಿ ಓದಿ ಬಲು ಬೇಜಾರಾಯ್ತು! ಆರ್.ಸಿ.ಸಿ. ಅಂತೆ, ಬಿಲ್ಡಿಂಗ್ ಅಂತೆ–ಅಂಥ ಶಾಲೆ ಕಾಲೇಜು ಕಟ್ಟಡ ಏಳೋ ಈಗಿನ ದಿನಗಳಲ್ಲಿ ನಂ ಕಾಲದ ಹೆಂಚಿನ ಶಾಲೆಗಳು ತುಂಬಾ ನೆನಪಾಗ್ತವೆ, ಕಾಡ್ತವೆ!

ನಂ ಮಿಡ್ಲಿಸ್ಕೂಲ್‌ನಲ್ಲಿ ಈಶ್ವರಪ್ಪ ಮೇಷ್ಟ್ರು, ಮುರ್ಗಿ ಮೇಷ್ಟ್ರು, ಕೆಂಡಯ್ಯ ಮೇಷ್ಟ್ರು, ಶಂಕರಮೂರ್ತಿ ಮೇಷ್ಟ್ರು, ಅಂತ ಚತುರ್ಮುಖ ಬ್ರಹ್ಮರು ಇದ್ರು; ಒಬ್ಬೊಬ್ಬರು ಒಂದೊಂದು ರೀತೀಲಿ ಬ್ರಹ್ಮರೆ! ಈಶ್ವರಪ್ಪ ಮೇಷ್ಟ್ರು ಈಗಲೂ ಇದ್ದಾರೆ; ಕಪ್ಪಗೆ, ದಪ್ಪಗೆ, ಗುಂಡು ತಲೆ ನೋಡಿದ್ರೇನೆ ಆಗ ಎದೆ ಡೊಳ್ಳಾಗದು! (ಈಗಲೂ ಆ ಭಯ–ಭಕ್ತಿ ಇದೆ ಬಿಡಿ) ವಿಜ್ಞಾನ ಅದ್ಭುತವಾಗಿ ಕಲಿಸೋರು. ಅಕ್ಷರಶಃ ಹುಡುಗರನ್ನ ಬೋರ್ಡೆ ದುರಿಗೆ ನಿಲ್ಸಿ ಅವರ ಕಣ್ಣಲ್ಲಿ ಬೆರಳಿಟ್ಟು ಕಣ್ಣು ಮುಟ್ತಾ ಮುಟ್ತಾ ಮೂಗು, ಬಾಯಿ, ಗಂಟಲು, ಅನ್ನನಾಳ, ಜಠರ... ಅಂತ ಒನ್ ಬೈ ಒನ್ ಅಂಗ ಮುಟ್ಟಿ ಪ್ರಾಯೋಗಿಕವಾಗಿ ತೋರಿಸ್ತಾ ಕಲಿಸೋರು! ಅವರ ಮುಖ ಕಪ್ಪು, ಮನಸ್ಸು ಮಾತ್ರ ಹಾಲೋ ಹಾಲು (ಆಲ್ಕೋಹಾಲಲ್ಲ!) ಶಾಲೆಗೆ ಒಂದ್ ದಿನ ತಪ್ಪಿಸಿ ಕೊಂಡ್ರೂ ಬೆಂಕಿಯಾಗೋರು; ತಪ್ಪಿಸಿಕೊಳ್ಳಲು ಅನಾರೋಗ್ಯದ ನೆಪ ಹೇಳಿದ್ರೆ 'ಕೈಕಾಲು ಕಡಿದರೂ ಉಲ್ಡಾಡಕಂಡ್ ಬಂದು 'ಎಸ್ ಸಾರ್' ಅಂತ ಹಾಜರಿ ಹೇಳ್ಬೇಕು' ಎನ್ನುತ್ತಾ ಕತ್ತು ಹಿಡಿದು ಬಗ್ಗಿಸಿ ಕುಂಡೆ ಗೋಡೆಗೆ ಅಪ್ಪಚ್ಚಿಯಾಗುವಂತೆ ಗುದ್ದೋರು!

ಮುರ್ಗಿ ಮೇಷ್ಟ್ರು ಅಂದ್ನಲ್ಲಾ, ಅವರು ಮುರ್ಗಿ ಫಯಾಜ್ ಬ್ರದರ್ ಅಲ್ಲ ನಮ್ ಕನ್ನಡ ಮೇಷ್ಟ್ರು ಮುರಿಗೇಂದ್ರಯ್ಯ ಅಂತ ಅವರ ಹೆಸ್ರು. ಸಾಬ್ರ ಹುಡುಗರ ಬಾಯಾಗೆ ಮುರ್ಗಿ ಮೇಷ್ಟ್ರು ಆಗಿತ್ತು. ಅವರ ಕಂಠ ಥೇಟ್ ನಮ್ ಕಾಳಿಂಗರಾಯರ ಕಂಠ. ಏಳನೇ ತರಗತೀಲಿ 'ಮಿಂಚುಹುಳ' ಅಂತ ಪದ್ಯ ಇತ್ತು; ಬರೆದ ಕವಿ ನೆನಪಿಲ್ಲ ಆದ್ರೆ ಅವರ ರಾಗ, ಲಯ, ಹಾಡು ನೆನಪಿದೆ.

*ಎಲೆಲೆ ಬೆಳಕಿನ ಬಿತ್ತೆ*
*ಇರುಳ ಮೂಗಿ ನತ್ತೆ*
*ಹುಳುವೆಂದು ಹೆಸರಿಟ್ಟು*
*ಹಳಿಯುವರು ನಿನ್ನ*

– ಎಂದು ರಾಗಬದ್ಧವಾಗಿ ಹಾಡ್ತಿದ್ರೆ ಅವರನ್ನೇ ಬಿಟ್‌ಕಣ್ ಬಿಟ್ಕಂಡ್ ನೋಡ್ತಾ ಇದ್ವಿ! ರಾಮಾಯಣ, ಮಹಾಭಾರತದ ಎಂತೆಂಥವೋ ಪರೀಕ್ಷೆ ಕಟ್ಟೋರು. ೫–೬ನೇ ತರಗತಿ ವಾರ್ಷಿಕ ಪರೀಕ್ಷೆಗೆ ಮುರ್ಗಿ ಮೇಷ್ಟ್ರು ಬಿದ್ರಂತೂ (ಎಡವಿ ಅಲ್ಲ, ಕೊಠಡಿ ಮೇಲ್ವಿಚಾರಕರಾಗಿ) ನಮಗೆ ಹಬ್ಬ! ಸುವ್ವರ್, ಸುವ್ವರ್ ಸುಮ್ನೆ ಬರೀರಿ... ಬರೀರಿ... ನನಗೆ ಕಾಣಬಾರದು ಸುಮ್ನೆ ಬರೀರಿ ಅಂತ ಹೌದೋ ಅಲ್ವೋ ಅನ್ನಂಗೆ ಕಾಪಿಗೆ ಸಹಕರಿಸೋರು! (ಪಾಪ, ಉದ್ಧಾರ ಆಗ್ಲಿ ಮುಂಡೇವು ಅಂತನೋ, ಏನೋ?)

ಕೆಂಡಯ್ಯ ಮೇಷ್ಟ್ರು ಅಂದ್ರೆ ಹೆಸರಷ್ಟೆ ಕೆಂಡ; ನಡೆ–ನುಡಿ ಥೇಟ್ ತಣ್ಣೀರು! ಮೃದು ಮಾತು, ಸದಾ ಹಸನ್ಮುಖಿ! ಸಮಾಜ ಕಲಿಸೋರು, ಮನೆ ಮನೆ ಕಥೆ ಹೇಳಿದಂತೆ ಹೇಳೋರು. ಇಂಥಾ ಸೌಮ್ಯ ಸ್ವಭಾವದ ಇವರಿಗೆ ನಮ್ಮ ಗೆಳೆಯ ಲಾಲ್‌ಖಾನ್ ಅನ್ನೋನು ಒಮ್ಮೆ ಕೋಪ ತರಿಸಿಬಿಟ್ಟ; ಈಗಿನಂತೆ ಆಗ ಬಿಸಿಯೂಟ ಇರಲಿಲ್ಲ. ಮನೆಗೆ ಹೋದ್ರೆ ಅನ್ನ ಇರಲಿ, ಬೆಳಗಿನ ಮುದ್ದೆ ಕೂಡಾ ಸಿಗ್ತಿರಲಿಲ್ಲ! ಮಧ್ಯಾಹ್ನ ನಮ್ಮದೇನಿದ್ದರೂ ಸಾಲು ಮರದ ನೇರಳೆ, ಹುಣಸೇಹಣ್ಣು ಮಾನಿಟರ್ ಕೊಡಿಸಿದ ಸುಂಟಿ ಪೆಪ್ಪರ್‌ಮೆಂಟ್ ಅಷ್ಟೆ, ಹೊಟ್ಟೆಗೆ! ಶಾಲೆ ಸುತ್ತಾ ಬಿಲ್ಲು ಬಾಣ ಮಾಡ್ಕಂಡು ಸೆಪ್ಪೆ ದಂಟಿನ ಕಡ್ಡಿಯ ಬಾಣಕ್ಕೆ ಉಂಡೆ ಮಾಡಿದ ಡಾಂಬರ್ ಚುಚ್ಚಿ ಅದಕ್ಕೆ ಜಾಲಿ ಮುಳ್ಳು ಸಿಕ್ಕಿಸಿ ಆಡ್ತಾ ಇದ್ವಿ! ಈ ಲಾಲ್‌ಖಾನ್ ಪಕ್ಕವೇ ಇದ್ದ ದನದಾಸ್ಪತ್ರೆ ಫೀಲ್ಡಲ್ಲಿ ಸ್ಟಾಕ್ ಮಾಡಿದ್ದ ಡಾಂಬರ್ ಡ್ರಂನಿಂದ ಡಾಂಬರ್ ತಂದು ತರಗತಿ ಕುರ್ಚಿಗೆ ಅಂಟಿಸಿಬಿಟ್ಟ. ಮಧ್ಯಾಹ್ನ ಯಾವಾಗಲೂ ಆಗ ಫಸ್ಟ್ ಪೀರಿಯಡ್ ಸಮಾಜ ಇರಾದು. ಕೆಂಡಯ್ಯ ಮೇಷ್ಟ್ರು ಬಂದ್ರು, ಕುಂತ್ರು, ಹಾಜರಿ ಹಾಕಿದ್ರು. ಎದ್ದೇಳ್ತಾರೇ... ಊಹ್ಞುಃ ಇಡೀ ಕುರ್ಚಿಗೆ ಕುರ್ಚಿನೇ ಜೊತೆ ಬರ್ತಿದೆ! ನಮ್ ಸಹಾಯದಿಂದ ಬಿಡಿಸಿ ಯಾರು ಹಾಕಿದ್ದಂತ ವಿಚಾರಣೆ ನಡೀತು. ಬಾಯಿ ಬಿಡಲು ಯಾರೂ ತಯಾರಿರಲಿಲ್ಲ; ಕಬ್ಬಡಿಯಲ್ಲಿ ಯಾವಾಗಲೂ ಲಾಲ್‌ಖಾನ್ ಕೈಯಲ್ಲಿ ಸೋಲೋ ಕೊಬ್ರಿ ಪಟೇಲ ಅನ್ನೋನು ಹೇಳೇಬಿಟ್ಟ! ಅವತ್ತೇ ಮೊದಲು ಮತ್ತು ಕೊನೆ; ಕೆಂಡಯ್ಯ ಮೇಷ್ಟ್ರು ಕೆಂಪಾಗಿದ್ದು ನಾವು ನೋಡಿದ್ದು! ಲಾಲ್‌ಖಾನ್ ಗತಿ ಹೇಳದಿದ್ದರೆ ವಾಸಿ.

ನಮ್ಮ ಶಂಕರಮೂರ್ತಿ ಮೇಷ್ಟ್ರು ವಾಮನ ರೂಪ. ಸಣ್ಣದನಿಯ ಎಲ್ಲಾ ಮಕ್ಕಳ ಪ್ರೀತಿಯ ಮೇಷ್ಟ್ರು. ಹಿಂದಿ–ಇಂಗ್ಲಿಷ್ ಎರಡನ್ನೂ ಕನ್ನಡದಂತೆ ಕಲಿಸೋರು (ನಾವು ಮಾತ್ರ ಒಂದೂ ಕಲಿತಾ ಇರಲಿಲ್ಲ) ನಮ್ಮ ಶಾಲೆಗಳು ಹೇಗಿದ್ವೋ ನಾವು ಹಾಗೇ ಇದ್ವಿ; ಹಳೆಯವು ಶಾಶ್ವತವಾದವು. ಈಗ ನಮ್ಮ ಕಿರಿಯ ಪ್ರಾಥಮಿಕ ಶಾಲೆಯ ಜಾಗದಲ್ಲಿ ದೊಡ್ ಕಾಂಪ್ಲೆಕ್ಸ್ ಎದ್ದಿದೆ. ಆ ಮಿಡ್ಲಿಸ್ಕೂಲ್ ಹಾಗೇ ಇದೆ. ನಮ್ಮ ಕಾಲದ ನಮ್ಮ ಹೆಮ್ಮೆಯ ಮೇಷ್ಟ್ರುಗಳು ಇಂದಿಗೂ ಬದಲಾಗಿಲ್ಲ. ಅದೇ ಶಿಷ್ಯ ವಾತ್ಸಲ್ಯ, ಜೀವನ ಪ್ರೀತಿ ಅದೇ ಆದರ್ಶ ಗಳನ್ನು ಇಟ್ಟುಕೊಂಡು ಬೆರಳೆಣಿಕೆಯ ಪಿಂಚಣಿಯಲ್ಲಿ ಆರಾಮಾಗಿ ವೃದ್ಧಾಪ್ಯ ಕಳೀತಿದಾರೆ! ಯು.ಜಿ.ಸಿ. ಸ್ಕೇಲ್ ಮೇಷ್ಟ್ರು, ಕೈತುಂಬಾ ಬೇಸಿಕ್ ತಗಳ್ಳೋ ಮೇಷ್ಟ್ರು, ಸೂಟುಬೂಟಿನ ಮೇಷ್ಟ್ರು, ಮೋಟಾರು ಕಾರಿನ ಭವ್ಯ ಬಂಗಲೆಯ ನಮ್ಮ ಮಕ್ಕಳ ಮೇಷ್ಟ್ರು, ಮನೆ ಪಾಠದಲ್ಲಿಯೇ ಕೋಟಿ ಕಂಡಿರೋ ಮೇಷ್ಟ್ರುಗಳ ನಡುವೆ ವಾರಾನ್ನದಲ್ಲಿ ಓದಿ, ಬಸ್ಸಿಲ್ಲದ ಊರಲ್ಲಿ ಸೈಕಲ್ಲೇ ಸರ್ವಸ್ವ ಎಂದುಕೊಂಡು ಅಕ್ಷರ ಕಲಿಸೋ ಕಾಯಕದ 'ನಮ್ಮ ಮೇಷ್ಟ್ರು' ಇಂದಿಗೂ ಕಾಣ್ತಾರೆ!

ಮಾತೃ ಹೃದಯದ, ತಂದೆ ಪ್ರೀತಿಯ, ದೈವ ಸ್ವರೂಪಿ ಅಕ್ಷರ ಬ್ರಹ್ಮರು ಎಂದಿಗೂ ಮನದ ಹೊಲದಿ ಹಸಿರಾಗಿ, ತೆನೆಯಾಗಿ ತೂಗ್ತಾರೆ. ಆ ದಿನಗಳು, ಆ ಶಾಲೆ, ಆ ಮೇಷ್ಟ್ರುಗಳು ಜನಮಾನಸದಿ ಚಿರಂತನ! ಎಂದಿಗೂ ಮರೆಯದ ನಮ್ಮ ಮೇಷ್ಟ್ರುಗಳಿಗೆ ಇದೋ ನನ್ನ ದಿಲ್ ಕಾ ಸಲಾಮ್!!

**ಸಂತೆಬೆನ್ನೂರು ಫೈಜ್ನಟ್ರಾಜ್**
ಬ್ರಾಹ್ಮಣರ ಕೇರಿ, ಸಂತೆಬೆನ್ನೂರು – ೫೭೭ ೫೫೨
ಚೆನ್ನಗಿರಿ ತಾಲ್ಲೂಕು, ದಾವಣಗೆರೆ ಜಿಲ್ಲೆ



# ದೇವರು ಇದ್ದಾನೆಯೇ?

– ಬರ್ಟ್ರ್ಯಾಂಡ್ ರಸೆಲ್
ಭಾವಾನುವಾದ : ಎಂ. ಅಬ್ದುಲ್ ರೆಹಮಾನ್ ಪಾಷ

ದೇವರು ಇದ್ದಾನೆಯೇ? ಎಂಬ ಪ್ರಶ್ನೆಯನ್ನು ಅನಾದಿಕಾಲದಿಂದಲೂ ಕೇಳುತ್ತಾ ಬಂದಿದ್ದೇವೆ; ಇದಕ್ಕೆ ಬೇರೆ ಬೇರೆ ವ್ಯಕ್ತಿಗಳು, ಸಮುದಾಯಗಳು ಬೇರೆ ಬೇರೆ ರೀತಿಯಲ್ಲಿ ಉತ್ತರಿಸುತ್ತಾ ಬಂದಿವೆ. ಆದರೂ ಚರ್ಚೆ ಮುಂದುವರಿದಿದೆ. ಸಾಮಾನ್ಯವಾಗಿ ಜನ ತಮ್ಮ ಸಮುದಾಯದಲ್ಲಿ ಯಾವ ಉತ್ತರ ಪ್ರಚಲಿತವಿದೆಯೋ ಅದನ್ನು ನಂಬುತ್ತಾರೆ; ಸುರಕ್ಷಿತ ಅಲ್ಲವೇ? ಅತ್ಯಂತ ಹಿಂದಿನ ಕಾಲದಿಂದಲೂ ಸಮುದಾಯಗಳು ಏಕಕಾಲಕ್ಕೆ ಒಂದಲ್ಲ, ಅನೇಕ ದೇವರುಗಳಲ್ಲಿ ನಂಬಿಕೆಯನ್ನು ಇಟ್ಟುಕೊಂಡಿದ್ದವು. ಹಾಗೆ, ಒಬ್ಬನೇ ದೇವರಲ್ಲಿ ನಂಬಿಕೆ ಇಟ್ಟುಕೊಂಡವರಲ್ಲಿ ಮೊದಲಿಗರು ಎಂದರೆ ಯಹೂದಿಗಳು. ದೇವರು ಪ್ರವಾದಿ ಮೋಸೆಸ್‌ಗೆ ನೀಡಿದನೆನ್ನಲಾದ ಹತ್ತು ದೈವಾಜ್ಞೆಗಳಲ್ಲಿ (ಟೆನ್ ಕಮ್ಯಾಂಡ್‌ಮೆಂಟ್ಸ್), “ನಿಮ್ಮ ದೇವರು ನಾನೇ, ನಾನೇ ನಿಮ್ಮ ಒಡೆಯ; ನನ್ನ ಹೊರತು ಅನ್ಯ ದೇವರಿಲ್ಲ” ಎಂಬುದು ಪ್ರಪ್ರಥಮ ದೈವಾಜ್ಞೆಯಾಗಿತ್ತು. ಆರಂಭದಲ್ಲಿ ಇದನ್ನು ಪಾಲಿಸುವುದು ಯಹೂದಿಗಳಿಗೆ ಕಷ್ಟವಾಗುತ್ತಿತ್ತು. ಏಕೆಂದರೆ, ಆವರೆಗಿನ ಅವರ ನಂಬಿಕೆಯ ಪ್ರಕಾರ ಅಷ್ಟರೊತ್, ಡೆಗಾನ್, ಮೊಲೊಷ್ ಮತ್ತಿತರರು ನಿಜವಾದ ದೇವರುಗಳಾಗಿದ್ದರು. ಆದರೆ ಅವರು ಯಹೂದಿಗಳ ಶತ್ರುಗಳಿಗೆ ನೆರವಾಗಿದ್ದರಿಂದ ಅವರನ್ನು ಕೆಟ್ಟ ದೇವರು ಎಂದು ಭಾವಿಸಲಾಗುತ್ತಿತ್ತು. ಕೆಟ್ಟವರಾದರೇನಂತೆ, ಇದ್ದದ್ದು ನಿಜವೇ ತಾನೆ! ಅವರನ್ನೆಲ್ಲ ಮರೆತು, ಒಬ್ಬನೇ ದೇವರು ಎಂದು ನಂಬುವುದು ಕಷ್ಟದ ಕೆಲಸವೇ ಸರಿ. ಒಬ್ಬನೇ ದೇವರು ಎಂಬ ಏಕದೈವವಾದವನ್ನು ನಂತರ ಕ್ರೈಸ್ತಧರ್ಮ, ಅನಂತರ ಇಸ್ಲಾಂ ಧರ್ಮವೂ ಸ್ವೀಕರಿಸಿದುವು.

ಕ್ರೈಸ್ತ ಮತ್ತು ಇಸ್ಲಾಂ ಧರ್ಮಗಳು ಭಾರತದ ಪಶ್ಚಿಮದಲ್ಲಿ ಹರಡಿದಷ್ಟು ಶೀಘ್ರವಾಗಿ ಮತ್ತು ವ್ಯಾಪಕವಾಗಿ ಭಾರತ ಮತ್ತು ಅದರ ಪೂರ್ವಕ್ಕೆ ಹರಡಲಿಲ್ಲ. ಈ ಭಾಗದಲ್ಲಿ ಪ್ರಚಲಿತವಿದ್ದ ಹಿಂದೂಧರ್ಮದಲ್ಲಿ ಅನೇಕ ದೇವರುಗಳಿದ್ದರು. ಮೂಲ ಬೌದ್ಧಧರ್ಮದಲ್ಲಿ ದೇವರೇ ಇಲ್ಲ. ಇಷ್ಟಾದರೂ ಕ್ರೈಸ್ತ ಮತ್ತು ಇಸ್ಲಾಂ ಧರ್ಮಗಳು ಜಗತ್ತಿನಲ್ಲಿ ಹೆಚ್ಚು ಜನಪ್ರಿಯ. ಧರ್ಮದ ಯಥಾರ್ಥತೆಯನ್ನು ಅದು ಲೌಕಿಕವಾಗಿ ಸಾಧಿಸಿರುವ ಯಶಸ್ಸಿನ ಅಳತೆಗೋಲಿನಿಂದ ಅಳೆಯುವುದಾದರೆ, ಏಕದೈವವಾದವೇ ಹೆಚ್ಚು ಜನಪ್ರಿಯವಾಗಿದೆ ಎನ್ನಬಹುದು; ಏಕೆಂದರೆ ಅದು ಜಗತ್ತಿನಲ್ಲಿ ಅತಿದೊಡ್ಡ ಸೈನ್ಯವನ್ನು ಹೊಂದಿದೆ; ಬೃಹತ್ ನೌಕಾದಳವನ್ನು ಇಟ್ಟುಕೊಂಡಿದೆ; ಅತಿದೊಡ್ಡ ಸಂಪತ್ತಿನ ಸಂಗ್ರಹ ಅದರೊಂದಿಗಿದೆ.

**ತತ್ವಶಾಸ್ತ್ರ ಏನನ್ನುತ್ತದೆ?**

ಧರ್ಮವನ್ನು ಈ ರೀತಿಯಲ್ಲಿ ರಾಜಕೀಯ ಮತ್ತು ಭೌಗೋಳಿಕ ನೆಲೆಯಲ್ಲಿ ಪರಿಗಣಿಸುವುದನ್ನು ಕೈಬಿಡೋಣ. ವಿಚಾರವಂತರು ಈ ವಿಧಾನವನ್ನು ಪ್ರಾಚೀನ ಗ್ರೀಕರ ಕಾಲದಿಂದಲೇ ನಿರಾಕರಿಸಿದ್ದಾರೆ. ಆಗಿನ ಕಾಲದಿಂದಲೇ, ತಮ್ಮ ನೆರೆಹೊರೆಯವರ ಧಾರ್ಮಿಕ ಅಭಿಪ್ರಾಯಗಳನ್ನು ಹಾಗೆ ಹಾಗೆಯೇ ಒಪ್ಪಿಕೊಳ್ಳದೆ, ಆ ಕುರಿತು ತರ್ಕ ಮತ್ತು ತತ್ವಶಾಸ್ತ್ರ ಏನನ್ನು ಹೇಳುತ್ತದೆ ಎಂಬುದನ್ನು ಪರ್ಯಾಲೋಚಿಸುವ ಪ್ರಾಮಾಣಿಕ ಪ್ರಯತ್ನವನ್ನು ಮಾಡಿದವರೂ ಇದ್ದಾರೆ. ತತ್ವಶಾಸ್ತ್ರವು ಹುಟ್ಟಿದ (ಟರ್ಕಿಯ) ಅಯೋನಿಯಾದ ವಾಣಿಜ್ಯ ನಗರಗಳಲ್ಲಿ ಕ್ರಿ. ಪೂ. ಆರನೇ ಶತಮಾನದಲ್ಲಿ ಸ್ವತಂತ್ರ ವಿಚಾರಿಗಳಿದ್ದರು. ಆಧುನಿಕ ಸ್ವತಂತ್ರ ವಿಚಾರಿಗಳಿಗೆ ಹೋಲಿಸಿದರೆ ಅವರ ಕಾರ್ಯವು ಸುಲಭವಾಗಿತ್ತು, ಏಕೆಂದರೆ ಕಾವ್ಯಾತ್ಮಕ ಖಯಾಲಿಗೆ ಎಷ್ಟೇ ಮನಮೋಹಕವಾಗಿ ಕಂಡರೂ ಒಲಿಂಪಿಯನ್ ದೇವರುಗಳನ್ನು ತಾರ್ಕಿಕ ತತ್ವಮೀಮಾಂಸೆಯನ್ನು ಬಳಸಿ ಸಮರ್ಥಿಸಿಕೊಳ್ಳಲು ಸಾಧ್ಯವಾಗುವುದಿಲ್ಲ.

ಗ್ರೀಕ್ ಜಗತ್ತು ಕ್ರೈಸ್ತಧರ್ಮಕ್ಕೆ ಪರಿವರ್ತನೆಗೊಂಡಾಗ ಹೊಸ ಕ್ರೈಸ್ತಧರ್ಮ ಸಿದ್ಧಾಂತಗಳನ್ನು ಪ್ಲೇಟೋನ ತತ್ವಮೀಮಾಂಸೆಯೊಂದಿಗೆ ವಿಲೀನಗೊಳಿಸಿದರು ಮತ್ತು ಮತಧರ್ಮಶಾಸ್ತ್ರವನ್ನು (ಥಿಯೊಲಜಿ) ಹುಟ್ಟುಹಾಕಿದರು. ಸಂತ ಅಗಸ್ಟಿನ್‌ನ ಕಾಲದಿಂದ ಇಂದಿನವರೆಗಿನ ಕ್ಯಾಥೊಲಿಕ್ ಮತಧರ್ಮಶಾಸ್ತ್ರಜ್ಞರು ಒಬ್ಬ ದೇವರ ಅಸ್ತಿತ್ವವನ್ನು ದಿವ್ಯಜ್ಞಾನ ಪ್ರಕಾಶದ ನೆರವಿಲ್ಲದ ತರ್ಕದಿಂದ ಸಾಬೀತುಪಡಿಸಬಹುದು ಎಂದು ನಂಬಿದರು. ಅವರ ವಾದಗಳಿಗೆ ಹದಿಮೂರನೇ ಶತಮಾನದಲ್ಲಿ ಸಂತ ಥಾಮಸ್ ಅಕ್ವಿನಾಸ್ ಒಂದು ಪರಿಪೂರ್ಣ ರೂಪವನ್ನು ಕೊಟ್ಟ. ಹದಿನೇಳನೇ ಶತಮಾನದಲ್ಲಿ ಆಧುನಿಕ ತತ್ವಶಾಸ್ತ್ರವು ಆರಂಭಗೊಂಡಾಗ, ಡೇಕಾರ್ಟ್ ಮತ್ತು

ದೇವರನ್ನು ಟೀಕಿಸುವುದೇ ಅಧರ್ಮ, ಅನಾಚಾರ, ಅವಿಧೇಯತೆ ಎಂದು ಭಾವಿಸಲಾಗುವ ಸಮಾಜದಲ್ಲಿ ದೇವರ ಇಡೀ ಪರಿಕಲ್ಪನೆಯೇ ದುಷ್ಟ ಸಾರ್ವಭೌಮತ್ವದ ದ್ಯೋತಕವಾಗಿದೆ. ಸರ್ವಾಧಿಕಾರಿಯು ಮನಬಂದಂತೆ ಕ್ರೌರ್ಯವನ್ನು ತೋರಿದ ನಂತರವೂ ತನ್ನ ದಾಸರ ಹೊಗಳುಭಟ್ಟಂಗಿತನದಿಂದ ಆನಂದಪಡುವುದು ಪ್ರಾಚೀನ ನಿರಂಕುಶತೆಯಲ್ಲಿ ಮಾತ್ರ ಸಾಧ್ಯ. ಇಂಥ ಮಾನಸಿಕತೆಯು ಸ್ವತಂತ್ರ ಚಿಂತನೆಯಿಲ್ಲದ, ದೇವತಾಶಾಸ್ತ್ರದ ಅಂಧಕಾರದಲ್ಲಿ ಉಳಿದುಕೊಂಡು ಬಂದಿರುವ ಜಡ್ಡುಗಟ್ಟಿದ ರಾಜಕೀಯ ಪ್ರಜ್ಞೆ ಮತ್ತು ವ್ಯವಸ್ಥೆಯಲ್ಲಿ ಮಾತ್ರ ಸಾಧ್ಯ.

ಲೈಬ್ನಿಜ್ ಹಳೆಯ ವಾದಸರಣಿಗಳನ್ನು ಪರಿಷ್ಕೃತ ರೂಪದಲ್ಲಿ ಮತ್ತೊಮ್ಮೆ ಎತ್ತಿಕೊಂಡರು. ಇವರಿಬ್ಬರ ಪರಿಶ್ರಮದಿಂದಾಗಿ ಧರ್ಮಶ್ರದ್ಧೆ ಎಂಬುದು ಬೌದ್ಧಿಕವಾಗಿ ಗೌರವಾರ್ಹವಾದ ವಿಚಾರವಾಗಿ ಉಳಿಯಿತು. ಆದರೆ (ಕ್ಲಾಸಿಕಲ್ ಲಿಬರಲಿಸಂನ ಪ್ರವರ್ತಕನಾದ ಇಂಗ್ಲಿಷ್ ತತ್ವಜ್ಞಾನಿ) ಜಾನ್ ಲಾಕ್, ಸ್ವತಃ ಶ್ರದ್ಧಾವಂತ ಕ್ರೈಸ್ತನಾಗಿದ್ದರೂ ಹಳೆಯ ವಾದಸರಣಿಯ ಸೈದ್ಧಾಂತಿಕ ನೆಲೆಗಟ್ಟುಗಳನ್ನು ಕಡೆಗಣಿಸಿದನು. ಮುಖ್ಯವಾಗಿ ಫ್ರಾನ್ಸ್‌ನಲ್ಲಿ, ಆತನ ಅನೇಕ ಅನುಯಾಯಿಗಳು ನಾಸ್ತಿಕರಾದರು.

**ಧರ್ಮದಿಂದ ಪ್ರಯೋಜನವಿದೆಯೆ ?**

ನನ್ನ ಪ್ರಕಾರ, ಧರ್ಮವು ಭಯದ ಮೂಲದಿಂದ ಹುಟ್ಟಿಕೊಂಡ ಒಂದು ರೋಗ ಮತ್ತು ಮಾನವ ಕುಲಕ್ಕೆ ಅಪರಿಮಿತವಾದ ದುಃಖ, ದುರ್ಗತಿಗಳನ್ನು ತಂದ ಭಯಾನಕ ಪ್ರವೃತ್ತಿ. ಧರ್ಮವು ಮೂಲಭೂತವಾಗಿ ಒಂದು ಸಾಮಾಜಿಕ ವಿದ್ಯಮಾನ. ಚರ್ಚುಗಳ (ಧಾರ್ಮಿಕ ಸಂಸ್ಥೆಗಳ) ಉಗಮಕ್ಕೆ ಕಾರಣರಾದ ಧರ್ಮಪ್ರವರ್ತಕರು ಮುಂದೆ ತಾವು ಸ್ಥಾಪಿಸಿದ ಧಾರ್ಮಿಕ ಸಂಸ್ಥೆಗಳ ಮೇಲೆ ತಮ್ಮ ಪ್ರಭಾವವನ್ನು ಉಳಿಸಿಕೊಂಡಿದ್ದು ಅಪರೂಪ. ಆದರೆ ಅವರು ಸ್ಥಾಪಿಸಿದ ಧಾರ್ಮಿಕ ವ್ಯವಸ್ಥೆಗಳು ಮಾತ್ರ ತಾವು ನೆಲೆನಿಂತ ಸಮುದಾಯಗಳ ಮೇಲೆ ಅಪರಿಮಿತ ಪ್ರಭಾವವನ್ನು ಬೀರಿವೆ.

ಪಾಶ್ಚಿಮಾತ್ಯ ನಾಗರಿಕತೆಯ ಉದಾಹರಣೆಯನ್ನೇ ತೆಗೆದುಕೊಳ್ಳಿ. ಬೈಬಲ್‌ನಲ್ಲಿ ಪ್ರತಿಪಾದಿತವಾಗಿರುವಂತೆ ಯೇಸುಕ್ರಿಸ್ತನ ಬೋಧನೆಗಳಿಗೂ ಕ್ರೈಸ್ತರ ವಾಸ್ತವ ನೈತಿಕತೆಗೂ ಸಂಬಂಧವಿರುವುದು ತುಂಬ ಕಡಿಮೆ. ಸಾಮಾಜಿಕ ಮತ್ತು ಐತಿಹಾಸಿಕ ದೃಷ್ಟಿಯಿಂದ ನೋಡುವುದಾದರೆ, ಕ್ರೈಸ್ತ ಧರ್ಮದಲ್ಲಿ ಅತ್ಯಂತ ಮುಖ್ಯವಾಗಿರುವುದು ಯೇಸುಕ್ರಿಸ್ತನಲ್ಲ, ಚರ್ಚ್. ಕ್ರೈಸ್ತಧರ್ಮವನ್ನು ಒಂದು ಸಕಾರಾತ್ಮಕ ಸಾಮಾಜಿಕ ಶಕ್ತಿಯನ್ನಾಗಿ ಭಾವಿಸುವುದಾದರೆ ನಾವು ಬೈಬಲ್ಲನ್ನು ನೋಡಬೇಕು. ಬೈಬಲ್‌ನಲ್ಲಿ ಏಸುಕ್ರಿಸ್ತ, ನಿಮ್ಮ ವಸ್ತು, ಸಂಪತ್ತುಗಳನ್ನು ಬಡವರಿಗೆ ದಾನ ಮಾಡಿ; ನಿಮ್ಮ ನಿಮ್ಮಲ್ಲಿಯೇ ಹೊಡೆದಾಡಬೇಡಿ; ಹಿಂಸಾಚಾರ



ಕೆಟ್ಟದ್ದು; ಚರ್ಚಿಗೆ ಹೋಗಬೇಡಿ; ವ್ಯಭಿಚಾರಕ್ಕೆ ನೀವು ಶಿಕ್ಷೆಯನ್ನು ನೀಡಬೇಡಿ ಎಂದು ಬೋಧಿಸುತ್ತಾನೆ. ಆದರೆ ಕ್ರೈಸ್ತ ಜಗತ್ತಿನಲ್ಲಿ ನಾವು ನೋಡುವುದೇನು? ಹಿಂದೆಯಾಗಲೀ, ಈಗಾಗಲೀ ಧರ್ಮಭೀರು ಕ್ರೈಸ್ತರೆಂದು ಹೇಳಿಕೊಳ್ಳುವ ಹೆಚ್ಚಿನ ಜನ ನಿಜ ಜೀವನದಲ್ಲಿ ಇದನ್ನು ಪಾಲಿಸುವುದೇ ಇಲ್ಲ.

ಕ್ರೈಸ್ತಧರ್ಮದ ಬಗ್ಗೆ ನಿಜವಾಗಿರುವ ಸಂಗತಿ ಬೌದ್ಧ ಧರ್ಮದ ಬಗ್ಗೆಯೂ ನಿಜವಾಗಿದೆ. ಬುದ್ಧ ಸ್ನೇಹದ ಪುತ್ಥಳಿಯಾಗಿದ್ದ, ಜ್ಞಾನದ ಬೆಳಕನ್ನು ಪಡೆದವನಾಗಿದ್ದ; ಆತ ತನ್ನ ಮರಣಶಯ್ಯೆಯಲ್ಲಿ ಮಲಗಿರುವಾಗ, ತನ್ನನ್ನು ಅಮರನೆಂದು ಭಾವಿಸಿದ್ದ ಶಿಷ್ಯಂದಿರನ್ನು ಕಂಡು ನಕ್ಕಿದ್ದ. ಆದರೆ ಬೌದ್ಧ ಪುರೋಹಿತಶಾಹಿ – ಉದಾಹರಣೆಗೆ ಟಿಬೆಟ್‌ನಲ್ಲಿ ಇರುವ ಹಾಗೆ – ಗೊಡ್ಡು ಸಂಪ್ರದಾಯವಾದಿ ಮತ್ತು ನಿರಂಕುಶವಾದಿಯಾಗಿದೆ; ಅತ್ಯಂತ ಕ್ರೂರಿಯಾಗಿದೆ.

ಚರ್ಚು (ಧಾರ್ಮಿಕ ಪಂಥ) ಮತ್ತು ಅದರ ಸಂಸ್ಥಾಪಕರ ನಡುವೆ ಈ ವ್ಯತ್ಯಾಸ ಇರುವುದು ಆಕಸ್ಮಿಕವೇನಲ್ಲ. ಏಕೆಂದರೆ ಪರಮಸತ್ಯಗಳು ಒಬ್ಬ ವ್ಯಕ್ತಿಯ ನುಡಿಗಳಲ್ಲಿ ಅಂತರ್ಗತಗೊಳ್ಳುತ್ತವೆ. ಆದರೆ ಅವು ಜನರನ್ನು ತಲುಪುವಲ್ಲಿ ಮಧ್ಯವರ್ತಿಗಳ ಕೆಲಸ ಪ್ರಧಾನವಾಗಿರುತ್ತದೆ. ಅವರ ನುಡಿಗಳ ಅರ್ಥ ವಿವರಣೆಯನ್ನು ಮಾಡುವ ಪಂಡಿತರ ಗುಂಪೊಂದು ಇರುತ್ತದೆ, ಧರ್ಮವು ನಿಜವಾಗಿಯೂ ಬೋಧಿಸಿದ ಸತ್ಯವನ್ನು ಮುಟ್ಟುವ ಮುಚ್ಚಿದ ಬಾಗಿಲಿನ ಕೀಲಿಕೈ ಈ ಪಂಡಿತರ ಬಳಿ ಇರುತ್ತದೆ. ಬದಲಾಗದೇ ಇರುವ, ಎಂದೆಂದಿಗೂ ಪರಮ ಪರಿಪೂರ್ಣ ರೂಪದಲ್ಲಿ ಅವತೀರ್ಣಗೊಂಡ, ಸತ್ಯವನ್ನು ವ್ಯಾಖ್ಯಾನಿಸಿ ಪ್ರತಿಪಾದಿಸುವುದೇ ಇವರ ಕೆಲಸವಾಗಿರುತ್ತದೆ. ಯಾವುದೇ ಪಟ್ಟಭದ್ರ ಹಿತಾಸಕ್ತಿಗಳ ತರಹ ಇವರೂ ಧರ್ಮದ ಬೋಧನೆಗಳನ್ನು ಸ್ವಹಿತಕ್ಕಾಗಿ ಅನುಕೂಲ ವಾಗುವಂತೆ ವ್ಯಾಖ್ಯಾನಿಸುತ್ತಾರೆ. ಒಂದು ರೀತಿಯಲ್ಲಿ ಇವರು ಇನ್ಯಾವುದೇ ಪ್ರತಿಷ್ಠಿತ ಜಾತಿಯವರಿಗಿಂತ ಕೆಟ್ಟವರಾಗಿರುತ್ತಾರೆ; ಹೀಗಾಗಿ ಇವರು ಅನಿವಾರ್ಯ ವಾಗಿ ಎಲ್ಲ ಬಗೆಯ ಬೌದ್ಧಿಕ ಮತ್ತು ನೈತಿಕ ಪ್ರಗತಿಗೆ ಮಾರಕವಾಗುತ್ತಾರೆ.

**ಪ್ರಥಮ ಕಾರಣ ವಾದ**

ದೇವರ ಅಸ್ತಿತ್ವದ ಕುರಿತು ಇರುವ ತಾತ್ವಿಕ ವಾದಗಳನ್ನು ಅವುಗಳ ಸಕಲ ಸೂಕ್ಷ್ಮತೆಗಳೊಂದಿಗೆ ನಾನಿಲ್ಲಿ ಮಂಡಿಸುವ ಗೋಜಿಗೆ ಹೋಗುವುದಿಲ್ಲ. ಅವುಗಳಲ್ಲಿ ಈಗಲೂ ತತ್ವಶಾಸ್ತ್ರಜ್ಞರ ಮನ್ನಣೆಯನ್ನು ಪಡೆದಿರುವ ಒಂದು, 'ಪ್ರಥಮ ಕಾರಣ ವಾದ'ವನ್ನು ಮಾತ್ರ ಚರ್ಚಿಸುತ್ತೇನೆ. ಈ ವಾದಸರಣಿಯ ಪ್ರಕಾರ, ಜಗತ್ತಿನಲ್ಲಿ ಸಂಭವಿಸುವ ಯಾವುದೇ ಘಟನೆಗೆ ಒಂದು ಕಾರಣ ಇರುತ್ತದೆ; ಆ ಕಾರಣಕ್ಕೆ ಇನ್ನೊಂದು ಅದರದೇ ಕಾರಣವಿರುತ್ತದೆ. ಹೀಗಾಗಿ, ಈ ಇಡೀ ಕಾರಣ ಸರಣಿಯ ಆರಂಭಕ್ಕೆ ಒಂದು ಪ್ರಥಮ ಕಾರಣ ಇರಲೇ ಬೇಕು ಎಂಬ ವಾದವನ್ನು 'ಪ್ರಥಮ ಕಾರಣ ವಾದ'ವು ಮುಂದಿಡುತ್ತದೆ.

ಒಬ್ಬ ಹಿಂದು ತತ್ವಜ್ಞಾನಿ, ಇಡೀ ಭೂಮಿ ಒಂದು ಆನೆಯ ಮೇಲೆ ನಿಂತಿದೆ ಎಂದು ನಂಬಿದ್ದ. ಆ ಆನೆ ಯಾವುದರ ಮೇಲೆ ನಿಂತಿದೆ ಎಂದರೆ, ಅದು ಒಂದು ಆಮೆಯ ಮೇಲೆ ನಿಂತಿದೆ ಎಂದ. ಸರಿ, ಆ ಆಮೆ ಯಾವುದರ ಮೇಲೆ ನಿಂತಿದೆ ಎಂದಾಗ, "ಇದೆಲ್ಲ ಬಹಳ ಕ್ಲಿಷ್ಟವಾದ ವಿಚಾರ; ವಿಷಯ ಬದಲಾಯಿಸೋಣವೇ ?" ಎಂದನಂತೆ. (ಖಗೋಳಶಾಸ್ತ್ರಜ್ಞ ಆರ್ಯಭಟನ ವ್ಯಾಖ್ಯಾನಕಾರ ಇದಕ್ಕೆ ಭಿನ್ನವಾಗಿ ವೈಜ್ಞಾನಿಕ ವಿವರಣೆ ನೀಡಿದ್ದ. ಭೂಮಿ ಆದಿಶೇಷನ ಹೆಡೆಯ ಮೇಲೆ ನಿಂತಿದೆ ಎನ್ನುತ್ತಾರೆ. ಆದಿಶೇಷ ಯಾರ ಮೇಲೆ ನಿಂತಿದ್ದಾನೆ? ಇದು ಅನವಸ್ಥಾ ದೋಷಕ್ಕೆ ಕೊಂಡೊಯ್ಯುತ್ತದೆ. ಭೂಮಿಯು ತನ್ನ ಕಕ್ಷೆಯಲ್ಲಿ ಆಕಾಶದಲ್ಲಿ ಸುತ್ತುತ್ತಿದೆ, ಅಷ್ಟೆ. – ಸಂ.) ಪ್ರಥಮ ಕಾರಣ ಸಿದ್ಧಾಂತದ ಅಸಮರ್ಪಕತೆಯನ್ನು ಇದು ಚೆನ್ನಾಗಿ ಬಿಂಬಿಸುತ್ತದೆ. ಆದರೂ ಅತ್ಯಾಧುನಿಕ ಭೌತವಿಜ್ಞಾನದ ಪ್ರಕಾರ, ವಿಶ್ವದ ಬೆಳವಣಿಗೆಯನ್ನು ಅವಲೋಕಿಸಿದಾಗ, ಕಾಲದ ಜಾಡನ್ನು ಹಿಡಿದು ಹಿಂದೆಹಿಂದಕ್ಕೆ ಹೋದಾಗ ಬಹಳ ದೀರ್ಘಕಾಲದ ಹಿಂದೆ ಇದೆಲ್ಲದಕ್ಕೂ ಒಂದು ಆರಂಭ ಇದ್ದಿರಬೇಕು ಎಂದು ಭಾವಿಸಲಾಗುತ್ತದೆ. ಅದನ್ನೇ ಅನುಸರಿಸಿ ಕೆಲವರು ಈ ಆರಂಭ ಆಗಿದ್ದೇ ದೈವಿಕ ಪ್ರೇರಣೆಯ ಕಾರಣದಿಂದಾಗಿ ಎನ್ನುವವರೂ ಇದ್ದಾರೆ.

ಪ್ರೊಟೆಸ್ಟಂಟ್ ದೇವತಾಶಾಸ್ತ್ರಜ್ಞರಲ್ಲಿ ಹೆಚ್ಚಿನವರು ಪರಮಾತ್ಮನ ಅಸ್ತಿತ್ವವನ್ನು ಪ್ರತಿಪಾದಿಸುವಲ್ಲಿ ಸಾಂಪ್ರದಾಯಿಕ ವಿದ್ವತ್ಪೂರ್ಣ ನೆಲೆಯನ್ನು ಬಿಟ್ಟು, ಹೆಚ್ಚು ಆಧುನಿಕ ಎನ್ನಿಸುವಂಥ ಹೊಸ ವಾದಗಳನ್ನು ಮಂಡಿಸುತ್ತಿದ್ದಾರೆ; ನನ್ನ ಪ್ರಕಾರ, ಮೂಲಭೂತವಾಗಿ ಅವು ಹಿಂದಿನವುಗಳಿಂತ ಸುಧಾರಿತವಾಗಿಯೇನೂ ಇಲ್ಲ. ಹಿಂದಿನ ಪಾಂಡಿತ್ಯಪೂರ್ಣ ವಾದಗಳು ಆಲೋಚನಾ ಶಕ್ತಿಯ ನೈಜ ಪ್ರಯತ್ನಗಳಾಗಿದ್ದವು. ಅವುಗಳ ತರ್ಕವು ನಿರ್ದುಷ್ಟವಾಗಿದ್ದಿದ್ದರೆ ಅವು ತಮ್ಮ ತೀರ್ಮಾನಗಳ ಯಥಾರ್ಥತೆಯನ್ನು ತೋರಿಸುತ್ತಿದ್ದವು. ನವ್ಯತಾವಾದಿಗಳು ಹೆಚ್ಚು ಇಷ್ಟಪಡುವಂಥ ಹೊಸ ವಾದಗಳು ಸಂದಿಗ್ಧವಾಗಿವೆ; ಮತ್ತು ಅವುಗಳನ್ನು ನಿರ್ದುಷ್ಟಗೊಳಿಸುವ ಎಲ್ಲ ಪ್ರಯತ್ನಗಳನ್ನು ನವ್ಯತಾ ವಾದಿಗಳು ತಾತ್ಸಾರದಿಂದ ತಿರಸ್ಕರಿಸುತ್ತಾರೆ. ಅವರು ಬುದ್ಧಿಯ ತರ್ಕವನ್ನು ಬಿಟ್ಟು, ಮನಸ್ಸಿನ ಭಾವನೆ ಗಳನ್ನು ತೊಡಗಿಸಿಕೊಳ್ಳುತ್ತಾರೆ. ಹೊಸ ವಾದಗಳನ್ನು ತಿರಸ್ಕರಿಸುವವರು ಅತಾರ್ಕಿಕರು ಎಂಬ ಭಾವನೆ ಅವರಲ್ಲಿಲ್ಲ; ಆದರೆ ಅವರಲ್ಲಿ ನೈತಿಕ ಪ್ರಜ್ಞೆಯ ತೀವ್ರ ಕೊರತೆಯಿದೆ ಎಂದು ಭಾವಿಸಲಾಗುತ್ತದೆ. ಆದರೂ, ಈ ಹೊಸ ವಾದಗಳನ್ನು ನಾವೂ ಪರಿಶೀಲಿಸೋಣ ಮತ್ತು ಅವುಗಳು ಏನನ್ನಾದರೂ ಸಾಬೀತುಪಡಿಸು ತ್ತವೆಯೇ ಎಂಬುದನ್ನು ನೋಡೋಣ.

**ವಿಕಾಸದ ಹಾದಿಯಲ್ಲಿ**

ನವ್ಯತಾವಾದಿಗಳ ಅಚ್ಚುಮೆಚ್ಚಿನ ವಾದಗಳಲ್ಲಿ ಒಂದು ವಿಕಾಸದ ವಿದ್ಯಮಾನವನ್ನು ಆಧಾರವಾಗಿ ಇಟ್ಟುಕೊಳ್ಳುತ್ತದೆ. ಜಗತ್ತಿನಲ್ಲಿ ಒಂದು ಕಾಲದಲ್ಲಿ ಜೀವ ಇರಲಿಲ್ಲ; ಜೀವದ ಉಗಮವಾದಾಗ ಅದು ತುಂಬ ಪ್ರಾಥಮಿಕ ಸ್ಥಿತಿಯಲ್ಲಿದ್ದ ಹಸಿರು ಲೋಳೆ ವಸ್ತುಗಳಿಂದ ಆಗಿತ್ತು. ವಿಕಾಸದ ಹಾದಿಯಲ್ಲಿ ಕ್ರಮೇಣ ಪ್ರಾಣಿಗಳು, ಸಸ್ಯಗಳು ಮೂಡಿದವು, ಕೊನೆಯಲ್ಲಿ ಮನುಷ್ಯನ

ವಿಕಾಸವೂ ಆಯಿತು. ದೇವತಾಶಾಸ್ತ್ರಜ್ಞರು ವಿಶ್ವಾಸದಿಂದ ಹೇಳುವ ಪ್ರಕಾರ, ಮಾನವ ಎಷ್ಟು ಅದ್ಭುತವಾದ ಜೀವಿ ಎಂದರೆ, ನಿಹಾರಿಕೆ ಮತ್ತು ಹಸಿರು ಲೋಳೆಗಳ ಅತಿದೀರ್ಘವಾದ ಪೀಠಿಕೆಯ ಕೊನೆಯಲ್ಲಿ, ವಿಕಾಸ ಪ್ರಕ್ರಿಯೆಯ ಪರಾಕಾಷ್ಠೆಯಲ್ಲಿ ಮಾನವ ಮೂಡಿದ್ದಾನೆ. ದೇವತಾಶಾಸ್ತ್ರಜ್ಞರು ಯಾವ ಮಾನವರನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಈ ಮಾತು ಹೇಳಿದರೋ ಗೊತ್ತಿಲ್ಲ. ಅನೇಕ ನೆಪಗಳನ್ನು ಮುಂದೊಡ್ಡಿ ಸಾವಿರಾರು, ಲಕ್ಷಾಂತರ ಸಹಜೀವಿ ಮನುಷ್ಯರ ಬರ್ಬರ ಕೊಲೆಯನ್ನು ಮಾಡಿದಂಥ ಹಿಟ್ಲರ್‌ನಂಥವರನ್ನು ಬಹುಶಃ ಅವರು ಗಮನಿಸಿಲ್ಲವೆಂದು ಕಾಣುತ್ತದೆ. ಕೋಟ್ಯಂತರ ವರ್ಷಗಳ ಪರಿಶ್ರಮದ ಫಲವಾಗಿ ವಿಕಾಸದ ಕೊನೆಯ ಹಂತದಲ್ಲಿ ಇಂಥ ಮನುಷ್ಯರನ್ನು ಸೃಷ್ಟಿಸಿದ್ದೇ ನಿಜವಾದಲ್ಲಿ, ಇದರಲ್ಲಿ ತೊಡಗಿಸಿದ 'ಸರ್ವಶಕ್ತತೆ'ಯ ನೈತಿಕ ಮತ್ತು ಕಲಾತ್ಮಕ ಪ್ರಜ್ಞೆ ಬಹಳ ವಿಚಿತ್ರವೆಂದೇ ಹೇಳಬೇಕು.

ಆದರೂ, ವಿಕಾಸದ ಮುಂದಿನ ಹಂತಗಳಲ್ಲಿ ಕ್ರೂರಿ ಹಿಟ್ಲರ್‌ನಂಥವರು ಕಡಿಮೆ ಜನ, ತಮ್ಮಂಥ ಸಂಭಾವಿತರು ಹೆಚ್ಚು ಜನ ಹುಟ್ಟುತ್ತಾರೆ ಎಂದು ದೇವತಾಶಾಸ್ತ್ರಜ್ಞರು ಭಾವಿಸುತ್ತಾರೆ; ನಾವೂ ಹಾಗೆಯೇ ಆಶಿಸೋಣ. ಆದರೆ, ಇಂಥ ಆಸೆಯನ್ನಿಟ್ಟುಕೊಳ್ಳುವಲ್ಲಿ ನಾವು ನಮ್ಮ ಅನುಭವದ ನೆಲೆಯನ್ನು ನಿರಾಕರಿಸು ತ್ತಿದ್ದೇವೆ; ಇತಿಹಾಸವು ಈವರೆಗೆ ಬೆಂಬಲಿಸದೇ ಇರುವ ಆಶಾವಾದದ ಬೆನ್ನುಹತ್ತುತ್ತಿದ್ದೇವೆ ಎಂದರ್ಥ.

ಈ ವಿಕಾಸಾತ್ಮಕ ಆಶಾವಾದಕ್ಕೆ ಇನ್ನೂ ಕೆಲವು ಆಕ್ಷೇಪಣೆಗಳಿವೆ. ನಮ್ಮ ಈ ಗ್ರಹದ ಮೇಲೆ ಜೀವವು ಯಾವಾಗಲೂ ಇರಲಿಲ್ಲ. ಮುಂದೆ ಅನಂತಕಾಲದ ವರೆಗೂ ಇರುವುದಿಲ್ಲ ಎಂದು ನಂಬಲು ಬಲವಾದ ಕಾರಣಗಳಿವೆ. ಆದ್ದರಿಂದ ಭೂಮಿಯ ಇತಿಹಾಸದ ನಡೆಯನ್ನು ಆಧರಿಸಿರುವ ಯಾವುದೇ ಆಶಾವಾದವು ತಾತ್ಕಾಲಿಕವಾದುದಾಗಿರುತ್ತದೆ. ಮತ್ತು ಅದರ ದೃಷ್ಟಿ ವ್ಯಾಪ್ತಿಯು ಮಿತಿಯಿಂದ ಕೂಡಿರುತ್ತದೆ. ಭೂಮಿಯಿಂದ ಬೇರೆ ಕಡೆಯೂ ಜೀವ ಇರಬಹುದು; ಇದ್ದರೂ ಅದರ ಬಗ್ಗೆ ನಮಗೇನೂ ಗೊತ್ತಿಲ್ಲ ಮತ್ತು ಅದು ಹಿಟ್ಲರನಿಗಿಂತ ನಮ್ಮ ದೇವತಾಶಾಸ್ತ್ರಜ್ಞರನ್ನು ಹೆಚ್ಚು ಹೋಲುತ್ತವೆ ಎಂದು ನಂಬಲು ಯಾವ ಕಾರಣವೂ ಇಲ್ಲ.

ಭೂಮಿಯು ವಿಶ್ವದ ತೃಣಮಾತ್ರದ ಒಂದು ಮೂಲೆ. ಅದು ಸೌರವ್ಯೂಹದ ಒಂದು ಚಿಕ್ಕ ತುಣುಕು. ಸೌರವ್ಯೂಹವು ಕ್ಷೀರಪಥ ಗ್ಯಾಲಕ್ಸಿಯ ಒಂದು ಕಣ. ಹಾಗೆಯೇ ಕ್ಷೀರಪಥ ಗ್ಯಾಲಕ್ಸಿಯೂ, ಆಧುನಿಕ ದೂರದರ್ಶಕಗಳು ಅನಾವರಣಗೊಳಿಸಿರುವ ವಿಶ್ವದ ಬಿಲಿಯಗಟ್ಟಲೆ ಗ್ಯಾಲಕ್ಸಿಗಳ ವೈಶಾಲ್ಯದಲ್ಲಿ ಯಾವುದೋ ಒಂದು ಕ್ಷುಲ್ಲಕ ಮೂಲೆಯಲ್ಲಿ ಇರುವ ಒಂದು ಭಾಗ. ವಿಶ್ವದ ಈ ಕ್ಷುದ್ರ, ಪುಟ್ಟ ಮೂಲೆಯಲ್ಲಿ ಎರಡು ಸುದೀರ್ಘವಾದ ಜೀವರಹಿತವಾದ ಪರ್ವಗಳ ನಡುವೆ ಮಧ್ಯಂತರವಿದೆ. ಇಂಥ ಅಲ್ಪಾವಧಿಯ ಅಂಕವಿರಾಮದಲ್ಲಿ ಮನುಷ್ಯನ ವಿಕಾಸವನ್ನು ಕಂಡಿರುವ ಅದಕ್ಕೂ ಅಲ್ಪವಾದ ಅವಧಿ ಇದೆ. ವಿಶ್ವದ ಅಂತಿಮ ಉದ್ದೇಶ ಅಥವಾ ಗುರಿ ನಿಜವಾಗಿಯೂ ಮನುಷ್ಯನೇ ಆಗಿದ್ದರೆ ಅದಕ್ಕಾಗಿ ವಿಶ್ವವು ಹಾಕಿದ ಪೀಠಿಕೆಯು ತುಂಬ ದೀರ್ಘವಾಯಿತು ಎನ್ನಬಹುದು. ಇಲ್ಲಿ, ನಿರಂತರವಾಗಿ ಇಡೀ ರಾತ್ರಿ ಮುಗಿಯಲಾರದ ಚರ್ವಿತಚರ್ವಣ ಕಥೆಯನ್ನು ಹೇಳುತ್ತಾ ಹೋಗಿ, ಬೆಳಗಿನ ಜಾವ ತುಂಬ ಕ್ಷುಲ್ಲಕವಾದ ಕ್ಲೈಮ್ಯಾಕ್ಸ್‌ನಿಂದ ಕಥೆಯನ್ನು ಮುಗಿಸುವ ಹಳೆಯ ಮುದುಕನ ನೆನಪಾಗುತ್ತದೆ.



### ಭೂಮಿಯ ಪ್ರಾಮುಖ್ಯತೆ

ಇಡೀ ವಿಶ್ವದಲ್ಲಿ ನಮ್ಮ ಭೂಗ್ರಹವು ಅದೇನೋ ಬಹಳ ಮಹತ್ವದ್ದು ಎನ್ನುವ ಭಾವನೆಯನ್ನು ಮೂಡಿಸಿ ಅದನ್ನು ಉತ್ಪ್ರೇಕ್ಷಿಸಿದ್ದು ದೇವತಾಶಾಸ್ತ್ರಜ್ಞರ ದೋಷ ಗಳಲ್ಲಿ ಒಂದಾಗಿದೆ. ಕೊಪರ್ನಿಕಸ್‌ಗಿಂತ ಮುಂಚಿನ ದಿನಗಳಲ್ಲಾಗಿದ್ದರೆ ಬಹುಶಃ ಹೀಗೆ ಭಾವಿಸುವುದು ಸಹಜ ಎನ್ನಬಹುದಾಗಿತ್ತು; ಏಕೆಂದರೆ ಆಗ ಭೂಮಿಯೇ ವಿಶ್ವದ ಕೇಂದ್ರ, ಇತರ ಎಲ್ಲ ಗ್ರಹ, ನಕ್ಷತ್ರಗಳು ಭೂಮಿಯ ಸುತ್ತ ಸುತ್ತುತ್ತವೆ ಎಂದು ನಂಬಲಾಗಿತ್ತು. ಕೊಪರ್ನಿಕಸ್‌ನ ನಂತರ, ಅದಕ್ಕೂ ಮುಖ್ಯವಾಗಿ ದೂರ ದೂರದವರೆಗಿನ ಆಕಾಶದಲ್ಲಿ ಇಣುಕಿಹಾಕುವ ದೂರದರ್ಶಕಗಳು ಬಂದನಂತರ, ನಾವು ವಿಶ್ವದ ವೈಶಾಲ್ಯವನ್ನು ಕಂಡಿದ್ದೇವೆ. ಇದರ ಹೊರತಾಗಿಯೂ ಭೂಮಿಯೇ ಸರ್ವಶ್ರೇಷ್ಠ ಗ್ರಹ ಎಂಬ ವಾದ ಕ್ಷುಲ್ಲಕವಾಗಿ ತೋರದೇ ಇರದು. ಅವರು ಹೇಳುವ ಹಾಗೆ, ಇಡೀ ವಿಶ್ವಕ್ಕೆ ಒಬ್ಬ ಸೃಷ್ಟಿಕರ್ತನಿದ್ದಾನೆ ಎಂದು ನಂಬುವುದಾದರೆ, ಅಷ್ಟೊಂದು ಅಗಾಧವಾದ ವಿಶ್ವವನ್ನು ಬಿಟ್ಟು, ಈ ತೃಣಮಾತ್ರದ ಮೂಲೆಯ ಮೇಲೆ ಆತ ವಿಶೇಷ ಆಸಕ್ತಿಯನ್ನು ತೋರಿದ್ದು ತಾರ್ಕಿಕ ಅನ್ನಿಸುವುದೇ ಇಲ್ಲ. ಅಕಸ್ಮಾತ್ ಆತನಿಗೆ ಭೂಮಿಯ ಬಗ್ಗೆ ವಿಶೇಷ ಆಸಕ್ತಿಯೇನೂ ಇಲ್ಲವೆಂದಾದರೆ, ಆತನ ಮೌಲ್ಯಗಳು ನಮ್ಮ ಮೌಲ್ಯಗಳಿಗಿಂತ ಭಿನ್ನವಾಗಿರಲು ಸಾಕು; ಏಕೆಂದರೆ ವಿಶ್ವದ ಹೆಚ್ಚಿನ ಪ್ರದೇಶಗಳಲ್ಲಿ ಜೀವದ ಉಗಮ ಅಸಾಧ್ಯ.

### ನೀತಿಪ್ರದ ವಾದ

ದೇವರಲ್ಲಿನ ನಂಬಿಕೆಯ ಕುರಿತು ಇನ್ನೊಂದು ನೀತಿಪ್ರದ ವಾದವಿದೆ. ನಮಗೆ ದೇವರಲ್ಲಿ ನಂಬಿಕೆಯೇ ಇಲ್ಲದಿದ್ದರೆ ನಾವು ನ್ಯಾಯಯುತವಾಗಿ, ನೈತಿಕವಾಗಿ ವರ್ತಿಸುವುದಿಲ್ಲ ಎಂಬುದೇ ಈ ವಾದ. ಈ ವಾದಕ್ಕೆ ಬಂದ ಮೊದಲ ಮತ್ತು ಅತ್ಯಂತ ದೊಡ್ಡ ಆಕ್ಷೇಪವೆಂದರೆ, ಇದು ದೇವರ ಪ್ರಯೋಜನವನ್ನು ಹೇಳುತ್ತದೆಯೇ ವಿನಾ ದೇವರ ಅಸ್ತಿತ್ವವನ್ನು ಸಾಬೀತುಪಡಿಸುವುದಿಲ್ಲ ಎಂಬುದು. ಜನ ಸದ್ವರ್ತನೆಯನ್ನು ಪಾಲಿಸಬೇಕು ಎಂಬ ಉದ್ದೇಶದಿಂದ ರಾಜಕಾರಣಿಗಳೋ, ಶಿಕ್ಷಣತಜ್ಞರೋ ದೇವರು ಇದ್ದಾನೆ ಎಂದು ಯೋಚಿಸುವಂತೆ ಮಾಡುವ ಪ್ರಯತ್ನವಿದ್ದಂತೆ ತೋರುತ್ತದೆ. ಹೀಗೆ ಮಾಡಬೇಕೇ ಅಥವಾ ಬೇಡವೇ ಎಂಬುದು ದೇವತಾವಾದದ ಪ್ರಶ್ನೆ ಆಗುವುದಿಲ್ಲ; ರಾಜಕಾರಣದ ಪ್ರಶ್ನೆಯಾಗುತ್ತದೆ. ಮಕ್ಕಳಿಗೆ ರಾಷ್ಟ್ರಧ್ವಜದ ಬಗ್ಗೆ ಗೌರವ ತೋರುವುದನ್ನು ಕಲಿಸಬೇಕು ಎಂದು ಹೇಳುವುದಿಲ್ಲವೇ; ಅದೇ ರೀತಿ ಈ ವಾದವೂ ಕೂಡ. ಧರ್ಮದಲ್ಲಿ ಶುದ್ಧ ನಂಬಿಕೆಯನ್ನು ಇಟ್ಟುಕೊಂಡಿರುವ ಒಬ್ಬ ವ್ಯಕ್ತಿಗೆ ದೇವರಲ್ಲಿನ ನಂಬಿಕೆ ಕೇವಲ ಪ್ರಯೋಜನದ ವಿಚಾರವೆಂದರೆ ತೃಪ್ತಿಯಾಗು ವುದಿಲ್ಲ; ಆತನಿಗೆ ನಿಜವಾಗಿ ದೇವರು ಇದ್ದಾನೆಯೇ ಎಂದು ತಿಳಿದುಕೊಳ್ಳುವ ಬಯಕೆ ಇರುತ್ತದೆ. ಎರಡೂ ಪ್ರಶ್ನೆಗಳು ಒಂದೇ ಎಂದು ವಾದಿಸುವುದು ಅಸಂಗತ. ನರ್ಸರಿ ತರಗತಿಯಲ್ಲಿ ಸಾಂಟಾ ಕ್ಲಾಸ್ ಇದ್ದಾನೆ ಎಂಬ ನಂಬಿಕೆ ಪ್ರಯೋಜನಕಾರಿ ಆಗಬಹುದು; ಆದರೆ ಬೆಳೆದು ಪ್ರೌಢರಾದ ನಂತರ ಈ ಬಾಲ್ಯದ ನಂಬಿಕೆಯನ್ನೇ ಸಾಂಟಾ ಕ್ಲಾಸ್ ಇರುವುದಕ್ಕೆ ಪುರಾವೆ ಎಂದು ಯೋಚಿಸಲು ಸಾಧ್ಯವಿಲ್ಲ.

ನಾವು ಇದೀಗ ರಾಜಕಾರಣದ ನೆಲೆಯಲ್ಲಿ ಮಾತಾಡುತ್ತಿಲ್ಲವಾದ್ದರಿಂದ ದೇವರ ನಂಬಿಕೆ ಪ್ರಯೋಜನಕಾರಿ ಎಂಬ ನೈತಿಕವಾದವು ದೇವರ ಅಸ್ತಿತ್ವವನ್ನು ಪ್ರತಿಪಾದಿಸುವುದಿಲ್ಲ. ಆದರೂ ಇದನ್ನು ಇನ್ನಷ್ಟು ಚರ್ಚಿಸೋಣ. ಮೊದಲನೆಯದಾಗಿ, ದೇವರಲ್ಲಿ ನಂಬಿಕೆ ಇದ್ದ ಕೂಡಲೆ ಅದು ನಮ್ಮ ನೈತಿಕತೆಯ ಮೇಲೆ ಪ್ರಭಾವವನ್ನು ಬೀರುತ್ತದೆ ಎಂಬುದೂ ಅನುಮಾನಾಸ್ಪದವಾದ ವಿಚಾರ. ಇತಿಹಾಸದಲ್ಲಿ ಉತ್ಕೃಷ್ಟ ಕಾರ್ಯಗಳನ್ನು ಮಾಡಿದ ಅನೇಕ ಜನ ದೇವರನ್ನು ನಂಬುತ್ತಿರಲಿಲ್ಲ; ಹಾಗೆಯೇ ಇತಿಹಾಸ ಕಂಡ ಅತ್ಯಂತ ಕ್ರೂರಿಗಳು, ದುಷ್ಟರು ದೇವರಲ್ಲಿ ನಂಬಿಕೆಯುಳ್ಳವರಾಗಿದ್ದರು. ಇದಕ್ಕೆ ಬೇಕಾದಷ್ಟು ಉದಾಹರಣೆಗಳು ಸಿಗುತ್ತವೆ.

ಏನೇ ಆಗಲಿ, ಸರಕಾರಗಳು ಅಭಿಪ್ರಾಯಗಳನ್ನು ಅವುಗಳ ಯಥಾರ್ಥತೆಗಿಂತ ಅವುಗಳ ಪ್ರಯೋಜನಕ್ಕಾಗಿ ಎತ್ತಿಹಿಡಿಯುವುದು ಅತ್ಯಂತ ಅಪಾಯಕಾರಿ. ಹೀಗೆ ಮಾಡುವ ಸರಕಾರಗಳು ಅದಕ್ಕೆ ವಿರುದ್ಧವಾದ ವಾದ ಗಳನ್ನು ಹತ್ತಿಕ್ಕಲು ನಿಗ್ರಹವನ್ನು ಹೂಡಬೇಕಾಗಿಯೂ ಬರುತ್ತದೆ. ಎಳೆಯದರಲ್ಲಿ ತರ್ಕಬದ್ಧ ಆಲೋಚನೆಯನ್ನು ನಿರುತ್ತೇಜಿಸಬೇಕಾಗುತ್ತದೆ; ಇಲ್ಲವಾದರೆ, ಅವರಲ್ಲಿ "ಅಪಾಯಕಾರಿ ಆಲೋಚನೆಗಳು" ಬೆಳೆಯುವ ಸಾಧ್ಯತೆ ಇರುತ್ತದೆ. ಜನ ನೀತಿವಂತರಾಗಿ ಬಾಳಬೇಕು ಎನ್ನುವುದೇ ಅಪೇಕ್ಷೆಯಾದರೆ, ಸಮಾಜದಲ್ಲಿ ವಿಚಾರ ಸ್ವಾತಂತ್ರ್ಯಕ್ಕೆ ರಕ್ಷಣೆಯಿರಬೇಕು; ಸಾಕ್ಷ್ಯಾಧಾರಗಳಿಗೆ ಮಹತ್ವವನ್ನು ನೀಡುವ ಪರಿಪಾಠವಿರಬೇಕು. ನೈತಿಕತೆ ಯನ್ನು ಸ್ಥಿರಗೊಳಿಸುವಲ್ಲಿ ಇದು ಮತಧರ್ಮಶಾಸ್ತ್ರ ವಿಧಿಸಿದ ತತ್ವಗಳಿಗಿಂತ ಉಪಯುಕ್ತತೆಯನ್ನು ಹೊಂದಿದೆ. ಇವೆಲ್ಲ ಕಾರಣಗಳಿಂದಾಗಿ ದೇವರಲ್ಲಿನ ನಂಬಿಕೆಯ ಯಥಾರ್ಥತೆಯ ಪ್ರಶ್ನೆಯನ್ನು ಉಪೇಕ್ಷಿಸಿ ಕೇವಲ ಅದರ ಪ್ರಯೋಜನಕ್ಕಾಗಿ ಅದನ್ನು ಎತ್ತಿಹಿಡಿಯುವುದು ಸರಿ ಎಂದು ತೋರುವುದಿಲ್ಲ.

**ಪಲಾಯನವಾದ**

ಅದೇ ವಾದದ ಇನ್ನೊಂದು ಹೆಚ್ಚು ಸರಳವಾದ ಮತ್ತು ಮುಗ್ಧವಾದ ರೂಪವಿದೆ, ಇದು ಹೆಚ್ಚು ಜನರಿಗೆ ಪ್ರಿಯವಾಗುತ್ತದೆ. ಜನ ಹೇಳುತ್ತಾರೆ, ಧರ್ಮದ ಸಾಂತ್ವನ ವಿಲ್ಲದೆ ನಮ್ಮ ಬದುಕು ಅಸಹನೀಯವಾಗುತ್ತದೆ; ದೈನಂದಿನ ಸಂಗತಿಗಳು ನಮ್ಮನ್ನು ದುಗುಡ, ದುಃಖಕ್ಕೆ ಒಡ್ಡುತ್ತವೆ; ಧರ್ಮದಲ್ಲಿನ ನಂಬಿಕೆ ಇದರಿಂದ ರಕ್ಷಣೆಯನ್ನು ನೀಡುತ್ತದೆ ಎಂಬುದು. ಇದು ಒಂದು ರೀತಿ ನಿಜ ಇರಬಹುದು, ಆದರೆ ಇದು ಹೇಡಿತನದ ವಾದ. ಮೂರ್ಖನ ಸ್ವರ್ಗದಲ್ಲಿ ಬದುಕುವುದನ್ನು ಪ್ರಜ್ಞಾಪೂರ್ವಕವಾಗಿ ಆಯ್ದುಕೊಳ್ಳುವುದು ಪಲಾಯನ ವಲ್ಲದಿದ್ದರೆ ಇನ್ನೇನು ? ಅದೂ ಅಲ್ಲದೆ, ಧರ್ಮವು ಜನರಿಗೆ ಸಮಾಧಾನ, ಸಂತೋಷವನ್ನು ಕೊಡುತ್ತದೆ ಎನ್ನುವ ಸಂಗತಿಯನ್ನು ವಾಸ್ತವಕ್ಕಿಂತ ಹೆಚ್ಚು ಉತ್ಪ್ರೇಕ್ಷೆ ಮಾಡಿಹೇಳಲಾಗುತ್ತದೆ. ನೀವು ಸಂತೋಷವಾಗಿದ್ದೀರೋ ಇಲ್ಲವೋ ಎಂಬುದು ಅನೇಕ ಲೌಕಿಕ ವಿಚಾರಗಳ ಮೇಲೆ ಅವಲಂಬಿತವಾಗಿರುತ್ತದೆ. ಹೆಚ್ಚಿನವರಿಗೆ ಹೊಟ್ಟೆಗೆ ಆಹಾರ, ಉತ್ತಮ ಆರೋಗ್ಯ, ಸಾಮಾಜಿಕ ವಲಯದಲ್ಲಿ ಗೌರವ, ಆತ್ಮೀಯರ ಪ್ರೀತಿ, ವಿಶ್ವಾಸ ಇವು ಅಗತ್ಯವಾಗಿರುತ್ತವೆ. ಇವು ಇದ್ದಲ್ಲಿ, ಅವರ ನಂಬಿಕೆಗಳು ಏನೇ ಇರಲಿ ಹೆಚ್ಚಿನವರು ಸುಖವಾಗಿರುತ್ತಾರೆ. ಇವು ಇಲ್ಲದಿದ್ದರೆ, ಅವರ ನಂಬಿಕೆ ಏನೇ ಇರಲಿ, ಹೆಚ್ಚಿನವರು ಸುಖವಾಗಿರುವುದಿಲ್ಲ, ನೆಮ್ಮದಿಯ ಭ್ರಮೆಯಲ್ಲಿ ಬದುಕುತ್ತಾರೆ. ಧಾರ್ಮಿಕ ಭಾವನೆ ಉಳ್ಳವರು ನಾಸ್ತಿಕರಿಗಿಂತ ಹೆಚ್ಚು ಸುಖವಾಗಿರುವುದನ್ನು ನಾನು ಕಂಡಿಲ್ಲ. ಅಲ್ಲದೆ ಜನರಿಗೆ ಕೈತುಂಬ ಕೆಲಸ, ಹೊಟ್ಟೆ ತುಂಬ ಊಟ, ವಾಸಕ್ಕೆ ಮನೆ ಕೊಡಲಾಗದ ಸರಕಾರ ಗಳು ಅದರ ಹೊರತಾಗಿಯೂ ಜನರಿಗೆ ಸುಖ, ಸಂತೋಷದ ಭ್ರಮೆಯನ್ನು ಹುಟ್ಟಿಸಲು ಧರ್ಮವನ್ನು ಕೊಡುತ್ತವೆ. ಇದು ಪಲಾಯನವಲ್ಲದಿದ್ದರೆ ಇನ್ನೇನು ?

ಇನ್ನು ನನ್ನ ನಂಬಿಕೆಗಳ ವಿಚಾರಕ್ಕೆ ಬರುವು ದಾದರೆ, ವಿಶ್ವಕ್ಕೆ ತನ್ನದೇ ಆದ ಒಂದು ಪೂರ್ವ ನಿರ್ಧಾರಿತ ಗುರಿ, ಉದ್ದೇಶವಿದೆ ಎಂದು ನನಗೆ ಅನ್ನಿಸುವುದಿಲ್ಲ. ಬ್ರಹ್ಮಾಂಡ ವಿಕಾಸದ ಪ್ರಕ್ರಿಯೆಯು ಸೃಷ್ಟಿಕರ್ತ ದೇವರಿಗೆ ಸಂಪೂರ್ಣ ತೃಪ್ತಿಯಾಗುವ ಒಂದು ಪರಿಪೂರ್ಣತೆಯ ಕಡೆಗೆ ಸಾಗುತ್ತಿದೆ ಎಂದು ನಂಬುವವರು, ಸೃಷ್ಟಿಕರ್ತ ಸರ್ವಜ್ಞ, ಸರ್ವಶಕ್ತನಲ್ಲ ಎಂಬುದನ್ನೂ ಒಪ್ಪಿಕೊಂಡಂತಾಗುತ್ತದೆ. ಆತ ನಿಜವಾಗಿಯೂ ಸರ್ವಶಕ್ತನಾಗಿದ್ದರೆ ಆತ ಮಾರ್ಗ, ವಿಧಾನದ ಚಿಂತೆ ಮಾಡದೆ ನೇರವಾಗಿ ತನಗೆ ಅತ್ಯಂತ ತೃಪ್ತಿ ನೀಡುವಂಥ ಪರಿಪೂರ್ಣ ಮಾದರಿಯನ್ನೇ ಸೃಷ್ಟಿಸಬಹುದಾಗಿತ್ತಲ್ಲ ! ಭೌತವಿಜ್ಞಾನಿಗಳ ಪ್ರಕಾರ, ವಿಶ್ವದಲ್ಲಿರುವ ಶಕ್ತಿಯು ಕ್ರಮೇಣ ಎಲ್ಲ ಕಡೆಗೆ ಸಮನಾಗಿ ವಿತರಣೆಯಾಗುವತ್ತ ನಡೆದಿದೆ. ಹೆಚ್ಚು ಹೆಚ್ಚು ಸಮನಾಗಿ ಅದು ಹಂಚಿಹೋದಾಗಲೂ ಶಕ್ತಿಯು ಹೆಚ್ಚು ನಿಷ್ಪ್ರಯೋಜಕವಾಗುತ್ತದೆ. ಕ್ರಮೇಣ ಈಗ ಜೀವ ಮತ್ತು ಬೆಳಕಿನ ಹಾಗೆ ಯಾವುದೇ ಸ್ವಾರಸ್ಯಕರವಾಗಿಯೋ ರಮಣೀಯವಾಗಿಯೋ ಇರುವ ಎಲ್ಲವೂ ಕಣ್ಮರೆ ಯಾಗುತ್ತದೆ ಎಂದು ಅವರು ದೃಢವಾಗಿ ಹೇಳುತ್ತಾರೆ.

**ದೇವರೇ ಸೈತಾನನೇ ?**

ಬ್ರಹ್ಮಾಂಡವು ಒಂದು ರಂಗಮಂದಿರವಿದ್ದಂತೆ. ಇಲ್ಲಿ ರಂಗಮಂಚದ ಮೇಲೆ ಒಮ್ಮೆ ಮಾತ್ರ ನಾಟಕ ಪ್ರದರ್ಶನ ನಡೆಯುತ್ತದೆ. ಒಮ್ಮೆ ಅದು ಮುಗಿದು ತೆರೆ ಬಿದ್ದಾಗ, ರಂಗಮಂದಿರವು ಶಿಥಿಲವಾಗುವವರೆಗೆ ಶೀತಲವಾಗಿ, ಖಾಲಿಯಾಗಿ ಉಳಿಯುತ್ತದೆ. ನಾನು ಇದನ್ನು ಯಾವುದೇ ದೃಢತೆಯಿಂದ ನಿರ್ಧರಿಸಿ ಹೇಳಲು ಬಯಸುವುದಿಲ್ಲ. ಹಾಗೆ ಮಾಡಿದಲ್ಲಿ ನಾವು ಈಗ ಪಡೆದಿರುವುದಕ್ಕಿಂತ ಹೆಚ್ಚಿನ ಜ್ಞಾನದ ಸೋಗನ್ನು ಹಾಕಿದ ಹಾಗಾಗುತ್ತದೆ. ಈಗಿರುವ ಪುರಾವೆಗಳ ಪ್ರಕಾರ ಹೀಗೆ ಆಗಲು ಸಾಧ್ಯ ಎಂದು ಮಾತ್ರ ಹೇಳಬಹುದು. ನಾನು, ವಿಶ್ವಕ್ಕೆ ಒಂದು ಉದ್ದೇಶವಿದೆ ಎಂದು ಅಧಿಕಾರಯುತವಾಗಿ ಪ್ರತಿಪಾದಿಸುವುದಿಲ್ಲ; ಆದರೆ ಹಾಗೊಂದು ಉದ್ದೇಶವಿದೆ ಎಂಬುದರ ಬಗ್ಗೆ ಕೂದಲೆಳೆ ಯಷ್ಟೂ ಪುರಾವೆ ಇಲ್ಲ ಎಂದು ಮಾತ್ರ ಹೇಳಬಲ್ಲೆ.

ಒಂದು ವೇಳೆ ವಿಶ್ವಕ್ಕೊಂದು ಉದ್ದೇಶ ಇದ್ದದ್ದೇ ನಿಜವಾದರೆ, ಮತ್ತು ಅದು ಸೃಷ್ಟಿಕರ್ತನ ಉದ್ದೇಶ ವಾಗಿದ್ದರೆ, ಆಗ ಆ ಸೃಷ್ಟಿಕರ್ತ ಎಂಥವನಾಗಿರಬೇಕು ? ದೇವರ ಬಗ್ಗೆ ನಂಬಿಕೆಯುಳ್ಳವರು ಮತ್ತೆ ಮತ್ತೆ ಹೇಳುವ ಹಾಗೆ ಕರುಣಾಮಯಿ ಆಗಿರಲು ಸಾಧ್ಯವೇ ಇಲ್ಲ. ಆತ ನಾವು ಊಹಿಸಿಕೊಳ್ಳಲೂ ಸಾಧ್ಯವಿಲ್ಲದಷ್ಟು ದುಷ್ಟ ಸ್ವಭಾವದವನೇ ಆಗಿರಬೇಕು. ಸರ್ವಶಕ್ತನಾದ ದೇವರು ಇದ್ದದ್ದೇ ಆದರೆ ಆತ ದೇವರಿಗಿಂತ ಹೆಚ್ಚಾಗಿ ಸೈತಾನನೇ ಆಗಿರಬೇಕೆಂದು ಭಾವಿಸಬೇಕಾಗುತ್ತದೆ. ಸೃಷ್ಟಿಕರ್ತ ಇದ್ದಿದ್ದರೆ ಪ್ರತಿವರ್ಷ ಲಕ್ಷಾಂತರ ಜನರಿಗೆ ಮಾರಕರೋಗಗಳನ್ನು ಕೊಡುತ್ತಿದ್ದನೆ? ಅಷ್ಟೊಂದು ಜ್ಞಾನ ಮತ್ತು ಶಕ್ತಿಯುಳ್ಳ ಆತ ತಾನು ಸೃಷ್ಟಿಸಿದ ಮನುಷ್ಯರನ್ನು ಕ್ರೂರಿಗಳು, ವಂಚಕರನ್ನಾಗಿ ಮಾಡುವ ಬದಲಿಗೆ, ಅವರಲ್ಲಿ ಒಳ್ಳೆಯ ಸ್ವಭಾವವನ್ನು ತುಂಬದೆ ಇರುವುದು ಅಸಹ್ಯವಾಗಿದೆ.

ದೇವರನ್ನು ಟೀಕಿಸುವುದೇ ಅಧರ್ಮ, ಅನಾಚಾರ, ಅವಿಧೇಯತೆ ಎಂದು ಭಾವಿಸಲಾಗುವ ಸಮಾಜದಲ್ಲಿ ದೇವರ ಇಡೀ ಪರಿಕಲ್ಪನೆಯೇ ದುಷ್ಟ ಸಾರ್ವಭೌಮತ್ವದ ದ್ಯೋತಕವಾಗಿದೆ. ಸರ್ವಾಧಿಕಾರಿಯು ಮನಬಂದಂತೆ ಕ್ರೌರ್ಯವನ್ನು ತೋರಿದ ನಂತರವೂ ತನ್ನ ದಾಸರ ಹೊಗಳುಭಟ್ಟಂಗಿತನದಿಂದ ಆನಂದಪಡುವುದು ಪ್ರಾಚೀನ ನಿರಂಕುಶತೆಯಲ್ಲಿ ಮಾತ್ರ ಸಾಧ್ಯ. ಇಂಥ ಮಾನಸಿಕತೆಯು ಸ್ವತಂತ್ರ ಚಿಂತನೆಯಿಲ್ಲದ, ದೇವತಾಶಾಸ್ತ್ರದ ಅಂಧಕಾರದಲ್ಲಿ ಉಳಿದುಕೊಂಡು ಬಂದಿರುವ ಜಡ್ಡುಗಟ್ಟಿದ ರಾಜಕೀಯ ಪ್ರಜ್ಞೆ ಮತ್ತು ವ್ಯವಸ್ಥೆಯಲ್ಲಿ ಮಾತ್ರ ಸಾಧ್ಯ.

**ಆಸ್ತಿಕತೆಯ ಆಧುನಿಕ ವೇಷ**

ಹೆಚ್ಚು ವಿದ್ಯಾವಂತರಾದವರು, ಸಮಾಜದಲ್ಲಿ ಅನೇಕ ಸಾಧನೆಗಳನ್ನು ಮಾಡಿ ಗೌರವ, ಪ್ರಶಂಸೆಗೆ ಪಾತ್ರರಾದವರು ತಾವು ಸಂಪ್ರದಾಯ ಶರಣರು ಎಂದು ತೋರಿಸಿಕೊಳ್ಳಲು ಇಷ್ಟಪಡುವುದಿಲ್ಲ. ಹಾಗೆಂದು ಅವರು ದೇವರಲ್ಲಿನ ನಂಬಿಕೆಯನ್ನೂ



ಬರ್ಟ್ರಂಡ್ ಆರ್ಥರ್ ವಿಲಿಯಂ ರಸೆಲ್
(೧೮ ಮೇ ೧೮೭೨ – ೨ ಫೆಬ್ರವರಿ ೧೯೭೦)

ಯುನೈಟೆಡ್ ಕಿಂಗ್‌ಡಂನ ಮನ್‌ಮತ್‌ಷೈರ್‌ನಲ್ಲಿ ಹುಟ್ಟಿದರು. ನಾಡಿನ ಪ್ರತಿಷ್ಠಿತ ಶ್ರೀಮಂತ ಮನೆತನದಲ್ಲಿ ಹುಟ್ಟಿದ ರಸೆಲ್ ಜ್ಞಾನದ ಭಂಡಾರವಾಗಿದ್ದರು. ನಿರಂತರ ಅಧ್ಯಯನಶೀಲರಾದ ಇವರು ಪ್ರಮುಖ ತತ್ವಜ್ಞಾನಿಯಾಗಿದ್ದರು. ವಿಶ್ಲೇಷಣಾತ್ಮಕ ತತ್ವಜ್ಞಾನದ ಪ್ರವರ್ತಕರಲ್ಲೊಬ್ಬರಾಗಿದ್ದರು. ಇವರು ಬರೆದ 'ಆನ್ ಡಿನೋಟಿಂಗ್' ಎಂಬ ಪ್ರಬಂಧವು ತತ್ವಶಾಸ್ತ್ರಕ್ಕೆ ಹೊಸ ಮಾದರಿಯನ್ನೇ ನೀಡಿತು. ಎ. ಎನ್. ವೈಟ್‌ಹೆಡ್ ಎಂಬುವವರ ಜೊತೆಯಲ್ಲಿ ಅವರು ರಚಿಸಿದ ಪ್ರಿನ್ಸಿಪಿಕಾ ಮ್ಯಾಥೆಮಿಟಿಕಾ ಗ್ರಂಥವು ಗಣಿತಕ್ಕೆ ತರ್ಕದ ಆಧಾರವನ್ನು ನೀಡಿದ ಪ್ರಯತ್ನವಾಗಿತ್ತು.

ಗಣಿತಜ್ಞರು, ಇತಿಹಾಸಕಾರರು ಮತ್ತು ಸಮಾಜ ವಿಮರ್ಶಕರೂ ಆಗಿದ್ದ ಬರ್ಟ್ರಂಡ್ ರಸೆಲ್ ರಾಜಕೀಯ ಧೋರಣೆಯಲ್ಲಿ ಪ್ರಗತಿಪರರೂ ಸಮಾಜವಾದಿಯೂ ಶಾಂತಿವಾದಿಯೂ ಆಗಿದ್ದರು. ಇವರು ಆ ಕಾಲದ ಪ್ರಮುಖ ಯುದ್ಧ–ವಿರೋಧಿ ಮತ್ತು ಸಾಮ್ರಾಜ್ಯಶಾಹಿ–ವಿರೋಧಿ ಪ್ರತಿಪಾದಕರಾಗಿದ್ದರು. ಮೊದಲ ಜಾಗತಿಕ ಯುದ್ಧದ ಸಮಯದಲ್ಲಿ ಇವರು ನಡೆಸಿದ ಶಾಂತಿವಾದಿ ಚಳುವಳಿಯಿಂದಾಗಿ ಸೆರೆಮನೆಯನ್ನು ಸೇರಿದರು. ಅಡಾಲ್ಫ್ ಹಿಟ್ಲರ್, ಸ್ಟಾಲಿನಿಸ್ಟ್ ಸರ್ವಾಧಿಕಾರ ಪ್ರಭುತ್ವವನ್ನು ವಿರೋಧಿಸಿದರು; ಪರಮಾಣು ನಿಶ್ಶಸ್ತ್ರೀಕರಣವನ್ನು ಬಲವಾಗಿ ಪ್ರತಿಪಾದಿಸಿದರು.

ಮಾನವತಾವಾದಿ ಆದರ್ಶಗಳು ಮತ್ತು ಚಿಂತನೆಯ ಸ್ವಾತಂತ್ರ್ಯದ ಬಗ್ಗೆ ಇವರ ಮಹತ್ವದ ಸಾಹಿತ್ಯಸೇವೆಯನ್ನು ಪರಿಗಣಿಸಿ ಇವರಿಗೆ ೧೯೫೦ರಲ್ಲಿ ಸಾಹಿತ್ಯದ ನೊಬೆಲ್ ಬಹುಮಾನ ಸಂದಿತು. ಇವರ ಸಂಶೋಧನೆ, ಚಿಂತನೆ, ಬರವಣಿಗೆ ಎಷ್ಟೊಂದು ವ್ಯಾಪಕವಾಗಿತ್ತು ಎಂದರೆ, ಅದು ಅವರ ಕಾಲದಲ್ಲಿ ಮತ್ತು ಅವರ ನಂತರವೂ ಕೂಡ ತರ್ಕಶಾಸ್ತ್ರ, ಗಣಿತ, ಸೆಟ್ ಥಿಯರಿ, ಭಾಷಾವಿಜ್ಞಾನ, ಕೃತ್ರಿಮ ಬುದ್ಧಿಶಕ್ತಿ, ಜ್ಞಾನಗ್ರಹಣ ವಿಜ್ಞಾನ, ಕಂಪ್ಯೂಟರ್ ವಿಜ್ಞಾನ, ಜ್ಞಾನ ಮೀಮಾಂಸೆ, ತತ್ವಮೀಮಾಂಸೆ ಹೀಗೆ ಅನೇಕ ಕ್ಷೇತ್ರಗಳ ಚಿಂತನೆ, ಅಭಿವೃದ್ಧಿಗಳ ಮೇಲೆ ಅದು ಮಹತ್ವದ ಪ್ರಭಾವ ಬೀರಿತು.

ತೊರೆಯುವುದಿಲ್ಲ. ಇಂಥವರು ಇನ್ನೊಂದು ರೀತಿಯ ಆಧುನಿಕ ಆಸ್ತಿಕತೆಯನ್ನು ತೋರುತ್ತಾರೆ. ಆಧುನಿಕ ವೇಷದ ಆಸ್ತಿಕತೆಯ ಪ್ರಕಾರ, ಹೌದು, ದೇವರು ಸರ್ವಶಕ್ತನಲ್ಲ, ಆದರೆ ಆತ ಅನೇಕ ಕಷ್ಟ–ಕಾರ್ಪಣ್ಯಗಳ ಹೊರತಾಗಿಯೂ ತನ್ನ ಶಕ್ತಿಮೀರಿ ಎಲ್ಲವನ್ನೂ ಒಳ್ಳೆಯದನ್ನಾಗಿ ಮಾಡಲು ಪ್ರಯತ್ನಿಸುತ್ತಿದ್ದಾನೆ. ಕ್ರೈಸ್ತರಮಟ್ಟಿಗೆ ಈ ದೃಷ್ಟಿಕೋನವು ಇದು ಹೊಸತಾಗಿ ಇದ್ದರೂ, ಚಿಂತನೆಯ ಇತಿಹಾಸದಲ್ಲಿ ಈ ಪರಿಕಲ್ಪನೆ ಹೊಸದಲ್ಲ. ಪ್ಲೇಟೋನಲ್ಲಿ ಈ ಆಲೋಚನೆಯನ್ನು ಕಾಣಬಹುದು. ಈ ದೃಷ್ಟಿಕೋನವನ್ನು ಸುಳ್ಳು ಎಂದು ಸಾಧಿಸಲು ಸಾಧ್ಯ ಎಂದು ನನಗನ್ನಿಸುವುದಿಲ್ಲ. ಆದರೆ, ಈ ವಿಚಾರದ ಪರವಾಗಿ ಯಾವುದೇ ಸಕಾರಾತ್ಮಕ ತರ್ಕವಿಲ್ಲ ಎಂದಷ್ಟೇ ಹೇಳಬಹುದು.

ಯಾವುದನ್ನಾದರೂ ನಂಬಿದವರು ಅದು ಇದೆ ಎಂದು ಸಾಧಿಸುವ ಜವಾಬ್ದಾರಿಯನ್ನೂ ಹೊಂದಿರಬೇಕಾದುದು ಸಹಜ. ಆದರೆ ಹೆಚ್ಚಿನ ಸಂಪ್ರದಾಯವಾದಿಗಳು ಇದಕ್ಕೆ ವಿರುದ್ಧ. ಜನ ಅಂಗೀಕಾರ ಮಾಡಿರುವ ರೂಢನಂಬಿಕೆಗಳು ಸುಳ್ಳು ಎಂದು ಸಾಧಿಸುವುದು ಸಂದೇಹಿಗಳ ಕೆಲಸ ಎಂಬಂತೆ ಹೆಚ್ಚಿನ ಸಂಪ್ರದಾಯವಾದಿಗಳು ಮಾತಾಡುತ್ತಾರೆ. ಇದು ಖಂಡಿತ ಮೊಂಡುವಾದ. ನಾನು ಹೇಳುತ್ತೇನೆ, 'ಭೂಮಿ ಮತ್ತು ಮಂಗಳ ಗ್ರಹಗಳ ನಡುವೆ ಸೂರ್ಯನ ಸುತ್ತ ದೀರ್ಘವೃತ್ತಾಕಾರದಲ್ಲಿ ಒಂದು ಚೀನಾ ಚಹಾಪಾತ್ರೆ ತಿರುಗುತ್ತಿದೆ' ಎಂದು. ಜೊತೆಗೆ, 'ಅದು ಎಷ್ಟು ಚಿಕ್ಕದು ಎಂದರೆ ಅತ್ಯಂತ ಶಕ್ತಿಶಾಲಿಯಾದ ದೂರದರ್ಶಕದಲ್ಲಿಯೂ ಅದು ಗೋಚರಿಸುವುದಿಲ್ಲ' ಎಂದು ಹೇಳುವ ಎಚ್ಚರಿಕೆಯನ್ನೂ ವಹಿಸುತ್ತೇನೆ ಎಂದಿಟ್ಟುಕೊಳ್ಳಿ. ಮುಂದುವರಿದು ನಾನು, ನನ್ನ ಪ್ರತಿಪಾದನೆಯನ್ನು ಸುಳ್ಳು ಎಂದು ಸಾಬೀತುಪಡಿಸಲು ಸಾಧ್ಯವಿಲ್ಲವಾದ್ದರಿಂದ, ಮನುಷ್ಯರು ಅದನ್ನು ಅನುಮಾನಿಸಿದ್ದೇ ಆದರೆ ಅದು ಅಸಹನೀಯ ದುರಹಂಕಾರವಾಗುತ್ತದೆ ಎಂದು ಹೇಳಿದರೆ ನೀವೇನನ್ನುತ್ತೀರಿ? ಬಹುಶಃ ನಾನಾಡುತ್ತಿರುವುದು ಮೂರ್ಖತನದ ಮಾತು ಎನ್ನಬಹುದು. ಆದರೆ ಇಂಥ ಚೀನಾ ಚಹಾಪಾತ್ರೆ ಇರುವುದನ್ನು ಪ್ರಾಚೀನ ಪುಸ್ತಕಗಳು ಸಮರ್ಥಿಸಿದ್ದರೆ, ಪ್ರತಿ ಭಾನುವಾರ ಚರ್ಚುಗಳಲ್ಲಿ ಇದು ಪವಿತ್ರ ಸತ್ಯವೆಂದು ಬೋಧಿಸಿದ್ದರೆ, ಎಳೆತನದಿಂದಲೇ ಶಾಲೆಯ ಮಕ್ಕಳ ಮನಸ್ಸಿನಲ್ಲಿ ಇದನ್ನು ಬಿತ್ತಿದ್ದರೆ, ಆಗ ಚೀನಾ ಚಹಾಪಾತ್ರೆ ಸೂರ್ಯನ ಸುತ್ತ ಪರಿಭ್ರಮಿಸುತ್ತಿದೆ ಎಂಬುದನ್ನು ನಿಜವೆಂದು ನಂಬಬೇಕಾಗುತ್ತದೆ; ಅಕಸ್ಮಾತ್ ನಂಬಲು ಹಿಂಜರಿದರೆ ಅದು ವಿಕ್ಷಿಪ್ತತೆಯ ಲಕ್ಷಣ ಎಂದು ಭಾವಿಸಬೇಕಾಗುತ್ತದೆ; ಅಂಥ ಸಂದೇಹಿಯನ್ನು ಈಗಿನ ಕಾಲದಲ್ಲಾದರೆ ಮನೋವೈದ್ಯರ ಬಳಿಯಲ್ಲಿ, ಅಥವಾ ಹಳೆಯ ಕಾಲದಲ್ಲಾದರೆ ಪಾಷಂಡತ್ವಕ್ಕೆ ದಂಡನೆಯನ್ನು ನೀಡುವ ವಿಚಾರಣಾಧಿಕಾರಿಯ ಬಳಿ ಕರೆದೊಯ್ಯಬೇಕಾಗುತ್ತದೆ. ಒಂದು ನಂಬಿಕೆ ಹೆಚ್ಚು ಜನಜನಿತವಾಗಿದೆ ಎಂಬ ಕಾರಣಕ್ಕಾಗಿಯೇ ಅದರಲ್ಲಿ ಏನಾದರೂ ವಿವೇಕ ಇರಬೇಕು ಎಂದು ಭಾವಿಸುವುದು ಒಂದು ಸಂಪ್ರದಾಯ. ಆದರೆ ಇತಿಹಾಸವನ್ನು ಅಧ್ಯಯನ ಮಾಡಿದವರು ಇದನ್ನು ಒಪ್ಪುವುದಿಲ್ಲ. ಪ್ರಾಚೀನ ಎಂದ ಕೂಡಲೆ ಅದರಲ್ಲಿ ಏನಾದರೂ ಮಹತ್ವದ್ದು ಇರಲೇಬೇಕು ಎಂದೇನೂ ಇಲ್ಲ.

ನಿಮ್ಮ ನಂಬಿಕೆಗಳೇನು ಎಂದು ನನಗೆ ಗೊತ್ತಿಲ್ಲ. ಪ್ರಿಯ ಓದುಗರೆ, ಅವು ಏನೇ ಆಗಿರಲಿ, ಹತ್ತಕ್ಕೆ ಒಂಭತ್ತು ಜನರಲ್ಲಿರುವ ಹತ್ತಕ್ಕೆ ಒಂಭತ್ತು ನಂಬಿಕೆಗಳು ಅತಾರ್ಕಿಕವಾಗಿರುತ್ತವೆ. ಆದ್ದರಿಂದ ಹಳೆಯ ಕಾಲದಿಂದ ನಂಬಿಕೊಂಡು ಬಂದಿರುವುದನ್ನು ಅನುಮಾನಿಸುವುದು ದುರಹಂಕಾರ ಎಂದು ನಾನು ಭಾವಿಸುವುದಿಲ್ಲ. ನೈಸರ್ಗಿಕ ಶಕ್ತಿಗಳು ಅವನ ವಿರುದ್ಧ ಕೆಲಸ ಮಾಡದಿದ್ದಲ್ಲಿ ಮನುಷ್ಯ ತನ್ನ ಭವಿಷ್ಯವನ್ನು ತಾನೇ ರೂಪಿಸಿಕೊಳ್ಳುವಲ್ಲಿ ಸ್ವತಂತ್ರನಾಗಿದ್ದಾನೆ. ಅದು ಅವನಿಗೆ ಸಿಕ್ಕ ಅವಕಾಶ, ಅದು ಅವನದೇ ಜವಾಬ್ದಾರಿ.

**ಬರ್ಟ್ರಾಂಡ್ ಆರ್ಥರ್ ವಿಲಿಯಂ ರಸೆಲ್**
ಭಾವಾನುವಾದ : **ಎಂ. ಅಬ್ದುಲ್ ರೆಹಮಾನ್ ಪಾಷ**
೮೧/೩೭–೩, ೧೨ನೇ 'ಡಿ' ಮುಖ್ಯರಸ್ತೆ, ಶಿವನಗರ
ಬೆಂಗಳೂರು – ೫೬೦ ೦೧೦

# ವಿಸ್ಮಯ

ಸದ್ದಿಲ್ಲದೇ ಅರಳಿಕೊಂಡ
ಹೂವಿನ ಪರಿಮಳಕ್ಕೆ ಮನಸೋತು
ಸೂರ್ಯ ಕಣ್ಣರಳಿಸಿದ್ದಾನೆ
ಹರಿಯುತ್ತಿದೆ ನಸುಕು.

ಕಾವ್ಯಧಾರೆ

ದಳ ದಳಗಳನ್ನೆಲ್ಲ ಬಿಡಿಸಿ
ಬೆಚ್ಚದೆ ನಗುತ್ತಿದೆ ಹೂವು
ಸೂರ್ಯ ಬೆಚ್ಚಿ ಬೆವರುತ್ತಿದ್ದಾನೆ
ಉರಿಯುತ್ತಿದೆ ನಡುಹಗಲು.

ತೊಟ್ಟು ಕಳಚಿಕೊಳ್ಳುತ್ತಿದೆ ನಗುವ ಹೂವು
ಕಡಲಿನೆಡೆಗೆ ಸಾಗುತ್ತಿದೆ ಬೆಳಕ ನೋವು
ಈ ಧಾವಂತದ ವಿದಾಯಕ್ಕೆ ವಿಷಾದಿಸುತ್ತಿದೆ
ಸಂಜೆ ಬಾನು
ಕವಿಯುತ್ತಿದೆ ಕತ್ತಲು

ನೆಲದ ಸುಮ ಬಾನ ರವಿ
ಸರಿದ ಗಳಿಗೆ
ಬರಿದಾಗಿದೆ ಇರುಳ ಒಡಲು

ತುಂಬಿಕೊಂಡ ಗಂಧ ಚೆಂದಕ್ಕೆ
ಮರುಳಾಗಿ ಚಿಮ್ಮಬೇಕಾಗಿದೆ
ಬೆಳಕ ಹೊನಲು

ಹೇಗೆ...? ಪಾಪ! ನಿಶಾಚರಿಯಂತೆ
ಖಾಲಿ ಕತ್ತಲೆಯುದ್ದಕ್ಕೂ ಚಡಪಡಿಸುತ್ತಾ
ಪದ ಪದಗಳ ಹೆಕ್ಕಿ ಹೊಸೆಯುತ್ತಾ
ಓಡಾಡುತ್ತಿದೆ ಕವಿತೆ ಸಾಲು.

ನಾಳೆಯ ವಿಸ್ಮಯದ ಪವಾಡಕ್ಕೆ
ಕೌತುಕದಿ ಕಾಯುತ್ತಿದೆ ಜಗತ್ತು.

**ಸ್ಮಿತಾ ಅಮೃತರಾಜ್, ಸಂಪಾಜೆ.**
ಹಸಿರು, ಬಾಲಂಬಿ ಅಂಚೆ, ಚೆಂಬು ಗ್ರಾಮ
ಮಡಿಕೇರಿ ತಾಲ್ಲೂಕು, ಕೊಡಗು–೫೭೧೨೩೪



# ಕಾಣದ ಗ್ರಹಣಗಳು

**ಸಂ**ಜೆಯ ಆಕಾಶದಲ್ಲಿ ಗುರುಗ್ರಹ, ಪ್ರಕಾಶಮಾನವಾದ ಲುಬ್ಧಕ (ಸಿರಿಯಸ್), ಅಗಸ್ತ್ಯ (ಕನೋಪಸ್) ಇವುಗಳ ಜೊತೆ ಪೂರ್ವದ ಅಂಚಿನಲ್ಲಿ ಮಂಗಳ ಕಂಗೊಳಿಸುತ್ತದೆ. ಆಕಾಶದ ತುಂಬ ಚುಕ್ಕೆಗಳೋ ಚುಕ್ಕೆಗಳು. ಮಹಾವ್ಯಾಧನ ದಕ್ಷಿಣದಲ್ಲಿ ಆಕಾಶಗಂಗೆಯ ಒಂದು ಭಾಗ ಹಾದುಹೋಗುತ್ತದೆ. ಹಾಗಾಗಿ ಮಹಾವ್ಯಾಧ, ನೌಕಾಪಟ – ಈ ಭಾಗಗಳಲ್ಲಿ ನಕ್ಷತ್ರಗಳ ದಟ್ಟಣೆ ಹೆಚ್ಚು.

ಮಂಗಳದ ಸನಿಹದಲ್ಲಿರುವ ಚುಕ್ಕೆಯೇ ಚಿತ್ರಾ ನಕ್ಷತ್ರ. ಈ ತಿಂಗಳ ಹುಣ್ಣಿಮೆಯ ಚಂದ್ರ ಈ ನಕ್ಷತ್ರದ ಪಕ್ಕದಲ್ಲಿಯೇ ಕಾಣುತ್ತದೆ. (ಆದ್ದರಿಂದ ಈ ಹುಣ್ಣಿಮೆಗೆ ಚಿತ್ರಾ ಪೌರ್ಣಮಿ ಎಂಬ ಹೆಸರಿದೆ) ಅದರ ಹಿಂದಿನ ದಿನ ಮಂಗಳಕ್ಕೆ ಸಮೀಪವಾಗಿ ಇರುತ್ತದೆ. ಈ ತಿಂಗಳಲ್ಲಿ ಶ್ರೀ ರಾಮನವಮಿ ಎಂಬ ಆಚರಣೆಯೂ ಉಂಟು. ೬, ೭, ೮ – ಈ ತಾರೀಖುಗಳಂದು ಚಂದ್ರನ ಸ್ಥಾನಗಳನ್ನು ಗಮನಿಸಿ. ಗುರುಗ್ರಹದಿಂದ ಸ್ವಲ್ಪ ಉತ್ತರಕ್ಕಿರುವ ಎರಡು ನಕ್ಷತ್ರಗಳಿಗೆ ಪುನರ್ವಸು ಎಂಬ ಹೆಸರಿದೆ. ೮ರಂದು ಚಂದ್ರ ಅದರ ಸಮೀಪ ಇರುತ್ತದೆ. ಶ್ರೀರಾಮ ಹುಟ್ಟಿದಾಗ ಹೀಗೆ ಚಂದ್ರ ಪುನರ್ವಸುವಿನ ಪಕ್ಕದಲ್ಲಿಯೇ ಇತ್ತು ಎಂಬುದು ಪ್ರತೀತಿ.

ಉ
ಕುಂತಿ
ಸಪ್ತರ್ಷಿಮಂಡಲ
ಪಾರ್ಥ
ವಿಜಯಸಾರಥಿ
ಮಿಥುನ
ಸಿಂಹ
ಕಟಕ
ವೃಷಭ
ಪೂ
ಪ
ಗುರು
ಮಂಗಳ
ಕನ್ಯಾ
ಮಹಾವ್ಯಾಧ
ಮಹಾಶ್ವಾನ
ನೌಕಾಪಟ
ದ

ಈ ತಿಂಗಳಲ್ಲಿ ಚಂದ್ರಗ್ರಹಣವೂ ಇದೆ; ಸೂರ್ಯಗ್ರಹಣವೂ ಇದೆ. ಆದರೆ ಅವೆರಡೂ ನಮಗೆ ಕಾಣುವಂತಿಲ್ಲ. ಚಂದ್ರಗ್ರಹಣ ನಮ್ಮ ಮಧ್ಯಾಹ್ನದಲ್ಲಿ ನಡೆಯುತ್ತದೆ. ಸೂರ್ಯಗ್ರಹಣದ ಅವಧಿ ನಮ್ಮ ಹಗಲೇ ಆದರೂ ಚಂದ್ರನ ನೆರಳು ದಕ್ಷಿಣದ ಅಂಟಾರ್ಕ್ಟಿಕಾ ಭಾಗದ ಮೇಲೆ ಬೀಳುತ್ತದೆ. ಹಾಗೆಯೇ ಇನ್ನೊಂದು ಬಗೆಯ ಗ್ರಹಣ ಅಂದರೆ ಚಂದ್ರ ಶನಿಗ್ರಹವನ್ನು ಮರೆಮಾಡುವ ಆಚ್ಛಾದನೆಯೂ ಇದೆ. ಅದೂ ನಮಗೆ ಕಾಣುವುದಿಲ್ಲ. ನೀವು ಊಹಿಸಲೂ ಸಾಧ್ಯವಿಲ್ಲದಂತಹ ಇನ್ನೂ ಒಂದು ಬಗೆಯ ಗ್ರಹಣವಿದೆ. ೨೬ರಂದು ಸೂರ್ಯ ಬುಧಗ್ರಹವನ್ನು ಮರೆ ಮಾಡುತ್ತದೆ. ಇದನ್ನು ಬರಿಗಣ್ಣಿನಿಂದ ನೋಡುವುದಂತೂ ಸಾಧ್ಯವಿಲ್ಲ. ಆದರೆ ಸೋಹೋ ಎಂಬ ಹೆಸರಿನ ಬಾಹ್ಯಾಕಾಶ ಉಪಗ್ರಹ ತೋರಿಸಬಲ್ಲುದು. ಅದು ಪ್ರತಿದಿನವೂ ಸೂರ್ಯನ ಚಿತ್ರಗಳನ್ನು ತೆಗೆಯುತ್ತದೆ.

*ಏಪ್ರಿಲ್ ೬ರ ಸಂಜೆ*
*ಚಂದ್ರ ಮತ್ತು ಗುರು ಮಿಥುನ ರಾಶಿಯಲ್ಲಿ*

ಇವು http://sohowww.nascom.nasa.gov/data/realtime-images.html ಈ ವೆಬ್‌ಸೈಟ್‌ನಲ್ಲಿ ಲಭ್ಯವಿವೆ. ೨೬ರಂದು ಚಿತ್ರಗಳನ್ನು ಗಮನಿಸಿ ನೋಡಿದರೆ ಬುಧಗ್ರಹ ಒಂದು ಬದಿಯಿಂದ ಇನ್ನೊಂದು ಬದಿಗೆ ಸರಿದಿರುವುದು ಸ್ಪಷ್ಟವಾಗಿ ಕಾಣುತ್ತದೆ. ಹೀಗೆ ಆಗಾಗ್ಗೆ ಬುಧ ಸೂರ್ಯನ ಹಿಂಬದಿಯಿಂದ ಹಾದು ಹೋಗುವುದನ್ನು ಉಚ್ಚಯುತಿ ಎಂದು ಕರೆಯುತ್ತಾರೆ. ಈ ಘಟನೆಗಳು ಸರ್ವೇ ಸಾಮಾನ್ಯ. ಆದರೆ ಎಲ್ಲಾ ಉಚ್ಚಯುತಿಗಳ ಸಂದರ್ಭಗಳಲ್ಲಿ ಹೀಗೆ ಸೂರ್ಯನ ಹಿಂದೆ ಬುಧ ಮರೆಯಾಗುವುದಿಲ್ಲ. ಸೂರ್ಯ ಬಿಂಬದ ಮೇಲೆ ಅಥವಾ ಕೆಳಗೆ ಹಾದುಹೋಗುತ್ತದೆ.

ಈ ತಿಂಗಳಲ್ಲಿ ಅಷ್ಟಮಿಯ ಚಂದ್ರನ ಚಿತ್ರಗಳನ್ನು ತೆಗೆಯುವ ಪ್ರಯತ್ನ ಮಾಡಿದಲ್ಲಿ ಒಳ್ಳೆಯ ಫಲಿತಾಂಶ ಸಿಗಲಿದೆ. ೮ರಂದು ಚಂದ್ರ–ಭೂಮಿ ನಡುವಿನ ಅಂತರ ಗರಿಷ್ಠ. ಅಂದರೆ ಚಂದ್ರ ಬಿಂಬದ ಗಾತ್ರ ಸ್ವಲ್ಪ ಚಿಕ್ಕದಿರುತ್ತದೆ. ೨೩ರಂದು ಈ ಅಂತರ ಕನಿಷ್ಠ. ಅಂದರೆ ಗಾತ್ರ ಸ್ವಲ್ಪ ದೊಡ್ಡದಿರುತ್ತದೆ. ಈ ಎರಡೂ ಅರ್ಧ ಚಂದ್ರಗಳ ಚಿತ್ರ ತೆಗೆಯುವಾಗ ಒಂದೇ ಕ್ಯಾಮರಾ ಬಳಸಬೇಕು. ಅದೇ ಝೂಮ್ ಇಟ್ಟಿರಬೇಕು. ಹಾಗೆ ಆದಲ್ಲಿ ಬಿಂಬಗಳ ಗಾತ್ರದ ವ್ಯತ್ಯಾಸ ತಿಳಿದುಬರುತ್ತದೆ. ಈ ವ್ಯತ್ಯಾಸ ಬರಿಗಣ್ಣಿಗಂತೂ ಕಾಣುವುದಿಲ್ಲ.

ಈ ತಿಂಗಳಲ್ಲಿ ಉಲ್ಕಾವೃಷ್ಟಿ ಇದೆ. ಲಿರಿಡ್ಸ್ ಎಂದು ಹೆಸರಿದೆ. ಅಂದರೆ ಲೈರಾ ಅಥವಾ ವೀಣಾ ಪುಂಜದಿಂದ ಹೊರಟಂತೆ ಕಾಣುತ್ತವೆ. ಏಪ್ರಿಲ್ ೧೬ರಿಂದ ೨೫ರವರೆಗೂ ಕಾಣುವುವು. ಆದರೆ ಆಗ ಹುಣ್ಣಿಮೆಯ ಚಂದ್ರನ ಬೆಳಕೂ ಇರುವುದರಿಂದ ಕ್ಷೀಣವಾದ ಉಲ್ಕೆಗಳು ಕಾಣುವುದಿಲ್ಲ.

(ಈ ಅಂಕಣದಲ್ಲಿ ಬಳಸಲಾಗುತ್ತಿರುವ ಪುಂಜಗಳ ಹೆಸರುಗಳನ್ನು ಪ್ರೊ॥ ಆರ್. ಎಲ್. ನರಸಿಂಹಯ್ಯನವರು ಟಂಕಿಸಿದ್ದು, ಯಾವುದೇ ಸಂಸ್ಕೃತ ಮೂಲ ಗ್ರಂಥಗಳ ಆಧಾರವಿಲ್ಲ.)

**ಖಗೋಳ ದಿನಚರಿ**

ಏಪ್ರಿಲ್ ೬ ಚಂದ್ರನಿಂದ ೫ ಡಿಗ್ರಿ ಉತ್ತರಕ್ಕೆ ಗುರು ಗ್ರಹ
೭ ಚಾಂದ್ರಮಾಸದ ಮೊದಲ ಪಾದ
೮ ಚಂದ್ರ – ಭೂಮಿ ನಡುವೆ ಗರಿಷ್ಠ ಅಂತರ
ಮಂಗಳ ಗ್ರಹದ ವಿಯುತಿ
೧೪ ಚಂದ್ರನಿಂದ ಮಂಗಳ ೪ ಡಿಗ್ರಿ ಉತ್ತರದಲ್ಲಿ
೧೫ ಹುಣ್ಣಿಮೆ ೧೩:೧೨ಕ್ಕೆ
(ಚಂದ್ರಗ್ರಹಣ ಭಾರತಕ್ಕೆ ಕಾಣುವುದಿಲ್ಲ)
೧೭ ಶನಿಯಿಂದ ೪ ಡಿಗ್ರಿ ಅಂತರದಲ್ಲಿ ಚಂದ್ರ
೨೨ ಚಾಂದ್ರಮಾಸದ ಕೊನೆಯ ಪಾದ
೨೩ ಚಂದ್ರ – ಭೂಮಿ ನಡುವೆ ಕನಿಷ್ಠ ಅಂತರ
೨೫ ಚಂದ್ರ – ಶುಕ್ರ ನಡುವೆ ೫ ಡಿಗ್ರಿ ಅಂತರ
೨೬ ಬುಧ ಗ್ರಹದ ಉಚ್ಚಯುತಿ
೨೯ ಅಮಾವಾಸ್ಯೆ ೧೧:೩೪ಕ್ಕೆ
(ಸೂರ್ಯಗ್ರಹಣ ಭಾರತಕ್ಕೆ ಕಾಣುವುದಿಲ್ಲ)

**ಡಾ॥ ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್
ಬೆಂಗಳೂರು – ೫೬೦ ೦೦೧

# ರೂಪಾಯಿ ಸೊರಗುತ್ತಿರುವದೇಕೆ ?

ಪ್ರೊ ॥ ಆರ್. ಪಿ. ಪುನಗಿನ



**ರೂ**ಪಾಯಿ ಸೊರಗುತ್ತಿರುವದೇಕೆ ? ಅದಕ್ಕೂ ಎಲ್ಲ ಜೀವರಾಶಿಗಳಿಗಿರುವಂತೆ ಹೃದಯ, ನರನಾಡಿ, ಕೈಕಾಲು, ಮಾಂಸಖಂಡ ಹೀಗೆ ಎಲ್ಲಾ ಅಂಗಾಂಗಗಳಿವೆಯೆ ? ಅದಕ್ಕೂ ಮನಸ್ಸಿದೆಯಾ ? ರೂಪಾಯಿಯ ಮೌಲ್ಯ ಕುಸಿಯುವದೆಂದರೇನು ? ಅದಕ್ಕೆ ಕಾರಣಗಳೇನಿರಬಹುದು ? ದೇಶದ ಅರ್ಥಶಾಸ್ತ್ರ ಪರಿಣಿತರಲ್ಲದ ಸಾಮಾನ್ಯ ಪ್ರಜ್ಞಾವಂತ ಪ್ರಜೆಗಳಲ್ಲಿ ಇಂಥ ಪ್ರಶ್ನೆಗಳು ಕಾಡುವದು ಸಹಜ.

ರೂಪಾಯಿಯ ಮೌಲ್ಯದ ಇತಿಹಾಸ ಕೆದಕುತ್ತ ಹೋದೆ. ೧೯೪೭ ಆಗಸ್ಟ್ ೧೪ರ ಮಧ್ಯರಾತ್ರಿ ಬ್ರಿಟಿಷರ ಆಳ್ವಿಕೆ ಕೊನೆಗೊಂಡಿತು. ಸ್ವತಂತ್ರ ಭಾರತ ಉದಯವಾಗಿ ಪ್ರಜೆಗಳೆಲ್ಲ ಅಂದು ನೆಮ್ಮದಿಯ ಬದುಕಿನ ಕನಸು ಕಂಡಿದ್ದರು. ಪ್ರತಿಯೊಬ್ಬ ಪ್ರಜೆಗೂ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ನ್ಯಾಯ ದೊರಕಿಸಿಕೊಡುವ ಅಂಶಗಳನ್ನು ನಮ್ಮದೇ ಸಂವಿಧಾನದಲ್ಲಿ ಅಳವಡಿಸಲಾಯಿತು. ೧೯೫೦ರಲ್ಲಿ ಪ್ರಜೆಗಳಿಂದ, ಪ್ರಜೆಗಳಿಗಾಗಿ, ಪ್ರಜಾಪ್ರಭುತ್ವ ತಳಹದಿಯ ಆದರ್ಶ ಧ್ಯೇಯಗಳೊಂದಿಗೆ ಭಾರತವು ಪ್ರಜಾಪ್ರಭುತ್ವ ಗಣರಾಜ್ಯವಾಯಿತು. ಪ್ರಜೆಗಳಿಂದಲೇ ಆರಿಸಿ ಕಳಿಸಿದ ರಾಜಕಾರಣಿಗಳು ನಮ್ಮನ್ನು ಆಳಲು ಪ್ರಾರಂಭ ಮಾಡಿದರು. ಆಗ ದೇಶದ ಮೇಲೆ ಸಾಲದ ಹೊರೆಯೂ ಇದ್ದಿಲ್ಲ. ಅಲ್ಲಿಂದ ರೂಪಾಯಿ ಸೊರಗಲು ಪ್ರಾರಂಭವಾಗಿ ೬೬ ವರ್ಷಗಳಲ್ಲಿ ರೂಪಾಯಿಯ ಮೌಲ್ಯ ಸಾಕಷ್ಟು ಏರಿಳಿತಗಳನ್ನು ಕಂಡಿದೆ. ಭಾರತವು ಸಾಲದ ಭಾರ ತಾಳಲಾರದೆ ನರಳಾಡುತ್ತಿದೆ.



೧೯೪೭ರಲ್ಲಿ ವಿಭಜಿತ ಸ್ವತಂತ್ರ ಭಾರತದ ೩೪.೫ ಕೋಟಿ ಪ್ರಜೆಗಳಲ್ಲಿ ೮೦% ಹಳ್ಳಿಗಳಲ್ಲಿ ಕೃಷಿಯಾಧಾರಿತ ಕಸಬಿನಲ್ಲಿ ತೊಡಗಿದ್ದು ಕಡುಬಡವರಾಗಿದ್ದರು. ಮತ್ತು ಅಶಿಕ್ಷಿತರಾಗಿದ್ದರು. ಇಂಥ ಪರಿಸ್ಥಿತಿಯಲ್ಲಿ ಬಡತನ ನಿರ್ಮೂಲನೆ, ಶಿಕ್ಷಣ, ವೈದ್ಯಕೀಯ, ಆರೋಗ್ಯ ಹಾಗೂ ಮೂಲಭೂತ ಸೌಕರ್ಯಗಳನ್ನೊದಗಿಸುವ ಯೋಜನೆಗಳನ್ನು ರೂಪಿಸುವ ಮತ್ತು ಅನುಷ್ಠಾನಗೊಳಿಸುವ ಗುರುತರ ಹೊಣೆ ಭಾರತದ ಅಂದಿನ ಜನಪ್ರತಿನಿಧಿಗಳಿಗೆ ಪ್ರಶ್ನೆಯಾಗಿತ್ತು. ಅದಕ್ಕಾಗಿ ಪಂಚವಾರ್ಷಿಕ ಯೋಜನೆಗಳನ್ನು ರೂಪಿಸತೊಡಗಿದರು. ೧೯೫೧–೫೬ರ ಪ್ರಥಮ ಪಂಚವಾರ್ಷಿಕ ಯೋಜನೆಯಲ್ಲಿ ಕೃಷಿ, ವಿದ್ಯುತ್, ಸಾರಿಗೆ ಮತ್ತು ಸರಕು ಬೆಲೆ ನಿಯಂತ್ರಣದಂಥ ಮಹತ್ವದ ಅಂಶಗಳನ್ನು ಅಳವಡಿಸಿ ಜಾರಿಗೆ ತರಲು ಅಣಿಯಾದರು. ವಿತ್ತೀಯ ಕೊರತೆಯನ್ನು ನೀಗಿಸಲು ವಿದೇಶೀ ಸಾಲಕ್ಕೆ ಮೊರೆ ಹೋಗಬೇಕಾಯಿತು. ರೂಪಾಯಿ ಮೊದಲ ಸಲ ಅಪಮೌಲ್ಯಕ್ಕೊಳಗಾಯಿತು.

ಇದಕ್ಕೆ ಪ್ರಮುಖ ಕಾರಣ ೧೯೪೪ರಲ್ಲಿ ಜಾಗತಿಕ ಮಟ್ಟದಲ್ಲಿ ಆದ ಬ್ರೆಂಟನ್ ವುಡ್ ಸಿಫಾರಸ್ಸಿನ ಒಪ್ಪಂದ. ಇದೇನಿದು ಬ್ರೆಂಟನ್ ವುಡ್ ಪಾಲಿಸಿ ? ಬಲಾಢ್ಯ ಜಿ–೭ ರಾಷ್ಟ್ರಗಳಾದ ಅಮೆರಿಕ, ಯು.ಕೆ., ಫ್ರಾನ್ಸ್, ಜಪಾನ್, ಜರ್ಮನಿ, ಕೆನಡಾ ಮತ್ತು ಇಟಲಿ ಹೀಗೆ ಒಟ್ಟು ೪೪ ದೇಶಗಳೊಡಗೂಡಿ ಅಮೆರಿಕಾದ ಬ್ರೆಂಟನ್ ವುಡ್‌ನಲ್ಲಿ ಸಭೆ ಸೇರಿದರು. ಅಂತರರಾಷ್ಟ್ರೀಯ ಮಟ್ಟದಲ್ಲಿ ಹಣದ ವಿನಿಮಯ ಮಾಡುವದಕ್ಕೆ ಕೆಲ ನಿಯಮಾವಳಿಗಳನ್ನು ರೂಪಿಸಿದರು. ಆ ಪ್ರಕಾರ ಜಗತ್ತಿನ ರಾಷ್ಟ್ರಗಳು ತಮ್ಮ ದೇಶದಲ್ಲಿ ಚಲಾವಣೆಯಲ್ಲಿರುವ ನಾಣ್ಯದ ಬೆಲೆಯನ್ನು ಅಮೆರಿಕದ ಡಾಲರ್ ಜತೆಗೆ ಅಲ್ಪಪ್ರಮಾಣದ ಬದಲಾವಣೆಯೊಂದಿಗೆ ಮತ್ತು ಸರಿಸಮ ಬಂಗಾರದ ಬೆಲೆಯೊಂದಿಗೆ ಹೊಂದಿಸಿಕೊಳ್ಳಲು ಒಪ್ಪಿಗೆ ಸೂಚಿಸಿದವು. ಈ ನಿರ್ಣಯ ಅನ್ಯ ದೇಶಗಳು ಡಾಲರ್ ಕರೆನ್ಸಿಯನ್ನು ಸಂಗ್ರಹಿಸಿಡಲು ಪ್ರಚೋದನೆಯಾಯಿತು. ಇದೂ ಅಲ್ಲದೆ ಅವಶ್ಯವಿದ್ದ ರಾಷ್ಟ್ರಗಳಿಗೆ, ಅವಶ್ಯವೆನಿಸಿದಾಗ ಧನಸಹಾಯ ಮತ್ತು ಸಾಲ ಒದಗಿಸಲು ಅಂತರರಾಷ್ಟ್ರೀಯ ವಿತ್ತೀಯ ಸಂಸ್ಥೆ (ಐ.ಎಂ.ಎಫ್.) ಸ್ಥಾಪನೆಯಾಯಿತು. ಅಮೆರಿಕದ ಈ ದೂರದೃಷ್ಟಿಯ ಜಾಣ ನಡೆಗೆ ಪ್ರಪಂಚದ ಬಡದೇಶಗಳೊಂದಿಗೆ ಭಾರತವೂ ಬಲಿಪಶುವಾಗಲು ವೇದಿಕೆ ಸಜ್ಜಾಯಿತು. ೧೯೫೦ರಲ್ಲಿ ರೂಪಾಯಿಯ ಬೆಲೆ ಅಮೆರಿಕದ ಒಂದು ಡಾಲರ್‌ಗೆ ೪.೭೯ ರೂಪಾಯಿಗೆ ನಿಗದಿಯಾಯಿತು. ಇದು ಸ್ಥಿರ ವಿನಿಮಯ ದರ ನೀತಿ. ಈ ಬೆಲೆ ೧೯೬೬ರವರೆಗೆ ಮುಂದುವರಿಯಿತು.

೧೯೫೬–೧೯೬೬ರ ನಡುವಿನ ಎರಡು ಪಂಚವಾರ್ಷಿಕ ಯೋಜನೆಗಳು ಕ್ಷಿಪ್ರ ಔದ್ಯಮಿಕ ಕ್ರಾಂತಿ ಮತ್ತು ಭಾರತವನ್ನು ಸ್ವಾವಲಂಬಿ ರಾಷ್ಟ್ರವನ್ನಾಗಿಸುವುದಕ್ಕಾಗಿ ವಿದ್ಯುತ್ ಉತ್ಪಾದನೆಯಂಥ ಮಹತ್ವಾಕಾಂಕ್ಷಿ ಯೋಜನೆಗಳನ್ನು ಅನುಷ್ಠಾನಗೊಳಿಸುವದಕ್ಕಾಗಿ ಭಾರೀ ಮೊತ್ತದ ವಿದೇಶಿ ಸಾಲ ಪಡೆಯಲು ಸರಕಾರ ಮುಂದಾಯಿತು. ಇಲ್ಲಿಯವರೆಗೆ ೧೧ ಪಂಚವಾರ್ಷಿಕ ಯೋಜನೆಗಳು ಮುಗಿದಿದ್ದರೂ ಪ್ರತಿ ಪಂಚವಾರ್ಷಿಕ ಯೋಜನೆಯ ಪ್ರಾರಂಭದಲ್ಲಿ ನಿಗದಿಪಡಿಸಿದ ಅಭಿವೃದ್ಧಿ ದರ ತಲುಪಲು ನಮ್ಮ ಸರಕಾರ ಯಶಸ್ವಿಯಾಗೇ ಇಲ್ಲ. ರಫ್ತು ಪ್ರಮಾಣದ ಅಂತರ ಹೆಚ್ಚಾಗಿ ಐ. ಎಂ. ಎಫ್. ಸಾಲ ಹಿಮಾಲಯದೆತ್ತರಕ್ಕೆ ಬೆಳೆಯಿತು.

ಒಂದು ದೇಶ ಅಭಿವೃದ್ಧಿ ಹೊಂದಿದ ರಾಷ್ಟ್ರ ಎಂದು ಕರೆಯಲು ಮಾನದಂಡಗಳೇನು ? ದೇಶದ ಸಂಪತ್ತು, ಪ್ರಜೆಗಳ ಆರ್ಥಿಕ ಪರಿಸ್ಥಿತಿ ಮತ್ತು ಅಂತರರಾಷ್ಟ್ರೀಯ ಮಟ್ಟದಲ್ಲಿ ನಮ್ಮ ದೇಶ ಎಲ್ಲಿ ಗುರುತಿಸಿಕೊಂಡಿದೆ ಎಂಬುದು. ಆಂತರಿಕ ಬೆಳವಣಿಗೆ ದರ (ಜಿಡಿಪಿ), ಸಾಲ ಪಡೆಯುವ ಮತ್ತು ಸಾಲ ಮರುಪಾವತಿಸುವ ಸಾಮರ್ಥ್ಯ, ಪ್ರತಿ ಪ್ರಜೆಯ ಸರಾಸರಿ ಆದಾಯ (ಪರ್ ಕ್ಯಾಪಿಟಾ ಇನ್‌ಕಮ್), ಅಂತರರಾಷ್ಟ್ರೀಯ ಮಟ್ಟದಲ್ಲಿ ಆಮದು ಮತ್ತು ರಫ್ತಿನ ಗಾತ್ರ, ವ್ಯಾಪಾರೋದ್ಯಮದಲ್ಲಿ ನಮ್ಮ ದೇಶದ ಪಾಲು ಮತ್ತು ಪ್ರಮುಖವಾಗಿ ರಾಷ್ಟ್ರದ

ಸುರಕ್ಷಿತತೆ ಹಾಗೂ ಸ್ವಾವಲಂಬನೆ ಇವೆಲ್ಲ ಒಂದು ದೇಶದ ಸಂಪತ್ತಿನ ಮಾನದಂಡಗಳು.

ಒಂದು ದೇಶದ ಆರ್ಥಿಕ ಅಭಿವೃದ್ಧಿ ದರ ಊರ್ಧ್ವಮುಖಿಯಾಗಿರಬೇಕಾದರೆ ಸ್ಥಿರ ಸರಕಾರ ಮತ್ತು ಅಷ್ಟೇ ಬಲಾಢ್ಯ ವಿರೋಧ ಪಕ್ಷವಿರಬೇಕು ಎಂಬುದು ರಾಜಕೀಯ ಪಂಡಿತರ ಅಭಿಪ್ರಾಯ. ಇದನ್ನು ತಿಳಿದೋ ತಿಳಿಯದೆಯೋ ಸ್ವಾತಂತ್ರ್ಯೋತ್ತರ ಭಾರತದಲ್ಲಿ ಸುಮಾರು ಎರಡು ದಶಕಗಳವರೆಗೆ ಒಂದೇ ಪಕ್ಷವನ್ನು ದೇಶದ ಪ್ರಜೆಗಳು ಅಧಿಕಾರ ದಲ್ಲಿಟ್ಟರು. ಈ ಅವಧಿಯಲ್ಲಿ ಎರಡನೇ ಪಂಚವಾರ್ಷಿಕ ಯೋಜನೆಯ ಪರಿಣಾಮ ೪.೨೭ರ ಆರ್ಥಿಕ ಬೆಳವಣಿಗೆ, ೩೦% ಬೆಲೆ ಏರಿಕೆ, ೩ನೇ ಪಂಚವಾರ್ಷಿಕ ಅವಧಿಯಲ್ಲಿ ಆರ್ಥಿಕ ಬೆಳವಣಿಗೆ ದರವನ್ನು ೨.೮೪ಕ್ಕೆ ಇಳಿಸಿದ್ದು, ೧೯೬೯–೭೪ರ ನಾಲ್ಕನೇ ಪಂಚವಾರ್ಷಿಕ ಯೋಜನಾವಧಿಯಲ್ಲಿ ಆರ್ಥಿಕ ಬೆಳವಣಿಗೆ ದರ ೩.೩ಕ್ಕೆ ಅಲ್ಪ ಚೇತರಿಕೆ ಯಾಗಿದ್ದು, ೫ನೇ ಪಂಚವಾರ್ಷಿಕ ಯೋಜನಾವಧಿಯಲ್ಲಿ 'ಗರೀಬೀ ಹಟಾವೋ' ಘೋಷಣೆ ಮಾಡಿದ್ದು. ರೂಪಾಯಿ ಅಪಮೌಲ್ಯ ಮಾಡಿ ಒಂದು ಡಾಲರಿಗೆ ೭.೮೬ ರೂಪಾಯಿಗೆ ಏರಿಸಿದ್ದು ಮತ್ತು ೩.೮ ಆರ್ಥಿಕ ಬೆಳವಣಿಗೆ ದರ ಸಾಧಿಸಿದ್ದು ಇವೆಲ್ಲ ಸ್ಥಿರ ಮತ್ತು ಸುಭದ್ರ ಸರಕಾರದ ಸಾಧನೆಗಳು. ಇದೆಲ್ಲದರ ಪರಿಣಾಮ ಒಂದು ವರ್ಷ ಮೊದಲೇ ಸಾರ್ವತ್ರಿಕ ಚುಣಾವಣೆ ಘೋಷಣೆ. ಸಮಾನ ಮನಸ್ಕ ರಾಜಕಾರಣಿಗಳು ಜನತಾ ಪಾರ್ಟಿ ಸಂಘಟಿಸಿ ಕೇವಲ ಎರಡು ವರ್ಷ ಅಧಿಕಾರ ನಡೆಸಿದ್ದು ಇತಿಹಾಸ. ಅಷ್ಟೊತ್ತಿಗೆ ರಾಜಕಾರಣದಲ್ಲಿದ್ದ ಕೆಲವರು ಅಗಾಧ ಅನುಭವ ಪಡೆದ ಚತುರ ರಾಜಕಾರಣಿಗಳ ವೇಷ ಧರಿಸಿದ ಮತ್ತು ಅಪಾರ ಧನ ಲೂಟಿ ಮಾಡಿ ತಮ್ಮ ಖಜಾನೆ ತುಂಬಿಸಿಟ್ಟುಕೊಂಡ ಧಣಿಗಳಾಗಿ ಬೆಳೆದಿದ್ದರು. ಬೆರಳೆಣಿಕೆಯ ಹಿಂಬಾಲಕರ ಬೆನ್ನೇರಿ ಕುಳಿತು ಚಿಕ್ಕ ಚಿಕ್ಕ ಪ್ರಾದೇಶಿಕ ಮತ್ತು ಕಲ್ಪಿತ ರಾಷ್ಟ್ರೀಯ ಪಕ್ಷಗಳನ್ನು ಹುಟ್ಟುಹಾಕ ತೊಡಗಿದರು. ದೇಶದಲ್ಲಿ ರಾಜಕೀಯ ಅಸ್ಥಿರತೆಯ ಪರ್ವ ಪ್ರಾರಂಭವಾಯಿತು. ದೇಶದ ಸಾಲದ ಹೊರೆ ಭಾರವಾಗುತ್ತ ಹೋಯಿತು. ರೂಪಾಯಿ ಕ್ರಮೇಣ ಸೊರಗುತ್ತ ಈಗ ಒಂದು ಡಾಲರ್‌ಗೆ ೬೮ ರೂಪಾಯಿಯ ದಾಖಲೆ ಅಪಮೌಲ್ಯದ ಮಟ್ಟ ತಲುಪಿದೆ.

೧೯೭೫ರಲ್ಲಿ ರೂಪಾಯಿ ಬ್ರಿಟನ್ ಕರೆನ್ಸಿಯೊಂದಿಗಿನ ಸಂಬಂಧ ಕಡಿದುಕೊಂಡು ನೇರವಾಗಿ ಅಮೆರಿಕದ ಡಾಲರ್‌ದೊಂದಿಗೆ ೮.೩೯ ರೂಪಾಯಿಗೆ ಸ್ಥಿರ ವಿನಿಮಯ ದರ ನಿಗದಿಮಾಡಿ ಮತ್ತೊಮ್ಮೆ ಸೊರಗಿತು. ೧೯೫೦ ರಿಂದ ೧೯೬೬ರವರೆಗೆ ಇದ್ದ ಸ್ಥಿರ ವಿನಿಮಯ ದರ ಒಂದು ರೀತಿಯಲ್ಲಿ ರೂಪಾಯಿಯ ಅಪಮೌಲ್ಯಕ್ಕೆ ಅಪರೋಕ್ಷವಾಗಿ ಪುಷ್ಟಿ ನೀಡಿತು. ವಿನಿಮಯ ದರ ಸ್ಥಿರವಾಗಿದ್ದಾಗ ಸರಕಾರ ಹಾಗೂ ಖಾಸಗಿ ಉದ್ಯಮಿಗಳು ಕಡಿಮೆ ರೂಪಾಯಿ ಕೊಟ್ಟು ಆಮದು ಹೆಚ್ಚಾಗಲು ಅನುವು ಮಾಡಿಕೊಡುತ್ತವೆ. ದೇಶದಲ್ಲಿ ಹಣದುಬ್ಬರ ಹೆಚ್ಚಾಗಿ ಸರಕುಗಳ ಬೆಲೆಏರಿಕೆಯಾಗುತ್ತದೆ. ಡಾಲರಿಗೆ ಬೇಡಿಕೆ ಹೆಚ್ಚಾಗುತ್ತದೆ. ಅಪರೋಕ್ಷವಾಗಿ ರೂಪಾಯಿ ಸೊರಗುತ್ತ ಹೋಗುತ್ತದೆ. ೧೯೬೫–೬೬ರ ಬರಗಾಲ ನೇರ ಹೊಣೆಯಾಗದಿದ್ದರೂ ರಾಜಕಾರಣಿ ಗಳಿಗೆ ಭಾಷಣದ ಆಹಾರವಾಯಿತು. ಈ ಅಪಾಯಕಾರಿ ಪ್ರಕ್ರಿಯೆಯಿಂದಾಗಿ ವಿದೇಶಿ ವಿನಿಮಯಕ್ಕಾಗಿ ಮೀಸಲಿಟ್ಟ ಭಂಡಾರ ಬರಿದಾಯಿತು. ಸಾಲ ಹಿಂತಿರುಗಿಸುವ ಸಾಮರ್ಥ್ಯ ಕಡಿಮೆಯಾಯಿತು. ವಿದೇಶಿ ನೆರವು ನಿಂತಿತು. ಆಳುವವರ ನಿದ್ದೆಗೆಟ್ಟು ಚಿಂತೆ ಹೆಚ್ಚಾಯಿತು. ಸ್ಥಿರ ವಿನಿಮಯ ದರ ನೀತಿಯ ಬದಲಾಗಿ ನಿರ್ಬಂಧಿತ ಆಮದು–ರಫ್ತು ನೀತಿಯನ್ನು ಜಾರಿಗೆ ತಂದು ಅವಶ್ಯವೆನಿಸಿದಾಗ ವಿನಿಮಯ ದರ ಬದಲಾವಣೆಗೆ ಅವಕಾಶವಿರುವ ಫ್ಲೋಟಿಂಗ್ ವಿನಿಮಯ ದರ ನೀತಿ ತಂದು ಮತ್ತೊಂದು ಅಪಾಯಕಾರಿ ಪ್ರಯೋಗಕ್ಕೆ ಸರಕಾರ ನಾಂದಿ ಹಾಡಿತು. ಪರಿಣಾಮ ೧೯೮೦ರಲ್ಲಿ ಡಾಲರ್ ಬೆಲೆ ೧೨.೩೬ಕ್ಕೆ ಏರಿದ್ದು ಮತ್ತೆ ಹಿಂತಿರುಗಿ ನೋಡದೆ ೧೯೯೦ರವರೆಗೆ ಊರ್ಧ್ವಮುಖಿಯಾಗಿಯೇ ಮುನ್ನಡೆಯುತ್ತ ಅಂತರ ರಾಷ್ಟ್ರೀಯ ಮಾರುಕಟ್ಟೆಯಲ್ಲಿ ಬಲಹೀನವಾಗುತ್ತಲೇ ಸೊರಗಿ ಒಂದು ಡಾಲರ್ ಬೆಲೆ ೧೭.೫ ರೂಪಾಯಿಗೆ ತಲುಪಿತು. ಆದರೂ ಕೆಲವು ರಾಜಕಾರಣಿಗಳು ಮತ್ತು ಅಧಿಕಾರಿಗಳು ಶ್ರೀಮಂತರಾಗುವದು ಮಾತ್ರ ನಿಲ್ಲಲಿಲ್ಲ.




ಭಾರತೀಯ ರೂಪಾಯಿಗೆ ೧೯೯೧ರಲ್ಲಿ ತೀವ್ರ ಆಘಾತವಾಯಿತು. ಆ ವರ್ಷ ಭಾರತ ಸರಕಾರ 'ಎಕಾನಾಮಿಕ್ ರಿಫಾರ್ಮ್ಸ್' ಅಂದರೆ ದೇಶದ ಆರ್ಥಿಕ ನೀತಿಯಲ್ಲಿ ಆಮೂಲಾಗ್ರ ಬದಲಾವಣೆ ತರಲು ನಿರ್ಧರಿಸಿತ್ತು. ಪಾಪ, ಇದನ್ನು ಬಿಟ್ಟರೆ ರಾಜಕಾರಣಿಗಳಿಗೆ ಬೇರೆ ಎಲ್ಲ ಬಾಗಿಲುಗಳು ಆಗಲೇ ಮುಚ್ಚಿಕೊಂಡಿದ್ದವು. ದೂರಗ್ರಾಹಿ ಚೀನಾ ೧೯೭೭ರಲ್ಲಿಯೇ ಜಾಗತೀಕರಣ ಒಪ್ಪಿ ದುಡಿಯುವ ಕೈಗಳಿಗೆ ಕೆಲಸ ಕೊಟ್ಟು, ಸಣ್ಣ ಕೈಗಾರಿಕೆಗಳನ್ನು ಪ್ರೋತ್ಸಾಹಿಸಿ, ಆಮದಿಗಿಂತ ರಫ್ತು ಹೆಚ್ಚಿಸಿ ದೇಶದ ಆರ್ಥಿಕ ಬೆಳವಣಿಗೆ ದರವನ್ನು ೧೯೮೦ರಲ್ಲಿಯೇ ೭.೮ರ ಮಟ್ಟಕ್ಕೆ ತಲುಪಿಸಲು ಸಾಧ್ಯವಾಗಿತ್ತು. ನಂತರದ ವರ್ಷಗಳಲ್ಲಿ ಎರಡು ಅಂಕಿಯ ಬೆಳವಣಿಗೆ ದರ ಅಭಿವೃದ್ಧಿಶೀಲ ರಾಷ್ಟ್ರಗಳ ಪಟ್ಟಿಯಲ್ಲಿ ಚೀನಾ ಮೇಲೇರಲು ಸಹಾಯಕಾರಿಯಾಯಿತು. ಅಲ್ಲಿಯ ವರೆಗೆ ಮಲಗಿದ್ದ ಭಾರತ ೧೯೯೧ರಲ್ಲಿ ರಿಫಾರ್ಮ್ಸ್ ನೆಪದಲ್ಲಿ ಜಾಗತೀಕರಣ, ಮುಕ್ತ ವಾಣಿಜ್ಯ ವ್ಯವಹಾರ ಅಲ್ಲದೇ ವಿದೇಶೀ ರಾಷ್ಟ್ರಗಳ ಒತ್ತಡಕ್ಕೆ ಮಣಿದು ವಿದೇಶೀ ವಿನಿಮಯ ದರವನ್ನು ಆಂತರಿಕ ಮಾರುಕಟ್ಟೆಯ ಬೆಲೆಯೊಂದಿಗೆ ನಿಗದಿಪಡಿಸು ವದಕ್ಕೂ ಒಪ್ಪಿಕೊಳ್ಳಬೇಕಾಯಿತು. ಹಿಮಾಲಯದೆತ್ತರಕ್ಕೆ ಬೆಳೆದ ಡಾಲರ್ ರೂಪ ದಲ್ಲಿಯೇ ಹಿಂತಿರುಗಿಸಬೇಕಾದ ಸಾಲ, ಬರಿದಾದ ರಾಜಸ್ವನಿಧಿ, ಅನಿಯಂತ್ರಿತ ಬೆಲೆ ಏರಿಕೆ. ಇಷ್ಟಾದರೂ ಬಡವರ ಹೊಟ್ಟೆಗೆ ಹೊಡೆದು ಶ್ರೀಮಂತರಾಗಬೇಕೆಂಬ ಭ್ರಷ್ಟರ ಬಳಗ ಈ ಎಲ್ಲ ಕಾರಣಗಳಿಂದಾಗಿ ಹೃದಯಾಘಾತಕ್ಕೊಳಗಾದ ರೂಪಾಯಿಯ ಆರೋಗ್ಯ ಚೇತರಿಸಿಕೊಳ್ಳಲು ಅಸಾಧ್ಯವಾಯಿತು.

'ಯಥಾ ರಾಜಾ ತಥಾ ಪ್ರಜಾ' ಇದು ಸ್ವಾತಂತ್ರ್ಯಪೂರ್ವದ ಅವಧಿಯಲ್ಲಿ ಒಪ್ಪುವ ಮಾತು. ಆದರೆ ಭಾರತ ಪ್ರಜಾಪ್ರಭುತ್ವ ಗಣರಾಜ್ಯವಾದ ಮೇಲೆ ಇದನ್ನು ಬದಲಾಯಿಸಿ 'ಯಥಾ ಪ್ರಜಾ ತಥಾ ರಾಜಾ' ಅಲ್ಲಲ್ಲ ರಾಜಕಾರಣಿಗಳು ಎಂದಾಗಬೇಕಲ್ಲವೆ ? ಪ್ರಜಾಪ್ರಭುತ್ವ ಅಂದರೆ ಪ್ರಜೆಗಳೇ ಪ್ರಭುಗಳು, ಪ್ರಜೆಗಳನ್ನಾಳುವವರು, ಸರಕಾರಿ ಅಧಿಕಾರಿಗಳು ಅವರ ಸೇವಕರು. ಇದು ೬೬ ವರ್ಷಗಳಾದರೂ ಜನರಿಗೆ ಅರ್ಥವಾಗ ದಿದ್ದರೆ ತಪ್ಪು ಯಾರದು ? ಇದು ಅರ್ಥವಾಗುವದೂ ರಾಜಕಾರಣಿಗಳಿಗೆ ಬೇಕಾಗಿದ್ದಿಲ್ಲ. ಅದಕ್ಕೆಂತಲೇ ಶಿಕ್ಷಣಕ್ಕೆ ಒತ್ತು ನೀಡಿಲ್ಲ. ಆರು ದಶಕಗಳಾದರೂ ಉಚಿತ ಮತ್ತು ಕಡ್ಡಾಯ ಶಿಕ್ಷಣ ಯೋಜನೆ ಪರಿಣಾಮಕಾರಿಯಾಗಿ ಜಾರಿಯಾಗಿಲ್ಲ.

ಸ್ವಾತಂತ್ರ್ಯ ಬಂತೆಂದು ೧೯೪೭ರಲ್ಲಿ ೩೪.೫ ಕೋಟಿ ಇದ್ದ ಜನಸಂಖ್ಯೆಯನ್ನು ೧೨೪ ಕೋಟಿಗೆ ತಲುಪಿಸಿದ್ದೇ ಸ್ವತಂತ್ರ ಭಾರತದ ಪ್ರಜೆಗಳ ಕೊಡುಗೆ ಎಂದು ಒಪ್ಪಿಕೊಳ್ಳಲಾದೀತೆ ? ಜನಸಂಖ್ಯೆಯ ಹೆಚ್ಚಳವೇ ಇಂದಿನ ದೇಶದ ಆರ್ಥಿಕ ಹಿಂಜರಿತಕ್ಕೆ ಕಾರಣ ಎಂಬುದಾಗಿ ಒಪ್ಪಲೂ ಸಾಧ್ಯವಿಲ್ಲ. ಯಾಕೆಂದರೆ ನಮಗಿಂತ ಸದ್ಯಕ್ಕೆ ಹೆಚ್ಚು ಜನಸಂಖ್ಯೆಯುಳ್ಳ ನೆರೆರಾಷ್ಟ್ರ ಚೀನಾದಲ್ಲಿ ಅಭಿವೃದ್ಧಿಯ ಪರ್ವ ಚಾಲ್ತಿಯಲ್ಲಿದೆಯಲ್ಲವೆ ? ಹಾಗಾದರೆ ತಪ್ಪಿದ್ದೆಲ್ಲಿ ? ಚೀನಾದಲ್ಲಿ ಆಳುವವರು ಪ್ರಜೆಗಳ ಕೈಗೆ ಕೆಲಸ ಕೊಟ್ಟರು, ಭಾರತದಲ್ಲಿ ಚುನಾವಣೆ ಬಂದಾಗೊಮ್ಮೆ ಬಡವರ ಹೆಸರಿನಲ್ಲಿ ಸಬ್ಸಿಡಿ, ಪುಕ್ಕಟೆ ಆಹಾರ, ವಿಧವಾವೇತನ, ವೃದ್ಧಾಪ್ಯ ವೇತನ, ಸೈಕಲ್, ಅನ್ನಭಾಗ್ಯ, ಭಾಗ್ಯಜ್ಯೋತಿ, ಸಾಲಮನ್ನಾ, ಕ್ಷೀರಭಾಗ್ಯ, ಹೀಗೆ ಎಲ್ಲಾ ತರಹದ ಭಾಗ್ಯದ ಯೋಜನೆಗಳನ್ನು ಮಾಧ್ಯಮಗಳಲ್ಲಿ ಜಾಹೀರಾತು ಕೊಟ್ಟು, ಇದರಲ್ಲಿಯೂ ಬಹುಪಾಲು ತಿಂದು, ಚುನಾವಣೆಗೆ ಆರಿಸಿ ಬಂದು ಮುಂದಿನ ಅವಧಿಯನ್ನು ಹಣ ಗಳಿಸಲು ಉಪಯೋಗಿಸಿಕೊಂಡರು.

ದೇಶದಲ್ಲಿಯ ಭ್ರಷ್ಟಾಚಾರ ಆರ್ಥಿಕ ಬೆಳವಣಿಗೆಗೆ ಮಹಾಮಾರಿಯಾಗಿ ಕಾಡುತ್ತಿದೆ. ರಾಜ್ಯ ಹಾಗೂ ರಾಷ್ಟ್ರ ಮಟ್ಟದಲ್ಲಿ ಭೂಸ್ವಾಧೀನ, ಗಣಿ, ಆಹಾರ ವಿತರಣೆ, ೨–ಜಿ, ಏಶಿಯನ್ ಗೇಮ್ಸ್ ಹಗರಣ, ಉದ್ಯೋಗ ಖಾತ್ರಿ ಯೋಜನೆ, ಶಿಶು ಅಭಿವೃದ್ಧಿ, ಮಹಿಳಾ ಕಲ್ಯಾಣ, ಮಹಿಳಾ ಸಬಲೀಕರಣ ಹೀಗೆ ಹಗರಣಗಳ ಪಟ್ಟಿ ಬೆಳೆಯುತ್ತಲೇ ಹೋಗುತ್ತದೆ. ಹಗರಣದ ಗಾತ್ರವೆಷ್ಟೇ ಇರಲಿ, ಒಂದು ವಿಚಾರಣಾ ಸಮಿತಿಯನ್ನು ನೇಮಿಸಿದರೆ ಸರಕಾರದ ಕೆಲಸ ಮುಗಿಯಿತು. ಎಲ್ಲಿಯವರೆಗೆ ಲಂಚ ಕೊಡುವವರಿರುತ್ತಾರೋ ಅಲ್ಲಿಯವರೆಗೆ ಲಂಚ ಪಡೆಯುವವರಿರುತ್ತಾರೆ. ಭಾರತ 'ಕಾಯಕವೇ ಕೈಲಾಸ,' 'ಧನವ ಗಳಿಸಬೇಕೆಂತಾದ್ದು, ಅದು ಕಣ್ಣಿಗೆ ಕಾಣಿಸದಂತಾದ್ದು' ಎಂದು ಸಾರಿದ ಸಂತರ ನಾಡು, ಶ್ರೇಷ್ಠ ಪರಂಪರೆಗಳ ಬೀಡು. ಅಂಥ ಬಲಿಷ್ಠ, ಶ್ರೀಮಂತ ದೇಶವನ್ನು ಪುನರ್ ಪ್ರತಿಷ್ಠಾಪಿಸಲು ಅದೆಷ್ಟು ಅಬ್ದುಲ್ ಕಲಾಮ್, ಅಣ್ಣಾ ಹಜಾರೆಯಂಥವರು ಹುಟ್ಟಿಬಂದು 'ಭ್ರಷ್ಟಾಚಾರ ನಿರ್ಮೂಲನಾ ಕ್ರಾಂತಿ'ಯಾಗಬೇಕೇನೋ...

**ಪ್ರೊ॥ ಆರ್. ಪಿ. ಪುನಗಿನ**
ನಂ. ೮೩, "ಸರಸ್ವತಿ", ಮಹಾವೀರನಗರ, ಉದ್ಯಮಬಾಘ್
ಬೆಳಗಾವಿ – ೫೯೦ ೦೦೮



# ಆಫ್ಘಾನಿಸ್ತಾನಕ್ಕೆ ಮರುಜೀವ ತುಂಬುವುದು ನಮ್ಮ ಕಾಯಕ

- ಸಮೀರ್ ಚಟರ್ಜಿ

**ಭಾ**ರತೀಯ ಸಂಗೀತದಲ್ಲಿ ಮನರಂಜನೆಯ ವಿಷಯಕ್ಕೆ ಬಂದರೆ, ಅದೊಂದು ಮನಃಪೂರ್ವಕವಾಗಿ ಜನತೆಗೆ ನೀಡುವ "ಅರ್ಪಣೆ" ಎಂದು ನಂಬಿರುವ ಪಂಡಿತ್ ಸಮೀರ್ ಚಟರ್ಜಿ ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಖ್ಯಾತಿ ಗಳಿಸಿರುವ ಅತ್ಯಂತ ಪ್ರತಿಭಾವಂತ ತಬಲಾ ವಾದಕ. ೨೦೦೭ರಲ್ಲಿ ನಾರ್ವೆಯ ರಾಜಧಾನಿ ಓಸ್ಲೋದಲ್ಲಿ ಜರುಗಿದ ನೊಬೆಲ್ ಪ್ರಶಸ್ತಿ ವಿತರಣೆ ಸಮಾರಂಭದಲ್ಲಿ, ಅಂತೆಯೇ ವಿಶ್ವಸಂಸ್ಥೆಯ ಜನರಲ್ ಅಸೆಂಬ್ಲಿ ಸಭೆಯಲ್ಲಿ ಜರುಗಿದ ಸಂಗೀತ ಕಛೇರಿಯಲ್ಲಿ ತಬಲ ನುಡಿಸಿರುವ ಹೆಗ್ಗಳಿಕೆ ಸಮೀರ್ ಅವರದು.

ಭಾರತದ ಪ್ರಖ್ಯಾತ ಸಂಗೀತಗಾರರಾದ ರವಿಶಂಕರ್, ವಿಲಾಯತ್ ಖಾನ್, ಭೀಮಸೇನ್ ಜೋಶಿ, ಜಸರಾಜ್, ನಿಖಿಲ್ ಬ್ಯಾನರ್ಜಿ, ಹರಿಪ್ರಸಾದ್ ಚೌರಾಸಿಯ, ಎಮ್. ಎಸ್. ಗೋಪಾಲಕೃಷ್ಣನ್ ಹೀಗೆ ಅನೇಕ ವಿದ್ವಾಂಸರೊಂದಿಗೆ ನುಡಿಸಿ ಅವರ ಕಛೇರಿಗಳಿಗೆ ಮೆರುಗು ನೀಡಿರುವ ಸಮೀರ್ ಚಟರ್ಜಿ ಅವರ ಸಾಧನೆಗಳು ಮಹತ್ವಪೂರ್ಣವಾದುವು.

ಅಮೆರಿಕಾದ ನ್ಯೂ ಜೆರ್ಸಿ ಪ್ರಾಂತ್ಯದಲ್ಲಿ ವಾಸವಾಗಿರುವ ಸಮೀರ್ ತಮ್ಮದೇ ಆದ ಹಲವಾರು ಕೃತಿಗಳನ್ನು ರಚಿಸಿರುವುದರ ಜೊತೆಗೆ ಪಾಶ್ಚಾತ್ಯ ಸಂಗೀತ ದಿಗ್ಗಜರಾದ ಪಾಲಿನ್ ಆಲಿವೆರೋಸ್, ರವಿ ಕೋಲ್ಟ್ರೇನ್, ಡೇವ್ ಡಗ್ಲಸ್ ಅವರೇ ಅಲ್ಲದೆ ಜಾಝ್ ಸಂಗೀತಗಾರರೊಡನೆಯೂ ಕಛೇರಿಗಳಲ್ಲಿ ಭಾಗವಹಿಸಿ, ಒಂದರ್ಥದಲ್ಲಿ ಭಾರತೀಯ ಮತ್ತು ಪಾಶ್ಚಾತ್ಯ ಸಂಗೀತ ಪರಂಪರೆಗಳ ನಡುವೆ ಸೇತುವೆಯಾಗಿ ತಮ್ಮದೇ ಕಾಯಕದಲ್ಲಿ ತೊಡಗಿರುವ ಅಪ್ರತಿಮ ಕಲಾವಿದ.

ಭಾರತೀಯ ಸಂಗೀತದ ಶ್ರೀಮಂತ ಪರಂಪರೆಯನ್ನು ವಿವಿಧೆಡೆ ಜನಪ್ರಿಯಗೊಳಿಸುವ ದಿಶೆಯಲ್ಲಿ 'ಚಂದ್ರಯಾನ್' ಎಂಬ ಸಂಸ್ಥೆಯನ್ನು ಹುಟ್ಟುಹಾಕಿ ಅದರ ನಿರ್ದೇಶಕರಾಗಿ ಇಂದಿಗೂ ಅವಿರತವಾಗಿ ದುಡಿಯುತ್ತಿದ್ದಾರೆ ಸಮೀರ್ ಚಟರ್ಜಿ.

ಮಾ-ಲೆ ಪ್ರಕಾಶನದ ಆಶ್ರಯದಲ್ಲಿ ಪಂ॥ ಸಮೀರ್ ಚಟರ್ಜಿಯವರು ಜನವರಿ ೧೯ರಂದು ದೇವಿಪ್ರಸಾದ ಚಟ್ಟೋಪಾಧ್ಯಾಯ ಸ್ಮಾರಕ ಕಾರ್ಯಕ್ರಮದಲ್ಲಿ ಭಾಗವಹಿಸಿ ಆಫ್ಘಾನಿಸ್ತಾನದ ಸ್ಥಿತಿ-ಗತಿ ಹಾಗೂ ಅಲ್ಲಿ ಸಂಗೀತದ ಪರಂಪರೆಯನ್ನು ಮುಂದುವರಿಸಲು ಕೈಗೊಳ್ಳಲಾಗಿರುವ ಕ್ರಮಗಳ ಬಗ್ಗೆ ಉಪಯುಕ್ತವಾದ ಉಪನ್ಯಾಸ ನೀಡಿದರು. ನಂತರ ಡಾ॥ ನಾಗರಾಜರಾವ್ ಹವಾಲ್ದಾರ್ ಅವರು ಮಧುರವಾಗಿ ಒಂದು ಗಂಟೆ ಕಾಲ ಗಾಯನ ಕಾರ್ಯಕ್ರಮ ನಡೆಸಿಕೊಟ್ಟರು. ಅವರಿಗೆ ಅಂದಿನ ತಬಲಾ ಸಾಥ್ ನೀಡಿದವರು ಪಂ॥ ಸಮೀರ್ ಚಟರ್ಜಿ. ಚಟರ್ಜಿಯವರ ಉಪನ್ಯಾಸದ ಸಾರವನ್ನಿಲ್ಲಿ ಪ್ರಸ್ತುತಪಡಿಸಲಾಗಿದೆ. ಅದನ್ನು ಸಿದ್ಧಗೊಳಿಸಿಕೊಟ್ಟಿದ್ದಾರೆ ಶ್ರೀ. ವಿನಾಯಕ ಕುಲಕರ್ಣಿ.

**ಎ**ಲ್ಲರಿಗೂ ನಮಸ್ಕಾರ. ಪ್ರೊಫೆಸರ್ ರಾಮಕೃಷ್ಣ ಮತ್ತು ಶ್ರೀ ಕುಲಕರ್ಣಿ ಅವರು ನನ್ನ ಬಗ್ಗೆ ನೀಡಿದ ಮಾಹಿತಿಗೆ ನನ್ನ ಹೃತ್ಪೂರ್ವಕ ಅಭಿನಂದನೆಗಳು. ನಾನೇನೂ ಅಂತಹ ವಿಶೇಷವಾದಂತಹ ವ್ಯಕ್ತಿಯಲ್ಲ. ನನ್ನ ಜೀವನದಲ್ಲಿ ಏನೇ ನಡೆದಿದ್ದರೂ ಅದು ಸ್ವಾಭಾವಿಕವಾಗಿಯೇ ನಡೆದಿದೆ. ಆಫ್ಘಾನಿಸ್ತಾನದಲ್ಲಿ ನಡೆಯುತ್ತಿರುವ ಪ್ರತಿಯೊಂದು ಅವಘಡಗಳಿಗೆ ನಾನು ಒಬ್ಬ ಅತ್ಯಂತ ಸಮೀಪದ ಪ್ರೇಕ್ಷಕನಾಗಿದ್ದದ್ದು ನಿಜವಾಗಲೂ ನನ್ನ ಭಾಗ್ಯ. ನಾನು ಆಫ್ಘಾನಿಸ್ತಾನಕ್ಕೆ ಹೋಗುವುದಕ್ಕೆ ಬಹಳ ಮುಂಚೆಯೇ ಬೀಜ ಬಿತ್ತಿದವಳು ನನ್ನ ತಾಯಿ. ನಾನು ಅವಳ ಆರೈಕೆಯಲ್ಲಿ ಬೆಳೆಯುತ್ತಿರುವಾಗ ಆಗಾಗ ನನಗೆ ಈ ರೀತಿ ಹೇಳುತ್ತಿದ್ದಳು: "ಜನ ತಮಗೋಸ್ಕರ ಮಾತ್ರ ಬದುಕುವುದನ್ನು ನೋಡಿದರೆ ಬಹಳ ವಿಷಾದವಾಗುತ್ತದೆ. ನೀನು ಬೇರೆಯವರಿಗಾಗಿ ಬದುಕಬೇಕು ಎನ್ನುವುದು ನನ್ನ ಅಭಿಲಾಷೆ." – ನನ್ನ ಮೊದಲ ಭೇಟಿಯ ನಂತರದ ಕೆಲವೇ ದಿವಸಗಳಲ್ಲಿ ಅವಳು ಮರಣಶಯ್ಯೆಯಲ್ಲಿದ್ದಾಗ ನಾನು ಆಕೆಯನ್ನು ನೋಡಿದಾಗ ನನ್ನನ್ನು ನೋಡಿ ಆಕೆಗೆ ಬಹಳ ಸಂತೋಷವಾಯಿತು. ನನ್ನ ಮೊದಲ ಭೇಟಿ ಜೂನ್ ೨೦೦೮ ಆಗಿದ್ದರಿಂದ ನಾನು ಆಕೆಯನ್ನು ಆಗಸ್ಟ್ ತಿಂಗಳಲ್ಲಿ ನೋಡಿದೆ. ನವೆಂಬರ್ ತಿಂಗಳಲ್ಲಿ ಆಕೆ ಇಹಲೋಕವನ್ನು ತ್ಯಜಿಸಿದಳು.

ನನಗೆ ಸಂಸಾರದ ತೊಂದರೆಗಳು ಇದ್ದರೂ ಕೂಡ, ಏನು ಮಾಡುತ್ತಿದ್ದೇನೆ ಎನ್ನುವುದರ ಅರಿವಾಗುವುದಕ್ಕೆ ಮುನ್ನವೇ ನಾನು ಆಫ್ಘಾನಿಸ್ತಾನದಲ್ಲಿದ್ದೆ. ೨೦೦೭ರ ಆ ಚಳಿಗಾಲದಲ್ಲಿ ನಾನು ಒಂದು ವಿಶೇಷವಾದ ವಾತಾವರಣದಲ್ಲಿದ್ದೆ. ನಾನು ನೊಬೆಲ್ ಶಾಂತಿ ಪುರಸ್ಕಾರ ಸಮಾರಂಭದ ಸಂಗೀತ ಸಭೆಯಲ್ಲಿ ಪಾಲ್ಗೊಂಡಿದ್ದೆ. ಆ ದಿನ ಅಲ್ಲಿ ಐಪಿಸಿಸಿ ಹಾಗೂ ಅಲ್ ಗೋರೆ ಅವರುಗಳಿಗೆ ಭೌಗೋಳಿಕ ತಾಪಮಾನದ ನಿಯಂತ್ರಣದ ಕೊಡುಗೆಗಾಗಿ ಪುರಸ್ಕಾರ ನೀಡಲಾಗುತ್ತಿತ್ತು. ಅದು ಅವಿಸ್ಮರಣೀಯವಾಗಿತ್ತು. ಅಲ್ಲಿ ಅನೇಕ ಆದರಣೀಯರು ಆಮಂತ್ರಿತರಾಗಿದ್ದಾಗ್ಯೂ, ಸಂಗೀತ ಸಭೆಯಲ್ಲಿ ಪಾಲ್ಗೊಂಡಿದ್ದ ಸಂಗೀತಗಾರರೆಲ್ಲಾ ಒಂದೇ ಕುಟುಂಬದ ತರಹ ಇದ್ದೆವು. ಅವರಲ್ಲಿ ಸಾಕಷ್ಟು ಜನರಿಗೆ ಬೆಂಗಾವಲಿನವರಿದ್ದರು. ಅವರುಗಳು ಅಷ್ಟು ಪ್ರತಿಷ್ಠಿತರಾಗಿದ್ದರು. ಇಷ್ಟೆಲ್ಲಾ ಇದ್ದರೂ ಅವರೆಲ್ಲ ಒಂದು ಉತ್ತಮ ಕಾರ್ಯಕ್ಕಾಗಿ ಒಂದುಗೂಡಬೇಕಾಗಿತ್ತು. ಇಲ್ಲಿಂದ ನನ್ನ ಯಾನ ಪ್ರಾರಂಭವಾಯಿತು. ಅಲ್ಲಿಂದ ಕ್ಯಾನ್ಸರ್‌ನಿಂದ ಸಾಯುವವಳಿದ್ದ ನನ್ನ ಸೋದರಿಯನ್ನು ನೋಡಲು ನಾನು ಕಲಕತ್ತೆಗೆ ಬಂದೆ. ನಾನು ಅಲ್ಲಿದ್ದಾಗ ಆಕೆ ಸಾಕಷ್ಟು ಚೇತರಿಸಿಕೊಂಡಳು, ಆದರೆ ಯುಎಸ್‌ನಲ್ಲಿ ನನಗೆ ಸಾಕಷ್ಟು ನಿಗದಿತ ಕಾರ್ಯಗಳಿಂದಾಗಿ ನಾನು ಅಲ್ಲಿಂದ ಹೊರಡಬೇಕಾಯಿತು. ನನ್ನ ಸೋದರಿ, ಇದು ಅವಳ ಪಯಣ ಕೂಡ ಎಂದು ನನಗೆ ತಿಳಿಯುವಂತೆ ಮಾಡಿದಳು. ಮುಂದಿನ ಏಳು ದಿನಗಳಲ್ಲಿ ಅದು ಆಗೇಹೋಯಿತು. ನಾನು ನನ್ನ ನ್ಯೂಜೆರ್ಸಿ ಆಫೀಸಿನಲ್ಲಿ ಒಬ್ಬಂಟಿಯಾಗಿ ಕುಳಿತಿದ್ದೆ, ನನ್ನ ಕುಟುಂಬ ಇಲ್ಲಿತ್ತು, ನನ್ನ ಕಣ್ಣೆದುರಿಗೆ ಇ – ಮೈಲ್‌ಗಳು ಕುಣಿಯಲಾರಂಭಿಸಿದುವು.

ರವೀಂದ್ರನಾಥರ ಕಾಬೂಲಿವಾಲದ ಜೊತೆ ನನ್ನ ಆಫ್ಘಾನಿಸ್ತಾನದ ಸಂಬಂಧ ಪ್ರಾರಂಭವಾಯಿತು. ಈ ಅದ್ಭುತವಾದ ಕಥೆ ನಿಮಗೆಲ್ಲರಿಗೂ ಗೊತ್ತೇ ಇದೆ. ಯುಎಸ್‌ನಲ್ಲಿ ಕೂಡ ಬಹಳಷ್ಟು ಆಫ್ಘಾನ್ ಶಿಷ್ಯರನ್ನು ಹೊಂದುವಂತಹ ಭಾಗ್ಯ ನನ್ನದಾಗಿತ್ತು. ನನ್ನ ಮೊದಲನೆ ಆಫ್ಘಾನ್ ಶಿಷ್ಯ ರೌಫ್ ಸರ್ದಾರಿ. ಅವನು ಮುಂದೆ ನನ್ನ ಅನುಯಾಯಿ ಆದ. ಇದಾದ ನಂತರ ನನಗೆ ಸಾಕಷ್ಟು ಆಫ್ಘಾನ್ ಶಿಷ್ಯರಾದರು. ಅವರು ನಿಜವಾಗಿಯೂ ಬಹಳ ಸುಂದರ ಜನ. ಆ ದೇಶ ಇಂತಹ ಅಮಾಯಕ, ಪ್ರೀತಿ, ಕಾಳಜಿ ಇರುವಂತಹ

**ವಿನಾಯಕ ಕುಲಕರ್ಣಿ**

ಅನೇಕರಿಗೆ ಜನ್ಮ ನೀಡುವಂತಹ ಒಂದು ಸುಂದರ ವಾತಾವರಣವನ್ನು ಹೊಂದಿತ್ತು. ಇದ್ದಕ್ಕಿದ್ದ ಹಾಗೆ ನಾವು ಒಂದು ಗಂಭೀರ ಬದಲಾವಣೆಯನ್ನು ಕಂಡೆವು. ಕಳೆದ ದಶಕದಲ್ಲಿ ಅದು ಸಂಪೂರ್ಣವಾಗಿ ಬದಲಾವಣೆ ಹೊಂದಿ ಸೊರಗಿಹೋದಂತಹ ದೇಶವಾಗಿ ಪರಿವರ್ತನೆಗೊಂಡಿದೆ.

ರೌಫ್ ಸರ್ದಾರಿ ನನ್ನ ಶಿಷ್ಯ, ಅವನಿಂದಾಗಿ ನಾನು ತಬಲಾ ಓಆರ್‌ಜಿ ಹುಟ್ಟುಹಾಕಿದೆ, ಅವನು ಆಫ್ಘಾನಿಗೆ ಒಂದು ಹೊಸ ಜೀವನ, ಹೊಸ ಹವ್ಯಾಸವನ್ನು ಆರಂಭಿಸಲು ಹಿಂದಿರುಗುವುದಕ್ಕೆ ಇಚ್ಛೆಪಟ್ಟ. ಅವನು ೧೬ ವರ್ಷದವನಿದ್ದಾಗ ಬಲವಂತವಾಗಿ ದೇಶ ಬಿಟ್ಟಿದ್ದ. ಅವನು ಅಲ್ಲಿಂದ ತಪ್ಪಿಸಿಕೊಳ್ಳುವುದಕ್ಕೆ ಅವನ ತಾಯಿಯೇ ಸಹಾಯ ಮಾಡಿದ್ದಳು. ಆತನ ತಂದೆ ರಷ್ಯಾ ದೂತಾವಾಸದಲ್ಲಿ ಕೊಲ್ಲಲ್ಪಟ್ಟಿದ್ದ. ಅವನ ತಾಯಿ ಇನ್ನೂ ಬಹಳ ಸಾವುಗಳು ಆಗಬಹುದು ಎಂದು ನಿರೀಕ್ಷಿಸಿ ಅವನನ್ನು ಅಲ್ಲಿಂದ ಸಾಗಹಾಕುವುದಕ್ಕೆ ಆಲೋಚನೆ ಮಾಡಿದಳು. ಯಾವುದೇ ವಿದ್ಯೆ ಇಲ್ಲದೆ, ಜೀವನದ ಬಗ್ಗೆ ಏನೂ ತಿಳಿಯದೆಯೆ, ಆತನ ತಾಯಿಯ ಸೋದರನ ಜೊತೆ ಒಬ್ಬ ಟ್ರಕ್ ಚಾಲಕನಾಗಿ ಸೇರಿಕೊಂಡ. ಮುಂದೆ ಡೆಲಿವರಿ ಕೊಡುವ ಕೆಲಸಕ್ಕೆ ಸೇರಿಕೊಂಡ. ಅವನು ಒಂದು ರಾಜಮನೆತನದವ ನಾಗಿದ್ದ. ಹಾಗಾಗಿಯೇ ಅವನ ತಂದೆ ದೂತಾವಾಸ ದಲ್ಲಿದ್ದದ್ದು. ತನ್ನ ದೇಶದಲ್ಲಿಯೇ ಒಂದು ಒಳ್ಳೆಯ ಜೀವನ ಶುರು ಮಾಡಲು ಅವನು ಮನಸ್ಸು ಮಾಡಿದ. ತಾಲಿಬಾನ್ ಹೊರಹೋದ ಮೇಲೆ, ದೇಶ ಪುನರ್ ಅಭಿವೃದ್ಧಿಯ ಕಡೆಗೆ ಯೋಚಿಸುತ್ತಿದ್ದ ಕಾಲ. ಹಾಗಾಗಿ ನಿರ್ಮಾಣ ಕಾರ್ಯದಲ್ಲಿ ಮುಂದುವರಿಯಲು ಯೋಚಿಸಿ ಯುಎಸ್‌ನಿಂದ ಹೊರಟ. ಅಲ್ಲಿ ಸೇರಿದ ಕ್ಷಣದಿಂದ ನನಗೆ ಪತ್ರ ಬರೆಯಲು ಆರಂಭಿಸಿದ. "ದೇಶದಲ್ಲಿರುವ ಈಗಿನ ಪರಿಸ್ಥಿತಿಯನ್ನು ನನಗೆ ನಂಬಲೇ ಆಗುತ್ತಿಲ್ಲ. ನಾನು ಒಂದು ವಿಷಯ ಹೇಳುವುದೇನೆಂದರೆ ಈಗಲೂ ಸಹ ನನಗೆ ಆಫ್ಘಾನಿಸ್ತಾನದ ಬಗ್ಗೆ ಹೇಳಲು ಬಹಳ ಕಷ್ಟವಾಗುತ್ತೆ.




ಅದು ಎಷ್ಟು ಗಂಭೀರ ಮತ್ತು ಕಷ್ಟಕರವಾದುದೆಂದರೆ, ನಾನು ಈಗಲೂ ಸಹ ಇಲ್ಲಿಯ ಅನುಭವಗಳನ್ನು ಸಂಪೂರ್ಣವಾಗಿ ಅರಗಿಸಿಕೊಳ್ಳಲು ಸಾಧ್ಯವಾಗಿಲ್ಲ, ದಯವಿಟ್ಟು ನನ್ನನ್ನು ಕ್ಷಮಿಸಿ."

ಈಗ ಇಲ್ಲಿ ಸಂಗೀತವಿಲ್ಲ. ಸದಾ ಸಂಗೀತದಿಂದ ತುಂಬಿ ತುಳುಕುತ್ತಿದ್ದಂತಹ ದೇಶದಲ್ಲಿ ಇದು ಅಲ್ಲಿಯ ಜನರು ಆಶ್ಚರ್ಯಚಕಿತರಾಗುವಂತೆ ಮಾಡಿದೆ. ಧಾರ್ಮಿಕತೆ ಕೂಡ ಅಲ್ಲಿಂದ ಮರೆಯಾಗಿದೆ. ಇವೆರಡೂ ಇಲ್ಲದಂತಹ ವಾತಾವರಣ ನಿಜಕ್ಕೂ ಅಲ್ಲಿಯ ಜನರು ಕಂಗೆಡುವಂತೆ ಆಗಲು ಕಾರಣ ವಾಗಿದೆ. ತಾಲಿಬಾನ್ ಬಂದು ಮೊದಲು ಸಂಗೀತ, ನಂತರ ಧರ್ಮ, ಎರಡನ್ನೂ ನಾಶ ಮಾಡಿತು. ನೀವು ಯಾವುದೇ ಜನಸಮೂಹದಲ್ಲಿ ನೋಡಿದರೂ, ಜನ ಕಷ್ಟಪರಿಸ್ಥಿತಿಯಲ್ಲಿ ಇವೆರಡನ್ನೂ ಮೊರೆ ಹೋಗುತ್ತಾರೆ. ಅಲ್ಲಿ ಸಂಗೀತದ ಅರಿವು ಸಂಪೂರ್ಣವಾಗಿ ಅಳಿಸಿ ಹೋಗಿತ್ತು. ಸಂಗೀತದ ಮೇಲೆ ನಿರ್ಬಂಧ ಹೇರಲಾಗಿತ್ತು. ಯಾರಾದರೂ ಹಾಡಿದರೆ ಅವರನ್ನು ಅಪರಾಧಿ ಎಂದು ಪರಿಗಣಿಸಲಾಗುತ್ತಿತ್ತು. ಅಲ್ಲಿ ಸಂಗೀತಗಾರನಾಗಿ ಬದುಕುವುದು ಬಹಳ ಅಪಾಯಕಾರಿ ಯಾಗಿತ್ತು. ಬಹಳ ಸಂಗೀತಗಾರರು ಅಲ್ಲಿಂದ ಪಲಾಯನ ಮಾಡಿದರು. ತಾಲಿಬಾನ್ ನಂತರ ಹಿಂತಿರುಗಿದವರು ಸಾಮಾನ್ಯ ಮನುಷ್ಯರಂತೆ ಬಾಳುತ್ತಿದ್ದರು. ಅವರು ಅವರ ಕುಟುಂಬವನ್ನ, ಜಮೀನನ್ನ, ಆಸ್ತಿಯನ್ನ, ಎಲ್ಲವನ್ನು ಬಿಟ್ಟು ಓಡಿಹೋಗಿ, ತಾಲಿಬಾನ್ ನಂತರ ಬರಲು ಯೋಚಿಸಿದ್ದರು. ಸಂಗೀತಗಾರರಾಗಿ ಬರಲು ಸಾಧ್ಯವೇ ? ಅಥವಾ ಸುಮ್ಮನೆ ಬೇರೇನನ್ನಾದರೂ ಮಾಡಲೇ ? ನನ್ನ ಶಿಷ್ಯ ಇದನ್ನೆಲ್ಲಾ ನೋಡಿ, ನಿಮ್ಮಂತಹವರು ಯಾರಾದರೂ ಇಲ್ಲಿಗೆ ಬಂದರೆ, ಏನಾದರೂ ಮಾಡಬಹುದು ಎಂದು ಬರೆದ. ನನ್ನಂತಹ ಮನುಷ್ಯನಿಗೆ ಇದು ಹೃದಯಕ್ಕೆ ಹೊಕ್ಕಂತಾಯಿತು: ಒಬ್ಬ ಮನುಷ್ಯನನ್ನು ಎರಡು ಭಾಗವಾಗಿ ಮಾಡಿ – ಒಬ್ಬ ಮಾಡುವವನು ಇನ್ನೊಬ್ಬ ನೋಡುವವನು – ನಾನು ಈ ರೀತಿಯಾಗಿ ಯೋಚನೆ ಮಾಡಿ, ಯಾವಾಗ ಬರಬೇಕು ಎಂದು ಅವನಿಗೆ ಪತ್ರ ಬರೆದೆ. ನಾನು ನಿಮ್ಮನ್ನು ಸುಮ್ಮನೆ ಹಾಗೆ ಕರೆಯುವುದ ಕ್ಕಾಗುವುದಿಲ್ಲ. ನಾನು ಸಂಪೂರ್ಣ ತಯಾರಿ ಮಾಡಿ ನಿಮ್ಮನ್ನು ಆಮಂತ್ರಿಸುತ್ತೇನೆ ಎಂದು ಬರೆದ. ನಾನು ಮೂರ್ಖನ ತರಹ ಕಾಯುತ್ತ ಕುಳಿತಿದ್ದೆ. ನಾನು ಈ ಮೊದಲೇ ತಿಳಿಸಿದ ಹಾಗೆ, ನಾನು ನನ್ನ ಸಹೋದರಿಯನ್ನು ಸಾಯುವುದಕ್ಕೆ ಬಿಟ್ಟು ಬಂದಿದ್ದೆ. ನನ್ನ ಕಛೇರಿಯಲ್ಲಿ ಒಬ್ಬನೇ ಕುಳಿತಿದ್ದೆ. ಈ – ಮೈಲ್ ಸುದ್ದಿಗಳು ನನ್ನ ಕಣ್ಣಮುಂದೆ ಹರಿದಾಡಲು ಆರಂಭಿಸಿದವು. ಎಂಥ ಮೂರ್ಖ ನಾನು. ಏತಕ್ಕೋಸ್ಕರ ನಾನು ಕಾಯುತ್ತಿದ್ದೇನೆ ? ಅವನು ಎಲ್ಲಾ ಏರ್ಪಾಡು ಗಳನ್ನು ಮಾಡಿ ನನ್ನನ್ನು ಕರೆಯುತ್ತಾನೆ ಎಂದೇ ? ಅವಶೇಷಗಳ ಮಧ್ಯದಿಂದಲೇ ?

ತಕ್ಷಣವೇ ನಾನು ಮೈಲ್ ಕಳಿಸಿದೆ. ನೀನೇನೂ ಏರ್ಪಾಟು ಮಾಡಬೇಕಾಗಿಲ್ಲ. ನಾನು ಬರುತ್ತಿದ್ದೇನೆ ಅಷ್ಟೇ. ನಾನು ಕಾಶ್ಮೀರದ ನೈರುತ್ಯ ಭಾಗಕ್ಕೆ, ಇನ್ನೊಂದು ಸಂದಿಗ್ಧ ಪರಿಸ್ಥಿತಿಯನ್ನು ಎದುರಿಸಲು, ಅಂದರೆ ಜುನೂನ್ ಎಂಬ ಪಾಕಿಸ್ತಾನಿ ತಂಡದ ಜೊತೆ ಪಾಲ್ಗೊಳ್ಳಲು, ಅಲ್ಲಿಗೆ ಬರುತ್ತಿದ್ದೇನೆ. ಅಲ್ಲಿಂದ ನಾನು ಆಫ್ಘಾನಿಸ್ತಾನಕ್ಕೆ ಬರುತ್ತೇನೆ ಎಂದು ಬರೆದೆ. ಅವನು ಇಲ್ಲಿ ಮೇ ತಿಂಗಳಲ್ಲಿ ಬಹಳ ಬಿಸಿಲಿರುತ್ತದೆ, ನೀವು ಸೆಪ್ಟೆಂಬರ್‌ನಲ್ಲಿ ಬನ್ನಿ ಎಂದು ಬರೆದ.

ಏತನ್ಮಧ್ಯೆ, ಅಮೆರಿಕೆಯಲ್ಲಿ ಕಾರ್ಯಗಳು ಬಹಳ ತರಾತುರಿಯಲ್ಲಿ ನಡೆಯುತ್ತವೆ, ನಾನು ನ್ಯೂಯಾರ್ಕ್‌ನ ದೂತಾವಾಸಕ್ಕೆ ಆಗಲೇ ಭೇಟಿ ಏರ್ಪಾಟು ಮಾಡಿಕೊಂಡುಬಿಟ್ಟಿದ್ದೆ. ನಾನು ಕಾಶ್ಮೀರಕ್ಕೆ ಬಂದು ನ್ಯೂಯಾರ್ಕ್‌ಗೆ ಮತ್ತೆ ಬಂದೆ, ಅಲ್ಲಿಂದ ಕಾಬುಲ್‌ಗೆ ಬಂದೆ. ನಾನು ಏನೂ ಯೋಚಿಸುತ್ತಿರಲಿಲ್ಲ. ನೀವು ಇಂತಹ ಕೆಲಸ ಮಾಡುವಾಗ ಏನೂ ಯೋಚನೆ ಮಾಡುವುದಿಲ್ಲ. ನೀವು ಏನೂ ಪ್ರಶ್ನೆ ಕೇಳುವುದಿಲ್ಲ. ಬಹಳಷ್ಟು ಸಾರಿ ನನಗೆ ಕೇಳಿಸಿದ ಪ್ರಶ್ನೆ ಎಂದರೆ "ಆಫ್ಘಾನಿಸ್ತಾನಕ್ಕೆ ಹೋಗಲು ಇದು ಸರಿಯಾದ ಸಮಯವೇ" ಎನ್ನುವುದು. ಇದು ನಿಮ್ಮ ರಕ್ಷಣೆಗಾಗಿ ಅಲ್ಲ. ಅಲ್ಲಿ ಜೀವನ ಮಾಡುತ್ತಿರುವವರಿಗಾಗಿ, ನಮ್ಮ

**ಅಮೆರಿಕಾದ ಅಧ್ಯಕ್ಷರು ತಾಲಿಬಾನ್ ಎಂಬ ಒಬ್ಬ ಬ್ರಹ್ಮರಾಕ್ಷಸನನ್ನು ಸೃಷ್ಟಿ ಮಾಡಿದರು ಮತ್ತು ಅದನ್ನು ಎದುರಿಸಿ ಜಯ ಸಾಧಿಸುವುದರಲ್ಲಿ ಹೆಚ್ಚು ಫಲಕಾರಿಯಾಗಿಲ್ಲ. ಬಾಮಿಯಾನ್ ಬುದ್ಧನ ಪ್ರತಿಮೆಯನ್ನು ತಾಲಿಬಾನ್ ಧ್ವಂಸಗೊಳಿಸಿತು. ಇದು ಅವರ ಅತ್ಯಂತ ಕಡಿಮೆಯದಾದ ವಿಧ್ವಂಸಕ ಕೃತ್ಯ ಎನ್ನಬಹುದು. ಜನರ ಹತ್ಯೆ ಅತ್ಯಂತ ದೊಡ್ಡ ಪ್ರಮಾಣದಲ್ಲಿ ಸಂಭವಿಸಿದೆ. ಅಮೇರಿಕೆಯು ಈಗ ಕಾಬುಲ್‌ನ ಗಡಿಯಿಂದಾಚೆ ಚಲಿಸುತ್ತಿಲ್ಲ. ಹಾಗಿದೆ ಸನ್ನಿವೇಶ. ಅಮೇರಿಕೆ ಇದನ್ನು "ರಕ್ಷಿಸುತ್ತಿದ್ದರೂ" ಕೂಡ, ಹೆಚ್ಚಿನ ಪ್ರಮಾಣದ ಶಾಂತಿ ತರುವುದಕ್ಕೆ ಸಾಧ್ಯವಾಗಿಲ್ಲ. ಅಲ್ಲಿನ ಮಕ್ಕಳು ಮತ್ತು ಯುವಜನತೆಯ ದುಗುಡ, ದುಃಖ-ದುಮ್ಮಾನಗಳು ಕೊನೆಗಾಣುವಂತಿಲ್ಲ. ಇಂತಹ ಒಂದು ಸಂದಿಗ್ಧ ಪರಿಸ್ಥಿತಿಯಲ್ಲ ಅಲ್ಲಿಗೆ ಭೇಟಿ ನೀಡಿದ ಪಂ॥ ಸಮೀರ್ ಚಟರ್ಜಿ ಅಂತಹ ಕಲಾವಿದರ ಉಪಸ್ಥಿತಿಯು ಸನ್ನಿವೇಶವನ್ನು ತಿಳಿಮಾಡಲು ಸಹಕಾರಿಯಾಗಬಹುದು.**

**ಪಂ॥ ಸಮೀರ್ ಅವರು ಸಂಗೀತ ಪ್ರಪಂಚದ ಒಬ್ಬ ಅದ್ವಿತೀಯ ಕಲಾವಿದರು ಎನ್ನುವುದರಲ್ಲಿ ಸಂಶಯವಿಲ್ಲ. ಅವರು ಮಹಾನ್ ತಬಲಾವಾದಕರಾಗಿಯಷ್ಟೇ ಅಲ್ಲ, ಒಬ್ಬ ಸಂವೇದನಾಶೀಲ ವ್ಯಕ್ತಿಯಾಗಿ ಇಂದು ನಮ್ಮೊಂದಿಗಿದ್ದಾರೆ. ಇದು ಅತ್ಯಂತ ಸಂತೋಷದಾಯಕವಾದ ಸಂಗತಿ. ಅವರು ಈ ದಿನ ನಮ್ಮೊಡನಿರಲು ಡಾ॥ ನಾಗರಾಜ್ ಹವಾಲ್ದಾರ್ ಮತ್ತು ಅವರ ಮಗ ಶ್ರೀ. ಓಂಕಾರ್ ಹವಾಲ್ದಾರ್ ಅವರುಗಳು ಕಾರಣೀಭೂತರು. ಮಾ-ಲೆ ಪ್ರಕಾಶನದ ಈ ಸಮಾರಂಭಕ್ಕೆ ಎಲ್ಲರಿಗೂ ಆದರದ ಸ್ವಾಗತ. ಈ ದಿನ ಇಲ್ಲಿ ಇಬ್ಬರು ಚಟರ್ಜಿಗಳಿದ್ದಾರೆ : ದೇವಿಪ್ರಸಾದ್ ಅವರ ನೆನಪಿನ ಸಂಜೆ ಮತ್ತು ಸಮೀರ್ ಅವರ ಉಪಸ್ಥಿತಿ; ಇಬ್ಬರೂ ಚಟರ್ಜಿಗಳೇ.**

**- ಜಿ. ರಾಮಕೃಷ್ಣ ಅವರ ಪೀಠಿಕೆಯ ಒಂದು ಭಾಗ.**

ಮುಂದಿನ ಪೀಳಿಗೆಗಾಗಿ. ನಮಗೆ ಎರಡು ಆಯ್ಕೆಗಳಿದ್ದವು. ಅಲ್ಲಿಯ ಸಮಾಚಾರಗಳನ್ನು ಪತ್ರಿಕೆಗಳಲ್ಲಿ ಓದುವುದು ಅಥವಾ ದೂರದರ್ಶನದಲ್ಲಿ ನೋಡುವುದು. ಏನೂ ಮಾಡದೆ ನಮ್ಮ ದಿನ ನಿತ್ಯದಂತೆ ಊಟ ಮಾಡಿ ಮಲಗುವುದು ಒಂದು. ನಾನು ಸ್ವಾಭಾವಿಕವಾಗಿ ಚುರುಕು ಮನುಷ್ಯನಾಗಿರುವುದರಿಂದ, ಎರಡನೇ ಆಯ್ಕೆ ಮಾಡಿ ಅಲ್ಲಿಗೆ ಹೋಗಲು ನಿರ್ಧರಿಸಿದೆ.

ನಾವು ದುಬೈನಿಂದ ಕಾಬುಲ್‌ಗೆ ವಿಮಾನವನ್ನು ಏರುತ್ತಿದ್ದಾಗ ನನ್ನ ಅನುಭವಕ್ಕೆ ಬಂದಿದ್ದೇನೆಂದರೆ, ಇಬ್ಬರು ಮೂರು ಜನ ಯಾತ್ರಿಗಳು ಆಫ್ಘಾನಿಸ್ತಾನದವರಲ್ಲದವರನ್ನು ಬಿಟ್ಟರೆ, ಮಿಕ್ಕವರಲ್ಲಿ ಯಾರು ಬೇಕಾದರೂ ತಾಲಿಬಾನ್‌ಗೆ ಸೇರಿದವರಾಗಿರಬಹುದಾಗಿತ್ತು. ಅವರು ನೀವೇನು ಮಾಡುತ್ತೀರಿ ಎಂದು ಕೇಳಿದರೆ, ನಾನು ಒಬ್ಬ ಸಂಗೀತಗಾರ ಎಂದು ಹೇಳುವುದು ಸಾಧುವೇ ಅಥವಾ ನಾನು ಅಮೇರಿಕೆಯಿಂದ ಬರುತ್ತಿದ್ದೇನೆ ಎಂದು ಹೇಳುವುದು ಸಾಧುವೇ ಎನ್ನುವುದನ್ನು ಯೋಚಿಸುತ್ತಿದ್ದೆ. ಹೇಗೋ ನನ್ನ ಅಲ್ಪ ಸ್ವಲ್ಪ ಬುದ್ಧಿ ಉಪಯೋಗಿಸಿ ವಿಮಾನ ನಿಲ್ದಾಣವನ್ನು ತಲುಪಿದೆ. ಸುರಕ್ಷತಾ ಕಾರಣಕ್ಕಾಗಿ ಆಚೆ ಬರಲು ಸುಮಾರು ಅರ್ಧ ಕಿ.ಮೀ. ದಾರಿ ನಡೆಯಬೇಕು. ನನ್ನ ಹತ್ತಿರ ನನ್ನ ಫೋನ್ ಕೂಡ ಇರಲಿಲ್ಲ. ಫೈಸಲ್ ಬಂದಿರದಿದ್ದರೆ ಏನು ಮಾಡುವುದು. ನೀವೆಲ್ಲಿಗೆ ಹೋಗಬೇಕು ಎಂದು ಯಾರಾದರೂ ಕೇಳಿದರೆ ಏನು ಮಾಡುವುದು, ಎನ್ನುವ ಎಲ್ಲಾ ಪ್ರಶ್ನೆಗಳು ಇದ್ದವು. ಆದರೆ ಇವಾವುವೂ ನನ್ನನ್ನು ಕಾಡಲಿಲ್ಲ. ನಾನು ಸಕಾರಾತ್ಮಕ ಭಾವನೆಯುಳ್ಳವನಾಗಿದ್ದೆ. ನನ್ನಲ್ಲಿ ಒಳ್ಳೆಯ ಉದ್ದೇಶಗಳು ಮತ್ತು ಧೈರ್ಯ ತುಂಬಿಕೊಂಡಿದ್ದವು. ಅವನು ಬಂದಿದ್ದ. ಆ ದಿನ ಶುಕ್ರವಾರ ಜುಮ್ಮಾ ದಿವಸವಾಗಿತ್ತು. ಒಂದು ಅತಿಥಿಗೃಹದಲ್ಲಿ ನನಗೆ ಇರುವುದಕ್ಕೆ ಏರ್ಪಾಡು ಮಾಡಿದ್ದ. ನಾನು ಅಲ್ಲಿಗೆ ಹೋದೆ.

ಸಮೀರ್‌ಜಿ, ಇವತ್ತು ಭಾನುವಾರದ ತರಹ ಇಲ್ಲಿ ರಜೆ. ನೀವು ವಿಶ್ರಾಂತಿ ತೆಗೆದುಕೊಳ್ಳಿ, ನಾಳೆ ನೋಡೋಣ ಎಂದ. ನಾನು, ಇಲ್ಲ ಫೈಸಲ್, ನಾನು ಇಲ್ಲಿಗೆ ವಿಶ್ರಾಂತಿ ತೆಗೆದುಕೊಳ್ಳಲು ಬಂದಿಲ್ಲ. ಜನರೆಲ್ಲ ಎಲ್ಲಿ ಎಂದೆ. ಅವರೆಲ್ಲ ಕೆರೆಯ ಬಳಿ ಪಿಕ್‌ನಿಕ್‌ಗೆ ಹೋಗಿದ್ದಾರೆ ಎಂದ. ಸರಿ ನಾನು ಇನ್ನು ಅರ್ಧ ಘಂಟೆಯಲ್ಲಿ ತಯಾರಾಗಿ ಬರುತ್ತೇನೆ, ಅಲ್ಲಿಗೇ ಹೋಗೋಣ ಎಂದೆ.

ನಾವು ಅವರುಗಳನ್ನು ಭೇಟಿ ಮಾಡಲು ಅಲ್ಲಿಗೇ ಹೋದೆವು. ನಾನು ಅಲ್ಲಿಯ ಸಮಾಜದ ಮತ್ತು ಜನರ ಬಗ್ಗೆ ತಿಳಿಯಬೇಕಾಗಿತ್ತು. ಅವರು ಏನು ಯೋಚನೆ ಮಾಡುತ್ತಾರೆ, ಏನು ಅನುಭವಕ್ಕೊಳಗಾಗುತ್ತಾರೆ, ಅವರಿಗೆ ಏನು ಬೇಕು ಇತ್ಯಾದಿ. ಅಲ್ಲಿಂದ ನಾವು ಕಬ್ಬಾಗೆ ಬಂದೆವು. ಇದು ಸಂಗೀತಗಾರರು ನೆಲಸಿದ್ದಂತಹ ಜಾಗ. ಅಲ್ಲಿ ಎರಡು ಅಂಗಡಿಗಳು; ಒಂದು ಸಂಗೀತ ಸಾಮಗ್ರಿಗಳದ್ದು ಇನ್ನೊಂದು ಗಾಳಿಪಟಗಳದ್ದು. ಇದರ ಚಿತ್ರಗಳನ್ನು ನಾನು ನಿಮಗೆ ಆಮೇಲೆ ತೋರಿಸುತ್ತೇನೆ. ಅದರ ಎದುರಿಗೆ ಒಂದು ಕಟ್ಟಡ. ಅಲ್ಲಿ, ತಿರುಗಿ ಬಂದ ಸಂಗೀತಗಾರರು ಸಣ್ಣ ಸಣ್ಣ ಖೋಲಿಗಳನ್ನು ಹೊಂದಿದ್ದರು. ಒಂದು ತರಹ ಗುಪ್ತಕೋಣೆ ಇದ್ದ ಹಾಗೆ.

ಫೈಸಲ್, 'ಸಮೀರ್‌ಜಿ ಅಲ್ಲಿಗೆ ಇನ್ಯಾವತ್ತಾದರೂ ಹೋಗೋಣ' ಎಂದ. ನಾನು ಇಲ್ಲ ಈಗಲೇ ಹೋಗೋಣ ಎಂದೆ. ನನ್ನನ್ನು ಅಂತಹ ಒಂದು ಕೋಣೆಗೆ ಕರೆದುಕೊಂಡು ಹೋದ. ಅಲ್ಲಿ ನಾನು ಒಬ್ಬ ಅದ್ಭುತ ಹಾಡುಗಾರನನ್ನು ಭೇಟಿ ಮಾಡಿದೆ. ಕೋಣೆ ಕತ್ತಲು ಮತ್ತು ಹೊಗೆಯಿಂದ ತುಂಬಿತ್ತು. ಅಲ್ಲೇ ಅವರು ಹೊಗೆ ಸೇದುತ್ತಾ ಕುಳಿತಿದ್ದರು.

ಹೊಸ ತಂತ್ರಜ್ಞಾನದಿಂದಾಗಿ ಒಂದು ಘಂಟೆ ಯೊಳಗೆ ಬರೀ ಕಾಬುಲಿನಲ್ಲಿ ಅಲ್ಲದೆ, ಹೆರಾತ್, ಜಲಾಲಾಬಾದ್, ದೇಶದ ಪ್ರತಿಯೊಂದು ಮೂಲೆ ಮೂಲೆಯಲ್ಲೂ ಅಮೇರಿಕೆಯಿಂದ ಒಬ್ಬ ಭಾರತೀಯ ಮೂಲದ ಸಂಗೀತಗಾರ, ತಬಲಾವಾದಕ ಬಂದಿದ್ದಾನೆ ಎನ್ನುವ ಸಮಾಚಾರ ಹರಡಿತ್ತು. ನಾನು ಏನು ಮಾಡುತ್ತಿದ್ದೇನೆ ಎಂಬುದರ ಅರಿವೇ ನನಗಿರಲಿಲ್ಲ. ನಂತರ ನನಗೆ ತಿಳಿಸಿದರು, ತಾಲಿಬಾನ್ ಅಲ್ಲಿಂದ ಹೋದಮೇಲೆ ಬಂದಂತಹ ಮೊದಲ ಸಂಗೀತಗಾರ ನಾನೆಂದು. ಹತ್ತಿರದಲ್ಲಿದ್ದ ಜನ ನನ್ನನ್ನು ನೋಡಲು ಕೋಣೆಗೆ ಬರಲು ಆರಂಭಿಸಿದರು. ಅವರೆಲ್ಲರೂ ನಾನು ನೋಡಲಿಕ್ಕೆ ಹೇಗಿದ್ದೇನೆ, ನಾನು ಏನು ಮಾಡುತ್ತಿದ್ದೇನೆ ಮತ್ತು ಕೊನೆಯ ಪ್ರಶ್ನೆ ನಾನು ಏನು ತೆಗೆದುಕೊಳ್ಳಲು ಅಲ್ಲಿಗೆ ಬಂದಿದ್ದೇನೆ, ಎನ್ನುವವರೇ. ಕಡೆಯ ಪ್ರಶ್ನೆಗೆ ನಾನು ಏನೂ ಉತ್ತರ ಕೊಡಲಿಲ್ಲ. ಆ ಪ್ರಶ್ನೆಗೆ ಕಡೆಯ ದಿನ ಅವರಿಗೆ ಉತ್ತರ ಸಿಕ್ಕಿತು.

ಅಲ್ಲಿಯ ಆಕಾಶವಾಣಿ ಕೇಂದ್ರಕ್ಕೆ ನನ್ನನ್ನು ನೋಡಲು ಸಂಗೀತವನ್ನು ೪೦ – ೫೦ ವರ್ಷಗಳಿಂದ ಅಭ್ಯಾಸ ಮಾಡುತ್ತಿದ್ದವರು ೫ – ೬ ಘಂಟೆಗಳ ಪ್ರಯಾಣ ಮಾಡಿ ಬಂದರು. ಆಗ ಅವರಿಗೆ ನಾನು ಅಲ್ಲಿಂದ ಏನೂ ತೆಗೆದುಕೊಂಡು ಹೋಗಲು ಬಂದಿಲ್ಲ, ಏನನ್ನಾದರೂ ಕೊಟ್ಟು ಹೋಗಲು ಬಂದಿದ್ದೇನೆ ಎಂದು ತಿಳಿಯಿತು. ಅವರು ನನ್ನನ್ನು ತಬ್ಬಿಕೊಂಡು ಅತ್ತರು. ಅವರಲ್ಲಿ ಸಾಕಷ್ಟು ಜನ

## ಸಖಿಯಿಲ್ಲದವಳ ಸ್ವಗತದ ಸಂಭಾಷಣೆ




ನೋಡಲು ಬಿಕಿನಿ ಹುಡುಗಿಯರೇ ಬೇಕು.
ನೀಳಕೇಶದ ನಾರಿಮಣಿ ಹೊಸ್ತಿಲಿಗೆ ಬೇಕು.
ಅಹಾ ! ಬಯಕೆಯೇ ?
ಹಣ್ಣಾದರು ಹುಳಿ ಮಾತ್ರ ಕೊರತೆಯಾಗದ ಒರತೆ ನಿನ್ನಲ್ಲಿ.
ತಲೆತಲೆಮಾರುಗಳಿಂದ ಇದೆ ಇದೇ ವರಾತ.

ಕೊಳಕು ಬಟ್ಟೆಗಳೋ ಝಗಮಗ,
ಮುಸುರೆ ಪಾತ್ರೆಗಳೋ ಫಳಫಳ,
ಮನಸ್ಸೋ ಮೋಡ ಕವಿದಂತೆ
ಅಂದು – ಇಂದು – ಎಂದೆಂದಿನಂತೆಯೇ ?

ಜಾರು ಬಂಡೆಯಲಿ ಜಾರಿ
ಮಣ್ಣಿನಲಿ ಮಿಂದೇಳುವ ಮಕ್ಕಳಿಗೆ
ನಗುತ್ತಲೇ ಕಣ್ಣಲ್ಲೇ ಗದರುವ ಅಮ್ಮನಾದೆ,
ಸಖಿಯಾಗಲೇ ಇಲ್ಲ.

ಮಹೋದಯರ ನಡುವೆ ಮಂತ್ರಿಯಾದೆ
ಮನೆಯಲಿ ದಾಸಿಯಾದೆ
ನಿನ್ನ ಅಬ್ಬರಕ್ಕೆ ಬಳಲಿ ಬೆಂಡಾದೆ
ಸಖಿಯಾಗಲೇ ಇಲ್ಲ

ಕುಕ್ಕರ್‌ನಂತೆ ಕೂಗಿ, ಕ್ಷಣಕೊಮ್ಮೆ
ಹಚ್ಚುತ್ತಲೇ ಆರುವ ಸ್ಟೋವ್ ಆದೆ,
ನೀ ಬಯಸಿದಂತೆ ನಾ ನಾಗುತ್ತಲೇ ಸಾಗಿದೆ.
ಅಮ್ಮ ಅಜ್ಜಿ ಸಾಗಿದಂತೆ.

ಹೊಂದಿಕೆ ಎಂಬುದು ಸೋಲಿನ ಹಾದಿ
ಬಿದ್ದೇಳುತ್ತ ನಗುತ್ತಲೇ ಆಟಕ್ಕೆ
ಓಡುವ ಮಗಳಂತೆ,
ಮತ್ತೆ ಬದುಕ ಕಟ್ಟುವ ಹಾದಿ.
ಸೋತಿರುವೆ ಮತ್ತದೇ ಆಟಗಳಲಿ
ಗೆಲ್ಲಬೇಕು.

ಕ್ಷಮಯಾಧಾತ್ರಿ, ಗೃಹಿಣಿ ಗೃಹಮುಚ್ಚತೇ
ಸಾಕಪ್ಪ ಸಾಕು ಬಿರುದು ಬಾವಲಿಗಳು
ಹರಸಿಹೊರಸಿದ ಶಿಲುಬೆಗಳು
ಕುರುಡಿಗೆ ಕಾಮನಬಿಲ್ಲೇ ?
ಪ್ರಿಯೆ, ಸಖಿ, ಗೆಳತಿ
ಎಂದೆನ್ನುವ ಬಾಲಿಶ ಮಾತು ಸಾಕು.
ನಾನು ಇನ್ನಾದರು ನಾನಾಗಬೇಕು.

**ಸವಿತಾ ರವಿಶಂಕರ್**
ಪ್ರಾಧ್ಯಾಪಕರು, ಮಹಾರಾಣಿ ಲಕ್ಷ್ಮಿ ಅಮ್ಮಣ್ಣಿ ಕಾಲೇಜು
ಮಲ್ಲೇಶ್ವರಂ, ಬೆಂಗಳೂರು

ಹೇಳಿದರು, ಬಹಳಷ್ಟು ವರ್ಷಗಳ ನಂತರ ಅವರು ಹೀಗೆ ಕಂಬನಿ ಹಾಕುತ್ತಿದ್ದಾರೆ ಎಂದು.

ನಾನು ಯಾವುದಾದರೂ ಒಂದು ಅಥವಾ ಎರಡು ಸಂಗೀತ ಸಂಸ್ಥೆಗಳೊಂದಿಗೆ ಕೆಲಸ ಮಾಡಬಹುದು: ಕೆಲವು ಅಧ್ಯಾಪಕರುಗಳಿಗೆ ಹೇಳಿಕೊಡುವುದು, ಕೆಲವು ವಿದ್ಯಾರ್ಥಿಗಳಿಗೆ ಹೇಳಿಕೊಟ್ಟು ತಿರುಗಿ ಹೊರಡುವುದು ಎಂದು ಯೋಚನೆ ಮಾಡಿದ್ದೆ. ಯೋಚನೆ ಮಾಡಿದಂತೆ ನಾನು ಎಲ್ಲಿಂದ ಆರಂಭಿಸುವುದು ಎನ್ನುವುದೇ ಒಂದು ಪ್ರಶ್ನೆ ಆಗಿತ್ತು.

ಅಲ್ಲಿ ೨.೪ ಮಿಲಿಯನ್ ಅನಾಥರಿದ್ದರು. ನೀವು ಅಲ್ಲಿಯ ಅನಾಥಾಶ್ರಮಗಳನ್ನು ನೋಡಿದರೆ, ಅವು ಎಂತಹ ಕಠಿಣ ಪರಿಸ್ಥಿತಿಗಳನ್ನು, ಬೀಭತ್ಸ ಕೃತ್ಯಗಳನ್ನು ಎದುರಿಸಿರಬಹುದು ಎನ್ನುವುದರ ಅರಿವಾಗುತ್ತದೆ. ಅಲ್ಲಿಯ ಮಕ್ಕಳನ್ನು ಅವರು ದೈಹಿಕ ಅಂಗಗಳಿಗಾಗಿ ವ್ಯಾಪಾರ ಮಾಡಿದ್ದಾರೆ. ಏನಾದರೂ ಒಂದು ಅಂಗವಿಲ್ಲದೇ ಇರುವ ಅಥವಾ ಕೈ ಕಾಲಿಲ್ಲದೇ ಹೊಟ್ಟೆಯ ಮೇಲೆ ತೆವಳುವ ಮಗುವನ್ನು ಅಲ್ಲಿ ನೋಡುವುದು ಬಹಳ ಸಾಮಾನ್ಯವಾದ ಸಂಗತಿಯಾಗಿತ್ತು. ಇದು ನಿಜಕ್ಕೂ ಮನ ಕಲಕುವ ವಿಷಯವಾಗಿತ್ತು.

ಮೊದಲ ಕೆಲವು ದಿನಗಳು ನಾನು ಜಾಗಗಳಿಗೆ ಹೋಗುವುದರಲ್ಲಿ ಕಳೆದೆ. ನಾನು ಕಾಬುಲ್ ಯೂನಿವರ್ಸಿಟಿಗೆ ಹೋದೆ. ಅಲ್ಲಿ ಸಂಗೀತದ ಒಂದು



*ಡಾ॥ ನಾಗರಾಜ ರಾವ್ ಹವಾಲ್ದಾರ್ ಅವರಿಗೆ ಪಂ.ಸಮೀರ್ ಚಟರ್ಜಿಯವರ ತಬಲಾ ಪಕ್ಕ ವಾದ್ಯ*

ವಿಭಾಗವಿದೆ, ಆದರೆ ಯಾವುದೇ ಪಠ್ಯಕ್ರಮ ಅಥವಾ ಹೇಳಿಕೊಡುವವರು ಅಲ್ಲಿಲ್ಲ. ವಿದ್ಯಾರ್ಥಿಗಳು ಬರುವುದು, ಮರದ ಕೆಳಗೆ ಕೂರುವುದು, ಮನೆಗೆ ಹೋಗುವುದು ಹೀಗೆ. ಕೆಲವು ವೇಳೆ ಅಂತರ್ಜಾಲದಲ್ಲಿ ಯಾವುದಾದರೂ ಪಠ್ಯವಿದ್ದರೆ ನೋಡುವುದು. "ಪ್ರೊಫೆಸರ್, ನೀವು ಏನಾದರೂ ಮಾಡಿಕೊಳ್ಳಿ" ಎನ್ನುತ್ತಿದ್ದರು.

ಅಲ್ಲಿ ಮಿ. ಮೊಹ್ಸಿನ್ ಅವರನ್ನು ಭೇಟಿ ಮಾಡಿದೆ. ಅವರೊಡನೆ ಮಾತನಾಡುತ್ತಿದ್ದಾಗ ಬಹಳ ವಿನಯವಂತ, ಮಿತಭಾಷಿ, ಮಧ್ಯವಯಸ್ಕರಾದಂತಹ ಒಬ್ಬ ಮನುಷ್ಯ ಕೊಠಡಿಯೊಳಗೆ ಬಂದರು. ಅವರ ಹೆಸರು ಡಾ॥ ಹಮೀದ್. ಅವರು ಕಾಬೂಲ್‌ನವರು. (ಅವರ ತಂದೆ ಒಬ್ಬ ಪ್ರತಿಭಾನ್ವಿತ ಸಂಗೀತಗಾರರಾಗಿದ್ದರು.) ರಷ್ಯನರ ಸಮಯದಲ್ಲಿ ಮಾಸ್ಕೋನಲ್ಲಿ ಓದುವುದಕ್ಕೆ ಅವರಿಗೆ ಅವಕಾಶ ಸಿಕ್ಕಿತ್ತು. ಈಗ ಅವರು ಆಸ್ಟ್ರೇಲಿಯಾದ ಒಂದು ಯೂನಿವರ್ಸಿಟಿಯಲ್ಲಿ ಪ್ರೊಫೆಸರ್ ಆಗಿ ಕೆಲಸ ಮಾಡುತ್ತಿದ್ದರು. ಅವರು ಆಫ್ಘಾನಿಸ್ತಾನಕ್ಕೆ ಪುನಃ ಬಂದು ಏನಾದರೂ ಮಾಡಬೇಕು ಎಂಬ ಅಭಿಪ್ರಾಯದಿಂದ ಬಂದಿದ್ದರು. ನಾವು ಪ್ರತ್ಯೇಕವಾಗಿ ಕೆಲಸ ಮಾಡುವುದರ ಬದಲು ಇಬ್ಬರೂ ಒಟ್ಟಿಗೆ ಕೆಲಸ ಮಾಡುವುದು ಎಂದು ತೀರ್ಮಾನಿಸಿದೆವು. ನಾವು ಮುಂದೆ ಏನು ಅನ್ನುವುದರ ಬಗ್ಗೆ ಆಲೋಚಿಸಲು ಆರಂಭಿಸಿದೆವು. ಅವರ ಅಭಿಪ್ರಾಯವೇನು, ನನ್ನದೇನು ಇತ್ಯಾದಿ. ಅಲ್ಲಿಂದ ನಮ್ಮ ಪಯಣ ಆರಂಭವಾಯಿತು. ಅಲ್ಲಿಂದ ಯಾವ ಸಂಸ್ಥೆ ವೃತ್ತಿಪರ ಸಂಗೀತ ಸಂಸ್ಥೆ ಎಂದು ಕರೆಯಲ್ಪಡುತ್ತಿತ್ತೋ ಅದು ಆಫ್ಘಾನಿಸ್ತಾನ್ ರಾಷ್ಟ್ರೀಯ ಸಂಗೀತ ಶಾಲೆ ಎಂದು ಬದಲಾಯಿತು.

ಆರಂಭದಲ್ಲಿ ವಿಶ್ವ ಬ್ಯಾಂಕ್‌ನಿಂದ ೨ ಮಿಲಿಯನ್ ಡಾಲರ್‌ಗಳಷ್ಟು ಸಹಾಯಧನ ಸಿಕ್ಕಿತು. ಯೂರೋಪ್‌ನಿಂದ ಸಹಾಯಧನ ಮತ್ತು ಸಂಗೀತ ಸಾಮಗ್ರಿಗಳು ಬರಲಾರಂಭಿಸಿದವು. ಜರ್ಮನಿಯ ಗೋಯೆತೆ ಸಂಸ್ಥೆ ಪೂರ್ಣ ಯೋಜನೆಗೆ ಅತಿ ದೊಡ್ಡ ಸಹಾಯಹಸ್ತ ನೀಡಿದ ಸಂಸ್ಥೆಗಳಲ್ಲೊಂದು. ಭಾರತದಿಂದಲೂ ಸಹಾಯ ಬರಲು ಆರಂಭವಾಯಿತು. ಪಾಕಿಸ್ತಾನ ಕೂಡ ಇತರರೊಂದಿಗೆ ಸೇರಿಕೊಂಡಿತು.

ಮೊದಲಿನ ವಿದ್ಯಾರ್ಥಿಗಳು ಅನಾಥಾಲಯದಿಂದ ಬಂದವರು: ಸಂಗೀತದ ಬಗ್ಗೆ ಆಸಕ್ತಿಯುಳ್ಳವರಾಗಿದ್ದವರು ಮತ್ತು ಕುಟುಂಬಗಳಲ್ಲಿ ಸಂಗೀತಗಾರರನ್ನು ಹೊಂದಿದ್ದವರು. ಈಗ ಯಾರೂ ಇಲ್ಲದೇ ಇರಬಹುದು. ಆದರೆ ಅವರಲ್ಲಿ ನೈಪುಣ್ಯತೆ ಇತ್ತು. ಎಕೆ-೪೭ರ ಬದಲು ಅವರ ಕೈಯಲ್ಲಿ ಸಂಗೀತದ ಉಪಕರಣಗಳು ಶೋಭಿಸಲಾರಂಭಿಸಿದವು. ಈ ರೀತಿ ನಮ್ಮ ಪ್ರಯಾಣ ಆರಂಭವಾಯಿತು. ನಮಗೆ ಇದ್ದ ಕನಸು, ಈ ಅನಾಥರು ಕೆನೆಡಿ ಸೆಂಟರ್‌ನಲ್ಲಿ ಕಾರ್ಯಕ್ರಮ ನೀಡಿ, ಆಫ್ಘಾನಿಸ್ತಾನ್ ಬಗ್ಗೆ ಇರುವ ಅಭಿಪ್ರಾಯವನ್ನು ಬದಲಾಯಿಸಬೇಕು ಎನ್ನುವುದು. ನೀವು ನಂಬಿದರೆ ನಂಬಿ ಇಲ್ಲವೇ ಬಿಡಿ. ಫೆಬ್ರವರಿ ೨೦೧೩ರಲ್ಲಿ ಇಲ್ಲಿಯ ೪೫ ಜನ ಅನಾಥ ಬಾಲಕ ಬಾಲಕಿಯರು ಕೆನಡಿ ಸೆಂಟರ್‌ನ ಕಾರ್ನೆಗೀ ಹಾಲ್‌ನಲ್ಲಿ ಯಶಸ್ವಿಯಾಗಿ ಕಾರ್ಯಕ್ರಮ ನಡೆಸಿಕೊಟ್ಟರು. ಅದೊಂದು ಅವಿಸ್ಮರಣೀಯ ಕ್ಷಣ. ನಾವು ೨೦೦೯ರಲ್ಲಿ ಆರಂಭಿಸಿದೆವು. ಕೇವಲ ನಾಲ್ಕು ವರ್ಷಗಳಲ್ಲಿ, ನಾವು ಇದನ್ನು ಸಾಧಿಸಿದೆವು. ಅವರಲ್ಲಿ ನೈಪುಣ್ಯತೆ ಇತ್ತು, ಕೇವಲ ಅವರಿಗೆ ಉತ್ತೇಜನ, ವಾತಾವರಣ ಮತ್ತು ತರಬೇತಿಯ ಅವಶ್ಯಕತೆ ಇತ್ತು. ಇದು ಸಾಧ್ಯ ಎಂದು ಯಾರಿಗೆ ನಂಬಿಕೆ ಇತ್ತು? ಯುಎಸ್ ಸೇನೆ ಇಲ್ಲಿಂದ ನಿರ್ಗಮಿಸಿದ ಮೇಲೆ ಮುಂದೇನು ಅನ್ನುವ ಪ್ರಶ್ನೆಗೆ ಉತ್ತರ ಸಿಕ್ಕಿದೆ.

ಯಾವುದೇ ಸಮಯದಲ್ಲಿ, ಇಂತಹ ಸನ್ನಿವೇಶಗಳಲ್ಲಿ ನಾವು ಬೇಜವಾಬ್ದಾರಿಯುತವಾಗಿರದೆ, ಈ ವಿಷಯಗಳಲ್ಲಿ ನಿರ್ಲಕ್ಷ್ಯ ತೋರದೆ ಸನ್ನಿವೇಶವನ್ನು ಪರಿಗಣಿಸಿ ಮುನ್ನುಗ್ಗಬೇಕು. ಎಲ್ಲೂ ನಿಲ್ಲಬಾರದು. ಪ್ರಯತ್ನಿಸಿ. ಏನಾಗುವುದೋ ಯಾರಿಗೆ ಗೊತ್ತು!

೨೦೦೮ರಲ್ಲಿ ಎರಡು ಸಾರಿ ಅಲ್ಲಿಗೆ ಭೇಟಿ ನೀಡಿದೆ, ನಂತರ ಸಾಕಷ್ಟು ಸಲ. ನಾವು ಏನು ಮಾಡಲು ಪ್ರಯತ್ನಿಸುತ್ತಿದ್ದೇವೆ? ಸಂಗೀತವನ್ನು ಪುನಃ ಪ್ರತಿಷ್ಠಾಪಿಸುವುದೇ ಅಥವಾ ಅದಕ್ಕಿಂತ ಆಳವಾದದ್ದೇನಾದರೂ ಉಂಟೊ? ಸಮಾಜದ ಮೇಲೆ ಒಂದು ಅಭೂತಪೂರ್ವ ಅಚ್ಚೊತ್ತುವುದೆ? ಈ ಒಂದು ವಿಷಯದ ಬಗ್ಗೆ ಸಂಗೀತಗಾರರು ಕೂಡ ವಿಶ್ವಾಸ ಹೊಂದಿಲ್ಲ. ಸಂಗೀತ ಮನುಷ್ಯನ ಮೇಲೆ ಬೀರುವ ಸಕಾರಾತ್ಮಕ ಪರಿಣಾಮದ ಬಗ್ಗೆ ನಮಗೆಲ್ಲರಿಗೂ ಗೊತ್ತೇ ಇದೆ. ಆದರೆ ಇದು ಹೇಗೆ ನಡೆಯುತ್ತದೆ ಎನ್ನುವುದರ ಬಗ್ಗೆ ನಮಗೆ ಗೊತ್ತಿಲ್ಲ. ನಾವು ಪ್ರೀತಿಯ ಬಗ್ಗೆ ಇಲ್ಲಿ ಸೇರಿಸಿಲ್ಲ. ಸಾಕಷ್ಟು ಸಂಗತಿಗಳು ಮಾಪನಾ ವ್ಯವಸ್ಥೆಯಲ್ಲಿ ಸೇರಿಕೊಂಡಿವೆ ಹಾಗೂ ವೈಜ್ಞಾನಿಕವಾಗಿ ಅನುಭೂತಿ ಕೂಡ ಹೊಂದಿವೆ. ಆದರೆ ಸಂಗೀತ ಇಂದಿನ ದಿನಗಳಲ್ಲಿ ಈ ಗುಂಪಿಗೆ ಸೇರಬೇಕಾಗಿದೆ, ಯಾಕೆಂದರೆ ಅಳಿದುಳಿದ ಆರ್ಥಿಕತೆಯ ಮೇಲೆ ಅದು ಇಂದು ನಡೆದುಕೊಂಡು ಬರುತ್ತಿದೆ. ಯಾವಾಗ ಆರ್ಥಿಕ ತೊಂದರೆಯುಂಟಾಗುವುದೋ, ಆಗೆಲ್ಲಾ ಸಂಗೀತವನ್ನು ಯೋಜನೆಯಿಂದ ಮೊದಲು ತೆಗೆದುಹಾಕುತ್ತಾರೆ. ಮನೆ ಖರ್ಚುಗಳಿಂದಲೂ ಕೂಡ. ನಮಗೆ ಆರ್ಥಿಕ ತೊಂದರೆಯುಂಟಾದಾಗ, ನಮ್ಮ ಮಗಳು ಮುಂದಿನ ಆರು ತಿಂಗಳು ಸಂಗೀತ ಕಲಿಯಲು ಹೋಗುವುದಿಲ್ಲ ಎಂದು ಮೊದಲು ಹೇಳುತ್ತೇವೆ. ಹಲವಾರು ಪೀಳಿಗೆಗಳಿಂದಲೂ ನಾವು ಇದೇ ರೀತಿ ಯೋಚಿಸುತ್ತಾ ಬಂದಿದ್ದೇವೆ. ಸಂಗೀತ ನಮ್ಮ ಮೇಲೆ ಆಳವಾದ ಮತ್ತು ಗಂಭೀರವಾದ ಪರಿಣಾಮವನ್ನು ಬೀರುತ್ತದೆ ಎನ್ನುವುದರ ಬಗ್ಗೆ ನಮಗೇ ನಂಬಿಕೆ ಇಲ್ಲ.

ಆಫ್ಘಾನಿಸ್ತಾನ್‌ಗೆ ಹೋದಮೇಲೆ ನನಗೆ ಇದರ ಪುರಾವೆ ಸಿಕ್ಕಿತು. ಸಂಗೀತವಿಲ್ಲದಿದ್ದರೆ ಸಮಾಜದಲ್ಲಿ ಮುಂದೇನು? ಕಾಶ್ಮೀರದಲ್ಲಿ ಯುವಕ ಯುವತಿಯರು ಬಂದು ನಮ್ಮನ್ನು ತಬ್ಬಿ ಅಳುವುದನ್ನು ನಾನು ನೋಡಿದ್ದೇನೆ. ಅವರು ಕೇಳುತ್ತಿದ್ದರು, "ನಾವು ಇದಕ್ಕೆ ಅರ್ಹರಲ್ಲವೇ? ನಾವು ಹುಟ್ಟಿದಾಗಿನಿಂದ ಕಣಿವೆಯಲ್ಲಿ ನಾವು ಕೇಳಿದ್ದೆಲ್ಲಾ ಬರೀ ತುಪಾಕಿಗಳ ಶಬ್ದ. ಇದೇ ಮೊದಲ ಸಾರಿ ನಾವು ಗಿಟಾರ್‌ನ ನಾದವನ್ನು ಕೇಳುತ್ತಿದ್ದೇವೆ. ನಮಗೆ ಗೊತ್ತು, ಪ್ರಪಂಚದ ಇತರ ಭಾಗಗಳಲ್ಲಿ ಜನ ಇದನ್ನು ಕೇಳಿ ಆನಂದ ಪಡೆಯುತ್ತಿದ್ದಾರೆ."

ಸಂಗೀತ ಮನುಷ್ಯನ ಮನಸ್ಸಿನ ಮೇಲೆ ಎಷ್ಟು ಪರಿಣಾಮ ಬೀರುತ್ತಿದೆ ಎನ್ನುವುದರ ಬಗ್ಗೆ ಈಗ ಬಹಳಷ್ಟು ವೈಜ್ಞಾನಿಕ ಪ್ರಯೋಗಗಳು ನಡೆಯುತ್ತಿವೆ. ಸಂಗೀತ ನಮ್ಮ ದೇಹವನ್ನು ಹೇಗೆ ಸಮತೋಲಿಸುತ್ತದೆ, ನಮ್ಮ ಮನಸ್ಸಿನ ಮೇಲೆ ಅದರ ಪರಿಣಾಮ ಏನು ಮತ್ತು ಕೇವಲ ಮನುಷ್ಯರಲ್ಲ, ಇಡೀ ಸಮಾಜದ ಮೇಲೆ ಅದರ ಒಟ್ಟಾರೆ ಪರಿಣಾಮ ಏನು? ಅದು ಇಡೀ ಸಮಾಜವನ್ನೇ

ಬದಲಾಯಿಸಬಲ್ಲದೇ, ಇತ್ಯಾದಿ. ನನ್ನ ಪ್ರಕಾರ ಶಾಂತಿಯನ್ನು ಯಾರ ಮೇಲೂ, ಪ್ರಜಾ ಪ್ರತಿನಿಧಿಗಳು ಅಂದುಕೊಡಂತೆ, ಹೇರಲಾಗುವುದಿಲ್ಲ. ನೀವು ಶಾಂತಿಯನ್ನು ಆಳುವುದಾಗಲೀ ಅಥವಾ ಬೇರೆಯವರ ಮೇಲೆ ಹೇರುವುದಾಗಲಿ ಸಾಧ್ಯವಿಲ್ಲ. ಕೆಲವು ಯೋಗ ಶಿಕ್ಷಕರು ರಿಲಾಕ್ಸ್ ಎಂದು ಅಬ್ಬರಿಸುತ್ತಾರೆ! ಆದರೆ ಶಾಂತಿ ಒಳಗಿನಿಂದ ಬರಬೇಕು. ಅದು ಪ್ರತ್ಯೇಕ ಮನುಷ್ಯನಾಗಿರಲಿ ಅಥವಾ ಸಮಾಜವೇ ಆಗಿರಲಿ. ಸಂಗೀತಗಾರರೂ ಸಮಾಜದಿಂದ ಬಂದವರೇ. ನೀವು ಯಾವುದೇ ಕಾರ್ಖಾನೆಯಲ್ಲಿರುವ ಮೂರು ವಿಭಾಗಗಳನ್ನು – ಸ್ವೀಕರಿಸುವುದು, ಸಂಸ್ಕರಿಸುವುದು ಮತ್ತು ಕೊಡುವುದು – ವಿಮರ್ಶಿಸಿದರೆ, ಸಂಗೀತಗಾರರೂ ಕೂಡ ಹಾಗೆ ಸಮಾಜದಿಂದ ಮತ್ತು ಸಮಾಜಕ್ಕಾಗಿ ಜೀವಿಸುತ್ತಿದ್ದಾರೆ. ಅವರು ಸ್ವೀಕರಿಸುತ್ತಾರೆ, ತಮಗೆ ಲಭ್ಯವಾದ ಎಲ್ಲಾ ವಿಷಯಗಳನ್ನು ಹೀರಿಕೊಳ್ಳುತ್ತಾರೆ ಮತ್ತು ಅವುಗಳನ್ನು ಯಾವುದೇ ಇತರ ಸಾಮಗ್ರಿಗಳನ್ನು ಹಾಕದೆ ಹಾಗೇ ಸಂಸ್ಕರಿಸಿ ಸಮಾಜಕ್ಕೆ ಹಿಂತಿರುಗಿ ಕೊಡುತ್ತಾರೆ. ಇದು ಆ ಕಲಾಕಾರನ ವೈಶಿಷ್ಟ್ಯತೆಯ ಮೇಲೆ ನಿರ್ಧಾರವಾಗುತ್ತದೆ. ಅವರು ಎಷ್ಟು ಪ್ರಾಮಾಣಿಕರು ಅನ್ನುವುದರ ಮೇಲೆ. ಅವರು ಅದೇ ಪಾತ್ರವನ್ನು ನಿರ್ವಹಿಸುತ್ತಾರೆ ಮತ್ತು ಸಂಗೀತವೂ ಕೂಡ ಅದೇ ಪಾತ್ರವನ್ನು ನಿರ್ವಹಿಸುತ್ತದೆ. ಕೆಲವು ಮಜಲುಗಳಲ್ಲಿ ಸಂಗೀತಕ್ಕೆ ಯಾವ ಮಾಲೀಕತ್ವವೂ ಇಲ್ಲ. ಯಾರೂ ಕೂಡ ಸಂಗೀತದ ಮಾಲೀಕತ್ವವನ್ನು ಹೊಂದಲಾಗುವುದಿಲ್ಲ. ಅದು ಪ್ರಕೃತಿಯಿಂದ ಬರುತ್ತದೆ, ಪ್ರಕೃತಿಯೊಡನೆಯೇ ಸೇರಿ ಹೋಗುತ್ತದೆ. ನಾನು ಅನುಭವ ಪಟ್ಟಹಾಗೆ, ಸಂಗೀತದ ಉಪಕರಣದ ಜೊತೆ ನಾನೂ ಕೂಡ ಒಂದು ಉಪಕರಣವೇ. ಹಾಡುಗಾರನಿಗೆ ಅವನ ಕಂಠವೇ ಉಪಕರಣ. ಇದೇ ನನ್ನ ಭೇಟಿಗಳಿಂದ ನನಗೆ ಅನುಭವವಾಗಿದ್ದು. ಇದರಿಂದ ಅವರಿಗೆ ಸಿಕ್ಕಿದ್ದೇನು ?

ಹೆಂಡ್ತಿಗೆ ಆಸ್ತಿಯ ಅರ್ಧ
ಪಾಲು ಕೊಡಬೇಕಾಗುವು-
ದೆಂದು ಮದ್ವೆಯಾಗಿಲ್ಲಂತೆ..

ಮೊಟ್ಟಮೊದಲಿಗೆ, ನ್ಯೂಯಾರ್ಕ್‌ನಲ್ಲಿರುವ ಒಬ್ಬ ಭಾರತೀಯ ಸಂಗೀತಗಾರ ತನ್ನೆಲ್ಲಾ ಪ್ರಯಾಸಗಳ ನಡುವೆಯೂ ಅಲ್ಲಿಗೆ ಭೇಟಿ ನೀಡುವುದು. "ನಮ್ಮ ಬಗ್ಗೆ ಕಾಳಜಿಯಿರುವವರು ಅಲ್ಲಿದ್ದಾರೆ. ನಾವು ಅವರ ಬಗ್ಗೆ ಪರಿಶೀಲಿಸಿದಾಗ ಅವರಿಗೆ ನಮಗೆ ಸಹಾಯ ಮಾಡುವುದು ಬಿಟ್ಟು ಬೇರೆ ಏನೂ ಆಸೆಯಿಲ್ಲಾ." ಇಷ್ಟೇ ವಿಷಯ ಒಂದು ಸಕಾರಾತ್ಮಕ ಭಾವನೆಗೆ ಅವಕಾಶ ಮಾಡಿಕೊಡುತ್ತದೆ. ನಾನು ಅನಾಥ ಮಕ್ಕಳನ್ನು ನೋಡುತ್ತಿದ್ದಾಗ, ಅವರು ಅವರ ಕರಾಳ ಅನುಭವಗಳ ಬಗ್ಗೆಯೇ ಹೇಳುತ್ತಿದ್ದರು. ಅವರ ಜೊತೆ ಪ್ರೀತಿ ಮತ್ತು ಸಂಗೀತದ ಬಗ್ಗೆ ಮಾತನಾಡುವುದು ಮೂರ್ಖತನದ ವಿಷಯವಾಗಿತ್ತು. ಅವರು ಶೂನ್ಯ ದೃಷ್ಟಿ ಬೀರುತ್ತಿದ್ದರು. ನೀವು ಯಾವ ಭಾಷೆ ಮಾತನಾಡುತ್ತಿದ್ದೀರಿ ? ಪ್ರೀತಿ ಎಂದರೇನು ? ಸಂಗೀತವೆಂದರೇನು ? ಇತ್ಯಾದಿ. ಈಗ ಅವರು ನಗುವುದನ್ನು ನೋಡಿದರೆ, ನಾವು ಸಾಕಷ್ಟು ವರ್ಷಗಳ ನಂತರ ಅವರು ಈಗ ನಗಲು ಆರಂಭಿಸಿದ್ದಾರೆ ಎಂದು ತಮಾಷೆ ಮಾಡುತ್ತಿದ್ದೆವು, ಅವರು ಇನ್ನೆಂದೂ ನಗುವುದನ್ನು ನಿಲ್ಲಿಸುವುದಿಲ್ಲ. ಅವರನ್ನು ಗಲ್ಲಿಗೇರಿಸಿದರೂ ಕೂಡ ಅವರು ನಗುವುದನ್ನು ನಿಲ್ಲಿಸುವುದಿಲ್ಲ. ಆ ಮುಖಗಳಲ್ಲಿ ನಗುವನ್ನು ನೋಡುವುದು ಅತ್ಯಂತ ಆಹ್ಲಾದಕರ ಮತ್ತು ಸಂಪದ್ಭರಿತವಾಗಿತ್ತು. ಸಕಾರಾತ್ಮಕತೆ, ಪ್ರೀತಿ ಎನ್ನುವ ವಸ್ತು ಇದೆ, ಕಾಳಜಿ ಎನ್ನುವುದಿದೆ, ನಾವೂ ಕೂಡ ಮನುಷ್ಯರೇ ಎನ್ನುವ ಆ ಭಾವನೆ ಅವರಲ್ಲಿ ಮೂಡಿಬಂದಿತ್ತು. "ನಾನು ಆಫ್ಘಾನಿ ಎಂದು ಅಸಹ್ಯಪಟ್ಟುಕೊಳ್ಳಬೇಕಾಗಿಲ್ಲ. ನಾನು ಕೂಡ ಒಂದು ಮನುಷ್ಯ ಜೀವಿ. ಅಲ್ಲದೇ ಸಂಗೀತ ಕಲಿಯುವುದೂ ಕೂಡ ಸರಿಯಾದದ್ದೇ." ನಾನು ಕಾಬುಲ್‌ನಲ್ಲಿ ನೋಡಲಿಕ್ಕಾಗದವರನ್ನು ನೋಡಲು ಜಲಾಲಬಾದ್‌ಗೆ ಪ್ರಯಾಣ ಮಾಡಿದೆ. ನಾನು ಆಫ್ಘಾನಿಸ್ತಾನ್‌ನಲ್ಲಿ ಭೇಟಿ ಮಾಡಿದ ಸಂದರ್ಭಗಳ ಪೈಕಿ ಅತ್ಯಂತ ಅಪಾಯಕಾರಿ ಪ್ರಯಾಣ ಇದು. ದಾರಿಯಲ್ಲಿ ಜೀವಕ್ಕೆ ಆಪತ್ತು ತರುವಂತಹ ಹಲವಾರು ಜಾಗಗಳಿವೆ.

ನಾನು ಅಲ್ಲಿನ ಟಿವಿ ಕಾರ್ಯಕ್ರಮದಲ್ಲಿ ಒಂದು ಪ್ರದರ್ಶನ ನೀಡುತ್ತಿದ್ದೆ. ಬಹಳ ವರ್ಷಗಳ ನಂತರ ನಡೆದ ಕಾರ್ಯಕ್ರಮ. ಅದೂ ಲೈವ್ ಕಾರ್ಯಕ್ರಮ. ಡೆಪ್ಯುಟಿ ಮಿನಿಸ್ಟರ್‌ರನ್ನು ಭೇಟಿ ಮಾಡಿದಾಗ ಅವರಿಗೆ ನನ್ನ ಒಂದು ಪುಸ್ತಕವನ್ನು ಕೊಟ್ಟೆ. ಅವರು ಹೇಳಿದರು, "ನಾನು ಈ ದಿನಕ್ಕಾಗಿಯೇ ಜೀವಂತವಾಗಿದ್ದೆ. ಸಂಗೀತವನ್ನು ಟಿವಿಯಲ್ಲಿ ನೋಡಲು. ನಿಮಗೆ ಅನಂತಾನಂತ ವಂದನೆಗಳು." ಅದಕ್ಕೂ ಮುಂದೆ ಹೋಗಿ ನಾವು ಆಫ್ಘಾನಿ ಸಂಗೀತವನ್ನು ಮತ್ತೆ ಪುನರ್ಜೀವಗೊಳಿಸಿದ ದೇವರು, ಎಂದೆಲ್ಲಾ ಪ್ರಶಂಸಿಸಿದರು. ನಾನು ಸನಮ್ ಗುಲ್ ಎನ್ನುವ ಒಬ್ಬ ತಬಲಾವಾದಕನೊಂದಿಗೆ ಇದ್ದೆ. ಅವನಿಗೆ ಒಂದು ಮೇಲ್ ಬಂತು. ಅಲ್ಲಿಯವರು ನಾನು ಏನು ಮಾಡುತ್ತಿದ್ದೇನೆ ಎನ್ನುವುದರ ಮೇಲೆ ನಿಗಾ ಇಟ್ಟಿದ್ದರು. ಆ ಮೇಲ್‌ನಲ್ಲಿ ಈ ರೀತಿ ಇತ್ತು. "ಆ ತಬಲಾ ನುಡಿಸುವ ಕೈಗಳು ಸೈತಾನನ ಕೈಗಳಾಗುತ್ತವೆ." ನಾನು ಏನೆಂದು ತಿಳಿಸಲಿ ಎಂದು ಕೇಳಿದ. "ಅದು ನಮಗೆ ಗೊತ್ತಾಗುತ್ತೆ, ಆದರೆ ಇಷ್ಟು ಜನರನ್ನು ಕೊಲ್ಲುತ್ತಿರುವ ಆ ಕೈಗಳು ಏನಾಗುತ್ತವೆ" ಎಂದು ಬರಿ ಎಂದೆ.

ಅವರು ಸುಮ್ಮನಾದರು. ಸಂಪೂರ್ಣವಾಗಿ ಅಲ್ಲ. ಇಂಡಿಯನ್ ಕೌನ್ಸಿಲ್ ಫಾರ್ ಕಲ್ಚರಲ್ ರಿಲೇಶನ್ಸ್‌ನ ನವಾಬ್ ಖಾನ್ ಅವರ ದಾರುಣವಾದ ಸಾವು ಆಯಿತು. ಅವರು ಇಳಿದುಕೊಂಡಿದ್ದ ಅತಿಥಿಗೃಹದಲ್ಲಿ ಅವರ ಕೊಲೆಯಾಯಿತು. ಕಾಬುಲ್‌ನಲ್ಲಿ ಪ್ರಸಿದ್ಧ ತಬಲಾವಾದಕರ ಹತ್ಯೆ ಎಂದು ಸಮಾಚಾರ ಬಂತು. ಪ್ರತಿಯೊಬ್ಬರೂ ಅದು ನಾನೇ ಎಂದು ತಿಳಿದರು. ಆದರೆ ನಾನು ಈಗ ನಿಮ್ಮೊಡನಿದ್ದೇನೆ. ಅವರುಗಳು ಯಾವುದನ್ನೂ ಹಗುರವಾಗಿ ತೆಗೆದುಕೊಳ್ಳುವುದಿಲ್ಲ. ಎರಡನೇ ಸಮಯ ಸಿಗುವುದೇ ಇಲ್ಲ. ನೀವು ತಿಳಿಸಿ ಹೇಳುವುದಕ್ಕೆ ಸಮಯವೇ ಇರುವುದಿಲ್ಲ. ಸುರಕ್ಷತೆ ಮತ್ತು ರಕ್ಷಣೆ ಎನ್ನುವುದು ಆಫ್ಘಾನಿಸ್ತಾನದಲ್ಲಿ ಸುಳ್ಳು. ದುಡ್ಡಿಗಾಗಿ ಅಪಹರಣ ನಡೆಯುತ್ತಿರುವುದೇ ಜಾಸ್ತಿ. ನೀವು ಜೀವನದಲ್ಲಿ ಯಾರನ್ನು ಅತಿಯಾಗಿ ನಂಬಿರುತ್ತೀರೋ ಅವರೇ ಇದರಲ್ಲಿ ಭಾಗಿಗಳು. ನೀವು ಯಾವುದಾದರೂ ಸಂಸ್ಥೆಯಲ್ಲಿ ಡಾಲರ್ ೧೦೦೦ಕ್ಕೆ ದುಡಿಯುತ್ತಿದ್ದು, ಅವರು ನಿಮಗೆ ಕೇವಲ ಡಾಲರ್ ೪೦೦ ಮಾತ್ರ ಕೊಡುತ್ತಿದ್ದರೆ, ತಾಲಿಬಾನ್ ಬಂದು ನಾವು ನಿಮಗೆ ಡಾಲರ್ ೬೦೦ ಕೊಡುತ್ತೇವೆ, ನಮಗಾಗಿ ಕೆಲಸ ಮಾಡಿ, ಎನ್ನುವುದು ಸಾಮಾನ್ಯವಾಗಿ ನಡೆಯುತ್ತಿದ್ದಂತಹ ವಿಷಯ.

ಅಲ್ಲಿನ ಪಾರ್ಲಿಮೆಂಟ್ ಮೊಟ್ಟಮೊದಲ ಬಾರಿಗೆ ಸೇರಿದಾಗ ನಾನು ಅಲ್ಲೇ ಇದ್ದೆ. ಅದೊಂದು ವಿನೋದಕರ ಸನ್ನಿವೇಶ. ನಮ್ಮನ್ನು ಕೂಡ ಕರೆದಿದ್ದರು. ಆಫ್ಘಾನ್ ರಾಷ್ಟ್ರೀಯ ಸಂಗೀತ ವಾದ್ಯಗೋಷ್ಠಿಯನ್ನು ಆ ದಿನ ಕರೆದಿದ್ದರು. ನಾವು ಎಲ್ಲಾ ಸರಿಯಾಗಿದೆಯೇ ಎಂದು ಪರೀಕ್ಷಿಸಲು ಹುಡುಗರೊಡನೆ ನಡೆದೆವು. ಚುನಾವಣೆಯಲ್ಲಿ ಸೋತವರು ಸುಮ್ಮನಿರಲಿಲ್ಲ. "ನೀನು ನಮ್ಮನ್ನು ಬಿಟ್ಟು ವಿಜೃಂಭಿಸಲು ಸಾಧ್ಯವಿಲ್ಲ" ಎಂದು ಕಾರ್ಜಾಯ್‌ಗೆ ಹೇಳಿದರು. "ಸರಿ ಸರಿ ಒಳಗೆ ಬನ್ನಿ ಮಾತನಾಡೋಣ" ಎಂದು ಅವರನ್ನು ಒಳಗೆ ಕರೆದುಕೊಂಡು ಹೋದರು. ಬೆಳಗ್ಗೆ ಒಳಗೆ ಹೋದವರು ಮಧ್ಯಾಹ್ನ ಊಟದ ಸಮಯಕ್ಕೆ ಹೊರಬಂದರು. ಆಫ್ಘಾನಿ ಭೋಜನ ಒಂದು ರಾಜ ಭೋಜನ. ಭೋಜನ ಶುರುವಾಯಿತು. ಅವರು ಮಾತನಾಡುತ್ತಲೇ ಇದ್ದರು. ಚಹಾ ಸಮಯ ಬಂತು. ಅವರು ಮಾತನಾಡುತ್ತಲೇ ಇದ್ದರು. ಆಗ ಕಾರ್ಜಾಯ್ "ನಾವು ಇನ್ನೂ ಯಾವುದೇ ನಿರ್ಧಾರಕ್ಕೆ ಬಂದಿಲ್ಲ, ನಾವು ಯಾಕೆ ಈ ರಾತ್ರಿ ಮಲಗಿ ಮತ್ತೆ ನಾಳೆ ಮುಂದುವರಿಸಬಾರದು" ಎಂದರು. ಅವರಿಗೆಲ್ಲಾ ಅಲ್ಲಿ ಮಲಗುವುದಕ್ಕೆ ಅವರು ಅವಕಾಶ ಮಾಡಿಕೊಟ್ಟರು ಮತ್ತು ಅವರುಗಳು ಮಲಗಿದ್ದ ಕೋಣೆಗಳಿಗೆ ಬೀಗ ಜಡಿದರು. ಇದು ನಿಜವಾಗಿಯೂ ಒಂದು ವಿನೋದಕರ ಘಟನೆ.

ಇದುವರೆಗೂ ನನಗೆ ನನ್ನ ಅನುಭವಗಳನ್ನು ಹೇಳಿಕೊಳ್ಳುವುದಕ್ಕೆ ಅವಕಾಶ ಮಾಡಿಕೊಟ್ಟಂತಹ ಮಾ–ಲೆ ಪ್ರಕಾಶನದವರಿಗೆ ಮತ್ತು ಕೇಳಿದಂತಹ ಎಲ್ಲಾ ಆತ್ಮೀಯರಿಗೆ ನನ್ನ ಅನಂತಾನಂತ ಧನ್ಯವಾದಗಳು.

ವಿನಾಯಕ ಕುಲಕರ್ಣಿ
ನಂ. ೫೩, 'ಅಮೃತವರ್ಷಿಣಿ', ೭ನೇ ಮುಖ್ಯ ರಸ್ತೆ, ಬಿಕಾಸಿಪುರ
ಸುಬ್ರಹ್ಮಣ್ಯಪುರ (ಅಂಚೆ), ಬೆಂಗಳೂರು – ೫೬೦೦೬೧

ನೀವೂ ಕೈಜೋಡಿಸಿ

# ಕರ್ನಾಟಕ ವೈಜ್ಞಾನಿಕ ಮನೋವೃತ್ತಿ ಆಂದೋಲನ

ಜನರಲ್ಲಿ ವೈಜ್ಞಾನಿಕ ಮನೋಭಾವವನ್ನು ಮೂಡಿಸುವ ಅಗತ್ಯ ಎಂದಿಗಿಂತ ಇಂದು ಹೆಚ್ಚಾಗಿದೆ. ವಿಜ್ಞಾನ ತಂತ್ರಜ್ಞಾನದ ಬೆಳವಣಿಗೆಯಿಂದ ದೇಶದಲ್ಲಿ ಮೂಢನಂಬಿಕೆಗಳು ತಾನಾಗಿಯೇ ಕಡಿಮೆ ಆಗುತ್ತವೆ ಎಂದು ಕಾದಿದ್ದು ಸುಳ್ಳಾಗಿದೆ. ವಿಜ್ಞಾನವು ಬೆಳೆಸಿ ನಿಲ್ಲಿಸಿದ ತಂತ್ರಜ್ಞಾನವನ್ನೂ ಮೂಢನಂಬಿಕೆಯ ವ್ಯಾಪಾರಿಗಳು ವ್ಯವಸ್ಥಿತವಾಗಿ, ಪರಿಣಾಮಕಾರಿಯಾಗಿ ಬಳಸಿಕೊಂಡು ಜನರಲ್ಲಿ ಹೆಚ್ಚು ಹತಾಶ ಮತ್ತು ನಿಸ್ಸಹಾಯಕ ಮನೋಭಾವವನ್ನು ಬಿತ್ತಿ, ರಾಷ್ಟ್ರೀಯ ವ್ಯಕ್ತಿತ್ವವನ್ನು ಸಂಪೂರ್ಣ ಹನನ ಮಾಡುತ್ತಿದ್ದಾರೆ, ಜನತಂತ್ರದ ಬೇರುಗಳು ಕೊಳೆಯುವಂತೆ ಮಾಡುತ್ತಿದ್ದಾರೆ.

ಒಂದು ಕಡೆ, ಜನಸಾಮಾನ್ಯರ ಅತೀಂದ್ರಿಯ ನಂಬಿಕೆಗಳನ್ನು 'ಮೂಢನಂಬಿಕೆ' ಎಂದು ಕರೆದು, ಜರೆದು ನಾವು ಜನರನ್ನು ಕಳೆದುಕೊಳ್ಳುತ್ತಿದ್ದೇವೆ; ಇನ್ನೊಂದು ಕಡೆ, ಈ ಮೂಲಕ ಜನರ ಧಾರ್ಮಿಕತೆ, ಅವೈಚಾರಿಕತೆಯ ಶೋಷಕರಿಗೆ ನಾವೇ ನೆರವಾಗುತ್ತಿದ್ದೇವೆ. ಮುಖ್ಯವಾಗಿ ಟಿವಿ ಮಾಧ್ಯಮದಲ್ಲಿ ಜನರ ಮಾನಸಿಕ ಸ್ಥಿರತೆಯನ್ನು ಕೆಡಿಸುವ ಪ್ರಯತ್ನ ಘೋರವಾಗಿ ನಡೆದಿದೆ. ವಿಪರ್ಯಾಸವೆಂದರೆ, ಇದನ್ನು ಕಾನೂನಿನ ಮೂಲಕವೂ ತಡೆಯದಂಥ ಪರಿಸ್ಥಿತಿ ಇದೆ. ಆದ್ದರಿಂದ ವ್ಯಾಪಕ, ಸಕಾರಾತ್ಮಕ ಜನಾಂದೋಲನದ ಮೂಲಕವೇ ಇದನ್ನು ಮುಖಾಮುಖಿ ಎದುರಿಸ ಬೇಕಾಗಿದೆ. ಅದೇ 'ಕರ್ನಾಟಕ ವೈಜ್ಞಾನಿಕ ಮನೋವೃತ್ತಿ ಆಂದೋಲನ'ದ ಉದ್ದೇಶ.

ಕರ್ನಾಟಕ ವೈಜ್ಞಾನಿಕ ಮನೋವೃತ್ತಿ ಆಂದೋಲನವು ಯಾವುದೇ ಧರ್ಮ ಅಥವಾ ಜಾತಿಗೆ ಸಂಬಂಧಿಸಿದ್ದಲ್ಲ; ದೇವರನ್ನು ಧರ್ಮವನ್ನು ಹೀಗಳೆಯುವುದು ಆಂದೋಲನದ ಉದ್ದೇಶವಲ್ಲ. ಜನರಲ್ಲಿ ವೈಚಾರಿಕತೆಯನ್ನು ಬೆಳೆಸುವುದು ಮೂಲ ಉದ್ದೇಶ. ಯಾವುದು ವೈಜ್ಞಾನಿಕ ಯಾವುದು ಅವೈಜ್ಞಾನಿಕ ಎನ್ನುವ ಜಾಗೃತಿಯನ್ನು ಜನರಲ್ಲಿ ಬೆಳೆಸುವುದು ಈ ಆಂದೋಲನದ ಏಕೈಕ ಆಶಯ. ಇದು ಇಡೀ ರಾಜ್ಯದ ಹಾಗೂ ಭಾರತೀಯ ಸಮಾಜವನ್ನು ಉದ್ದೇಶಿಸಿ ನಡೆಯುತ್ತದೆ.

ಪ್ರಮುಖವಾಗಿ ನವಕರ್ನಾಟಕ ಪ್ರಕಾಶನ ಮತ್ತು ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತುಗಳ ಪ್ರೇರಣೆಯಿಂದ ಮೊಳಕೆಯೊಡೆದಿರುವ ಈ ವಿಚಾರವು ಕ್ರಮೇಣ ಸುವ್ಯವಸ್ಥಿತ ಆಂದೋಲನದ ರೂಪವನ್ನು ತಾಳಿದೆ. ಎರಡು ಹಂತಗಳಲ್ಲಿ ಇದನ್ನು ಕಾರ್ಯಚರಣೆಗೆ ತರುವ ಯೋಜನೆಯಿದೆ:

1. ರಾಜ್ಯ ಮಟ್ಟದಲ್ಲಿ, ವಿವಿಧ ವಿಭಾಗಗಳಲ್ಲಿ ವೈಜ್ಞಾನಿಕ ಮನೋವೃತ್ತಿ ಕಾರ್ಯಶಿಬಿರ ಸಂಚಾಲಕರನ್ನು ಸಜ್ಜುಗೊಳಿಸುವ 'ತರಬೇತಿದಾರರ ತರಬೇತಿ ಶಿಬಿರ'ಗಳನ್ನು ನಡೆಸುವುದು; ನಂತರ ಅವರ ಮೂಲಕ ಎಲ್ಲೆಡೆಗಳಲ್ಲಿ,
2. ಒಂದು – ಎರಡು ದಿನಗಳ ಕಾರ್ಯಾನುಭವ, ಪ್ರಯೋಗ ಆಧಾರಿತ ಸಹಭಾಗಿ ಕಾರ್ಯಶಿಬಿರಗಳನ್ನು ನಡೆಸುವುದು.

ಇದಕ್ಕೆ ಪೂರಕವಾಗಿ ಒಂದು ತರಬೇತಿ ಸಂಚಿಯನ್ನು ಉಚಿತವಾಗಿ ಪೂರೈಸಲು ನವಕರ್ನಾಟಕ ಪ್ರಕಾಶನ ಮುಂದೆ ಬಂದಿದೆ. ಈ ಸಂಚಿಯಲ್ಲಿ: ನಾಲ್ಕು ಉಪನ್ಯಾಸಗಳನ್ನು ಒಳಗೊಂಡ ಒಂದು ಪಠ್ಯ, ಅದರಲ್ಲಿರುವ ಉಪನ್ಯಾಸಗಳ ಮಂಡನೆಗಾಗಿ ಪಿಪಿಟಿ ಪ್ರೆಸೆಂಟೇಷನ್‌ಗಳು ಮತ್ತು ಒಂದು ತರಬೇತಿ ಕೈಪಿಡಿ, ಪೂರಕ ವಿಡಿಯೋ ಇರುತ್ತವೆ. ಪಠ್ಯದಲ್ಲಿ, **1. ವೈಜ್ಞಾನಿಕ ಮನೋವೃತ್ತಿ; 2. ಮಹಿಳೆ ಮತ್ತು ವೈಜ್ಞಾನಿಕ ಮನೋವೃತ್ತಿ; 3. ಮಾಧ್ಯಮಗಳಲ್ಲಿ ಅತೀಂದ್ರಿಯ ನಂಬಿಕೆ ಪ್ರದೂಷಣೆ ಮತ್ತು ಕಾನೂನು ಹಾಗೂ 4. ಮೂಢನಂಬಿಕೆ ತಡೆಗಟ್ಟುವ ವಿಚಾರ –**

ಹೀಗೆ ಕ್ರಮಶಃ ಎಂ. ಅಬ್ದುಲ್ ರೆಹಮಾನ್ ಪಾಷ, ಡಾ॥ ವಸುಂಧರಾ ಭೂಪತಿ, ಡಾ॥ ನಾ. ಸೋಮೇಶ್ವರ ಮತ್ತು ಪ್ರೊ॥ ಎ. ಎಸ್. ನಟರಾಜ್ ಬರೆದ ಉಪನ್ಯಾಸಗಳು ಇರುತ್ತವೆ.

### ತಮ್ಮಿಂದ ಬಯಸುವುದೇನು?

ನೀವೂ ಈ ಆಂದೋಲನದಲ್ಲಿ ಕೈಜೋಡಿಸಿ ಎಂಬುದೇ ನಮ್ಮ ನೇರ ಮನವಿ. ಎಂ. ಅಬ್ದುಲ್ ರೆಹಮಾನ್ ಪಾಷಾರವರು ಸಂಚಾಲಕರಾಗಿರುವ ಈ ಆಂದೋಲನದಲ್ಲಿ ಈಗಾಗಲೇ ಪ್ರೊ॥ ಜೆ. ಆರ್. ಲಕ್ಷ್ಮಣರಾವ್, ಡಾ॥ ಜಿ. ರಾಮಕೃಷ್ಣ, ಡಾ॥ ಸಿ. ಆರ್. ಚಂದ್ರಶೇಖರ್, ಪ್ರೊ॥ ಬರಗೂರು ರಾಮಚಂದ್ರಪ್ಪ, ಡಾ॥ ವಸುಂಧರಾ ಭೂಪತಿ, ಆರ್. ಎಸ್. ರಾಜಾರಾಮ್, ಪ್ರೊ॥ ಸಂಪಿಗೆ ತೋಂಟದಾರ್ಯ, ಡಾ॥ ನಾ. ಸೋಮೇಶ್ವರ, ಡಾ॥ ಎಚ್. ಎಸ್. ಅನುಪಮಾ, ಡಾ॥ ಶ್ರೀನಿವಾಸ ಕಕ್ಕಿಲ್ಲಾಯ, ಪ್ರೊ॥ ಆರ್. ಕೆ. ಹುಡಗಿ, ಡಾ॥ ಆರ್. ಪೂರ್ಣಿಮಾ, ಡಾ॥ ಸಿದ್ದನಗೌಡ ಪಾಟೀಲ, ಡಾ॥ ಎನ್. ಗಾಯತ್ರಿ, ಡಾ॥ ಎಂ. ಡಿ. ವಕ್ಕುಂದ, ಅಬ್ದುಲ್ ಖಾನ್, ಪ್ರೊ॥ ಶಿವಕುಮಾರ ನಾಗವಾರ, ಶಂಕರ ಹಲಗತ್ತಿ, ಇ. ಬಸವರಾಜು ಮುಂತಾದ ಪ್ರಗತಿಪರ ಚಿಂತಕರು ಒಳಗೊಂಡಿದ್ದಾರೆ.

ಈ ಆಂದೋಲನವನ್ನು ಕಟ್ಟಿ ಬೆಳೆಸುವುದಕ್ಕಾಗಿ ನಿಮ್ಮಿಂದ, ನಿಮ್ಮ ಸಂಸ್ಥೆಯಿಂದ ಎರಡು ಬಗೆಯ ನೆರವು ಅಗತ್ಯವಾಗಿದೆ –

**1. ಕಾರ್ಯಶಿಬಿರ ಸಂಚಾಲಕರು :** 'ಕಾರ್ಯಶಿಬಿರ ಸಂಚಾಲಕ'ರಾಗಿ ತರಬೇತಿಯನ್ನು ಪಡೆಯಲು ಆಸಕ್ತಿ, ಅರ್ಹತೆ ಇರುವವರ ಹೆಸರುಗಳನ್ನು ನಿಮ್ಮ ನಿಮ್ಮ ಪ್ರದೇಶದಿಂದ ಸೂಚಿಸುವುದು, ನಿಮ್ಮ ಹೆಸರನ್ನೂ ಸೂಚಿಸಬಹುದು. ಇವರು ವಿಭಾಗ ಮಟ್ಟದ 3 ದಿನಗಳ ಶಿಬಿರಗಳಲ್ಲಿ ಸಜ್ಜುಗೊಂಡು, 'ತರಬೇತಿ ಸಂಚಿ'ಯನ್ನು ಪಡೆದು, ಮುಂದೆ ತಮ್ಮ ತಮ್ಮ ಪ್ರದೇಶಗಳಲ್ಲಿ 2 ದಿನಗಳ ಕಾರ್ಯಶಿಬಿರಗಳನ್ನು ನಡೆಸುವರು. ಇಂಥ ವ್ಯಕ್ತಿಗಳ ಹೆಸರು, ವಿಳಾಸ, ಸಂಪರ್ಕವಿವರ, ವಿದ್ಯಾರ್ಹತೆ, ಕಾರ್ಯಾನುಭವ ಇತ್ಯಾದಿ ವಿವರಗಳನ್ನು ಸಂಚಾಲಕರಿಗೆ ಕಳಿಸಬಹುದು. ಇದರಷ್ಟೆ ಮುಖ್ಯವಾದದ್ದು ಎಂದರೆ,

**೨. ಪೋಷಕ ಸಂಸ್ಥೆಗಳು :** ರಾಜ್ಯದಲ್ಲಿ ವಿವಿಧ ವಿಭಾಗಗಳಲ್ಲಿ ನಡೆಸಲಾಗುವ ಮೂರು ದಿನಗಳ 'ಸಂಚಾಲಕರ ಕಾರ್ಯಶಿಬಿರ'ಗಳನ್ನು, ಮತ್ತು ಮುಂದೆ ವಿವಿಧ ವರ್ಗದ ಜನರಿಗಾಗಿ ನಡೆಸುವ ಎರಡು ದಿನಗಳ ವೈಜ್ಞಾನಿಕ ಮನೋವೃತ್ತಿ ಕಾರ್ಯಶಿಬಿರಗಳ ಸಂಘಟನೆಯನ್ನು ತಮ್ಮ ಖರ್ಚಿನಲ್ಲಿ ವಹಿಸಿಕೊಂಡು ನೆರವಾಗಬಯಸುವ ಸಂಸ್ಥೆಗಳು. ತಮ್ಮ ಅಥವಾ ತಮಗೆ ಗೊತ್ತಿರುವ ಸಂಸ್ಥೆಗಳ ಸಹಮತಿಯನ್ನು ಪಡೆದು ವಿವರಗಳನ್ನು ಸಂಚಾಲಕರಿಗೆ ತಿಳಿಸಬಹುದು.

ಸರಕಾರದ ನೆರವಿನ ಮೇಲೆ ಹೆಚ್ಚು ಅವಲಂಬಿಸದೇ ಇದನ್ನು ಒಂದು ನಿಜವಾದ ಜನಾಂದೋಲನವನ್ನಾಗಿ ಕಟ್ಟುವ ಆಲೋಚನೆಯಿರುವುದರಿಂದ ನಿಮ್ಮ ಎಲ್ಲ ಬಗೆಯ ನೆರವು, ಸಲಹೆ – ಸೂಚನೆಗಳು ನಮಗೆ ಉಪಯುಕ್ತ. ಈ ಕುರಿತು ಇನ್ನಷ್ಟು ಸ್ನೇಹಿತರು ಮತ್ತು ಸಂಸ್ಥೆಗಳೊಂದಿಗೆ ಸಮಾಲೋಚನೆ ನಡೆಸಿ 'ಕರ್ನಾಟಕ ವೈಜ್ಞಾನಿಕ ಮನೋವೃತ್ತಿ ಆಂದೋಲನ'ದಲ್ಲಿ ಭಾಗವಹಿಸಿ.

ಸಂಚಾಲಕ : **ಎಂ. ಅಬ್ದುಲ್ ರೆಹಮಾನ್ ಪಾಷ**
೮೧/೩೭-೩, ೧೨ನೇ 'ಡಿ' ಮುಖ್ಯರಸ್ತೆ, ಶಿವನಗರ, ಬೆಂಗಳೂರು – ೫೬೦ ೦೧೦
ಫೋನ್ : ೦೮೦-೨೩೩೮ ೯೮೮೮; ಮೊ : ೯೮೪೫೨ ೯೯೬೨೧ ಇಅಂಚೆ : pasha1950@gmail.com

# ಜಿ. ಎಸ್. ಶಿವರುದ್ರಪ್ಪ ಮತ್ತು ಚೆನ್ನವೀರ ಕಣವಿ

## ಕಾವ್ಯದಲ್ಲಿನ ಭಾರತೀಯ ಸಂಸ್ಕೃತಿ, ರಾಷ್ಟ್ರೀಯತೆ ಸ್ವಾತಂತ್ರ್ಯೋತ್ಸವ ಮತ್ತು ನಾಡು-ನುಡಿ ವಿಚಾರಗಳು

ಕನ್ನಡ ಸಾಹಿತ್ಯ ಪರಂಪರೆ ಹಲವಾರು ಸ್ಥಿತ್ಯಂತರಗಳನ್ನು ಪಡೆದುಕೊಂಡು ಸಮೃದ್ಧವಾಗಿ ಬೆಳೆದು ಬಂದಿರುವುದನ್ನು ನಾವು ಗಮನಿಸಿದ್ದೇವೆ. ಆಯಾ ಕಾಲದ ಕಾವ್ಯ ಧೋರಣೆ ನಿಜವಾಗಿಯೂ ತತ್ಪೂರ್ವದ ಸಾಹಿತ್ಯ ಪರಂಪರೆಯೊಂದಿಗೆ ಸವಾಲಾಗಿ ನಿಲ್ಲುವ ಮತ್ತು ಸ್ಪಷ್ಟವಾಗಿ ಗುರುತಿಸಬಹುದಾದ ಬದಲಾವಣೆಗಳನ್ನು ಅಭಿವ್ಯಕ್ತಿಯಲ್ಲಿ ಸಾಧಿಸಿದ್ದರಿಂದ ಅದು ವಿಶಿಷ್ಟತೆಯನ್ನು ಪಡೆದಿದೆ. ಹಿಂದಿನ ಕನ್ನಡ ಸಾಹಿತ್ಯವು ಕಾಲ ಸ್ಥಿತಿಯನ್ನು ಅನುಸರಿಸಿ ಪ್ರಗತಿಪರವಾಗಿತ್ತು. ಅಂತೆಯೇ ಆಧುನಿಕ ಕನ್ನಡ ಸಾಹಿತ್ಯವು ಆಯಾ ಪರಿಸ್ಥಿತಿಗೆ ಅನುಗುಣವಾಗಿ ನವೋದಯ, ಪ್ರಗತಿಶೀಲ, ನವ್ಯ ಮತ್ತು ದಲಿತ-ಬಂಡಾಯ ಸಾಹಿತ್ಯ ಪಂಥಗಳಾಗಿ ಹೊರಹೊಮ್ಮಿತು. ಇಲ್ಲಿ ಕನ್ನಡದ ಸಮನ್ವಯ ಕವಿಗಳಾದ ಜಿ. ಎಸ್. ಶಿವರುದ್ರಪ್ಪ ಮತ್ತು ಚೆನ್ನವೀರ ಕಣವಿ ಅವರ ಕಾವ್ಯವನ್ನು ಕುರಿತ ಸಮಗ್ರ ತೌಲನಿಕ ವಿವೇಚನೆಯ ಪ್ರಯತ್ನ ಮಾಡಲಾಗಿದೆ.

ಕನ್ನಡ ನಾಡಿನ ಚೆಲುವನ್ನು ಮತ್ತು ಎಲ್ಲೆಯನ್ನು ಕುರಿತು ನೃಪತುಂಗನು 'ಕಾವೇರಿಯಿಂದಮಾ ಗೋದಾವರಿ ವರಮಿರ್ದ ನಾಡದಾ ಕನ್ನಡದೊಳ್ ಭಾವಿಸಿದ ಜನಪದಂ' ಎಂದು ಹೇಳಿದ ಕವಿ. ಮುಂದೆ ಈ ನಾಡಿನ ಜನತೆಯ ನಡೆ ನುಡಿ ವಿಚಾರ ಬಂದಾಗ 'ಪದನರಿದು ನುಡಿಯಲುಂ ನುಡಿದುದನರಿದು ನಡೆಯಲ್ ನಾಡವರ್ಗಳ್' 'ಕುರಿತೋದದೆಯುಂ ಕಾವ್ಯಪ್ರಯೋಗ ಪರಿಣಿತ ಮತಿಗಳ್' ಎಂದು ನಾಡಿನ ಜನತೆಯ ಆಚಾರ-ವಿಚಾರಗಳ ಬಗ್ಗೆ ಉದ್ಗಾರ ತೆಗೆಯುತ್ತಾರೆ. ಪಂಪ ಕೂಡ ಈ ದೇಶದಲ್ಲಿ ಮರಿದುಂಬಿಯಾಗಿಯಾದರೂ ಹುಟ್ಟಬೇಕೆಂದು ಹೇಳುತ್ತಾನೆ. ಜನ್ನ, ಹರಿಹರ, ರಾಘವಾಂಕ, ಚಾಮರಸ, ರನ್ನ, ಷಡಕ್ಷರಿ, ಕುಮಾರವ್ಯಾಸ, ಲಕ್ಷ್ಮೀಶ, ರತ್ನಾಕರ ವರ್ಣಿ ಮುಂತಾದ ಮಧ್ಯಕಾಲೀನ ಕವಿಗಳು ಕನ್ನಡ ನಾಡು-ನುಡಿ ವಿಚಾರಗಳ ಬಗ್ಗೆ ಚರ್ಚಿಸಿದ್ದಾರೆ.

ಆಧುನಿಕ ಸಾಹಿತ್ಯದ ಪ್ರಮುಖ ಘಟ್ಟಗಳಲ್ಲಿ ನವೋದಯ ಸಾಹಿತ್ಯ ತುಂಬಾ ಗಮನಾರ್ಹವಾದದು. ಈ ನವೋದಯ ಸಾಹಿತ್ಯವು ಭಾವುಕತೆ, ನೈತಿಕತೆ, ಕನಸುಗಾರಿಕೆ, ನಾಡು-ನುಡಿ, ಆಚಾರ-ವಿಚಾರಗಳು ಇನ್ನೂ ಹಲವಾರು ಪ್ರಮುಖ ಅಂಶಗಳು ಸಾಹಿತ್ಯದ ಮೇಲೆ ಪ್ರಭಾವ ಬೀರಿದವು. ಬ್ರಹ್ಮಸಮಾಜ, ಆರ್ಯಸಮಾಜ, ಮುಂತಾದ ಸಂಘ ಸಂಸ್ಥೆಗಳು, ರಾಜಾರಾಮ್ ಮೋಹನ್‌ರಾಯ್, ರಾಮಕೃಷ್ಣ ಪರಮಹಂಸ, ವಿವೇಕಾನಂದ, ರವೀಂದ್ರನಾಥ ಠಾಕೂರ್, ಜ್ಯೋತಿಬಾ ಫುಲೆ, ಎಂ. ಎನ್. ರಾಯ್, ಮಹಾತ್ಮ ಗಾಂಧಿ, ಅಂಬೇಡ್ಕರ್, ರಾಮಸ್ವಾಮಿ ನಾಯಕರ್ ಮುಂತಾದ ವಿವಿಧ ಬಗೆಯ ಚಿಂತಕರು, ದಾರ್ಶನಿಕರು ಭಾರತೀಯ ಸಮಾಜದ ಮೇಲೆ ಜಾಗತಿಕ ಪ್ರಭಾವವನ್ನುಂಟುಮಾಡಿದರು. ರಾಷ್ಟ್ರದ ಇತರ ಪ್ರದೇಶಗಳಂತೆಯೇ ಕನ್ನಡ ನಾಡುನುಡಿಯ ಮೇಲೂ ಪ್ರಭಾವ ಕಾಣಿಸಿಕೊಂಡಿತು. ಈಗಾಗಲೇ ತಿಳಿದಂತೆ ಕನ್ನಡದ ನವೋದಯ ಕಾಲದ ಸಾಹಿತಿಗಳು ಸತ್ಯ, ಶಿವ,

ಅಶೋಕ ಜಿ. ಎಸ್.



ಸೌಂದರ್ಯ ಮುಂತಾದ ಅಂಶಗಳು ಪ್ರಭಾವ ಬೀರಿದವು.

ನವೋದಯ ಕಾಲದ ಕವಿಗಳು, ಮಹಾ ಮಾನವತಾ ವಾದಿಗಳೂ ಮತ್ತು ವಿಚಾರವಾದಿಗಳೂ ಆದ ದ. ರಾ. ಬೇಂದ್ರೆ, ಕುವೆಂಪು, ಕಾರಂತ, ಕೈಲಾಸಂ ಮುಂತಾದವರು ಸಮಾಜದ ದೋಷಗಳನ್ನು ನಿರ್ದಾಕ್ಷಿಣ್ಯವಾಗಿ ಖಂಡಿಸಿರುವುದರ ಜೊತೆಗೆ ನಾಡು ನುಡಿ ವಿಚಾರಗಳನ್ನು ಪ್ರಮುಖವಾಗಿ ಚರ್ಚಿಸಿದ್ದಾರೆ.



**ಜಿ. ಎಸ್. ಶಿವರುದ್ರಪ್ಪ**

ಕನ್ನಡ ಸಾಹಿತ್ಯ ಪರಂಪರೆ ಹಲವಾರು ಸ್ಥಿತ್ಯಂತರಗಳನ್ನು ಪಡೆದುಕೊಂಡು ಸಮೃದ್ಧವಾಗಿ ಬೆಳೆದು ಬಂದಿರುವುದನ್ನು ನಾವು ಗಮನಿಸಿದ್ದೇವೆ. ಆಯಾ ಕಾಲದ ಕಾವ್ಯ ಧೋರಣೆ ನಿಜವಾಗಿಯೂ ತತ್ಪೂರ್ವದ ಸಾಹಿತ್ಯ ಪರಂಪರೆಯೊಂದಿಗೆ ಸವಾಲಾಗಿ ನಿಲ್ಲುವ ಮತ್ತು ಸ್ಪಷ್ಟವಾಗಿ ಗುರುತಿಸಬಹುದಾದ ಬದಲಾವಣೆಗಳನ್ನು ಅಭಿವ್ಯಕ್ತಿಯಲ್ಲಿ ಸಾಧಿಸಿದ್ದರಿಂದ ಅದು ವಿಶಿಷ್ಟತೆಯನ್ನು ಪಡೆದಿದೆ. ಹಿಂದಿನ ಕನ್ನಡ ಸಾಹಿತ್ಯವು ಕಾಲ ಸ್ಥಿತಿಯನ್ನು ಅನುಸರಿಸಿ ಪ್ರಗತಿಪರ ವಾಗಿತ್ತು. ಅಂತೆಯೇ ಆಧುನಿಕ ಕನ್ನಡ ಸಾಹಿತ್ಯವು ಆಯಾ ಪರಿಸ್ಥಿತಿಗೆ ಅನುಗುಣವಾಗಿ ನವೋದಯ, ಪ್ರಗತಿಶೀಲ, ನವ್ಯ ಮತ್ತು ದಲಿತ – ಬಂಡಾಯ ಸಾಹಿತ್ಯ ಪಂಥಗಳಾಗಿ ಹೊರಹೊಮ್ಮಿತು. ಕನ್ನಡದ ಸಮನ್ವಯ ಕವಿಗಳಾದ ಜಿ. ಎಸ್. ಶಿವರುದ್ರಪ್ಪ ಮತ್ತು ಚೆನ್ನವೀರ ಕಣವಿ ಅವರ ಕಾವ್ಯವನ್ನು ಕುರಿತ ಸಮಗ್ರ ತೌಲನಿಕ ವಿವೇಚನೆಯ ಪ್ರಯತ್ನ ಮಾಡಲಾಗಿದೆ. ಸರಳಶೈಲಿಯ ಮೂಲಕ ವಿಶಿಷ್ಟ ಅಂಶಗಳನ್ನು ಅನಾವರಣ ಗೊಳಿಸಿ ಕನ್ನಡ ಸಾಹಿತ್ಯಕ್ಕೆ ಅಮೂಲ್ಯ ಕಾವ್ಯಕೃತಿಗಳನ್ನು ನೀಡಿರುವ ಜಿ. ಎಸ್. ಶಿವರುದ್ರಪ್ಪ ಮತ್ತು ಚೆನ್ನವೀರ ಕಣವಿಯವರ ಕಾವ್ಯದಲ್ಲಿನ ನಾಡು–ನುಡಿ ವಿಚಾರಗಳು ತೌಲನಿಕವಾಗಿ ವಿವೇಚಿಸುವುದು ಪ್ರಮುಖವಾಗಿದೆ.

'ನಿನ್ನದೆ ನೆಲ' ಎಂಬ ಕವನದಲ್ಲಿ ಭಾರತಮಾತೆಯ ಸಂಸ್ಕೃತಿ, ನೆಲ – ಜಲ, ಭೌಗೋಳಿಕತೆ, ಪ್ರಾಕೃತಿಕ ಸೌಂದರ್ಯ, ಭಾರತ ದರ್ಶನ, ಮತ್ತು ಆದರ್ಶ ಮೌಲ್ಯಗಳನ್ನು ನಿರೂಪಿಸಿದ್ದಾರೆ. ಭಾರತ ದೇಶವನ್ನು ಶತಮಾನಗಳಿಂದ ಎಷ್ಟೋ ರಾಜಮಹಾರಾಜರುಗಳು ಆಳ್ವಿಕೆ ಮಾಡಿ ಮತ್ತು ದಾಳಿಮಾಡಿ ಮಡಿದುಹೋದರೂ ಈ ನೆಲ, ಜಲ ಎಲ್ಲವೂ ಭಾರತಮಾತೆಯ ಹೆಮ್ಮೆಯ ಜನಗಳದ್ದು, ಇದಕ್ಕೆ ಅನುಮಾನವೇತಕೆ, ಇಂತಹ ವಿವಿಧ ಸಂಸ್ಕೃತಿಯ ನಾಡನ್ನು ಶತಮಾನಗಳಿಂದ ಉಳಿಸಿ, ಬೆಳೆಸಿ, ರಕ್ಷಿಸಿದ್ದಾರೆ. ಗಡಿಯುದ್ದಕ್ಕೂ ಸೈನಿಕರು ಸಿಡಿಗುಂಡಿನಿಂದ ಹತರಾದರೂ ಭಾರತಮಾತೆಯನ್ನು ರಕ್ಷಿಸುವ ಹೆಮ್ಮೆಯು ನಮ್ಮದೆ. ಆದ್ದರಿಂದ ಹಿಮಾಲಯದಲ್ಲಿ ಶಾಂತಿ ನೆಲೆಸಿದೆ.

*ನೂರಾಸೆಯ ಹೆಗಲೇರಿಸಿ, ನಡೆದ ದಾರಿ ನಿನ್ನದೆ*
*ಬರುವ ದಿನದ ಭರವಸೆಗಳ, ಬೆಳೆವ ಹೊಣೆಯು ನಿನ್ನದೆ*
*ನಿನ್ನದೆ ನೆಲ, ನಿನ್ನದೆ ಜಲ, ನಿನ್ನದೆ ಆಕಾಶ*
*ಕಿಂಚಿತ್ತೂ ಅನುಮಾನಕೆ, ಇಲ್ಲವೂ ಅವಕಾಶ* [ನಿನ್ನದೆ ನೆಲ–ಗೋಡೆ]

– ಇಲ್ಲಿ ಈ ನಾಡನ್ನು ರಕ್ಷಿಸುವ ಭರವಸೆ ಮತ್ತು ಉತ್ತುಂಗ ಶಿಖರಕ್ಕೆ ಕೊಂಡೊಯ್ಯುವುದು ನಮ್ಮ ಜವಾಬ್ದಾರಿಯಾಗಿದೆ ಎಂಬುದನ್ನು ಗ್ರಹಿಸಬಹುದು. 'ನಮ್ಮ ಬಾವುಟ' ಎಂಬ ಕವನವು ನಮ್ಮ ಸ್ವತಂತ್ರ ಭಾರತಮಾತೆಯ ಬಾವುಟದ ವಿಶಿಷ್ಟ ವೈಖರಿಯನ್ನು, ಅದರ ವೈಭವವನ್ನು ತಿಳಿಸುವ ಕವನವಾಗಿದೆ. ಭಾರತ ದೇಶದ ರಾಷ್ಟ್ರಧ್ವಜದ ವಿಶಿಷ್ಟ ಚಿತ್ರಣ ಹೀಗಿದೆ :

*ಬಾನ ಬಯಲನೇರಿತಲ್ಲಿ, ನೋಡು ನಮ್ಮ ಬಾವುಟ.*
*ವೇದ ಋಷಿಯ ಮಂತ್ರ ಪವನ, ತೀಡುತ್ತಿತ್ತು ಮೇಲ್ಗಡೆ,*
*ದಿವ್ಯಯಜ್ಞ ದೀಪ್ತಿಯಂತೆ, ಜಗದಿಚ್ಛಾ ಚಕ್ರದಂತೆ.*
*ಮರೆವ ಶೋಕಚಕ್ರವಾಯ್ತು, ದೇವತೆಗಳ ನಿಲುಗಡೆ* – (ನಮ್ಮ ಬಾವುಟ – ದೇವಶಿಲ್ಪ)

ಭಾರತಮಾತೆಯ ರಾಷ್ಟ್ರಧ್ವಜವು ವೇದ, ಋಷಿಮಂತ್ರ, ಯಜ್ಞಕುಂಡ ಹಾಗೂ ದಿವ್ಯಮುನಿಗಳಿಂದ ವಂದಿತವಾಗಿ ರಾಷ್ಟ್ರಧ್ವಜ ಹಾರಾಡುತ್ತಿದೆ. ಈ ಪೃಥ್ವಿ ಇರುವವರೆಗೆ ಈ ಬಾವುಟ ಇರುತ್ತದೆಯೆಂಬ ಕವಿಯ ಆಶಯವನ್ನು ವಿಮರ್ಶಿಸಬಹುದು. 'ಪುರುಷ ಸೂಕ್ತ' ಕವನವು ನವೋದಯ ಕಾವ್ಯಪರಂಪರೆಯ ಆದರ್ಶ ಕನಸುಗಳನ್ನು, ಉತ್ಸಾಹ ಅಭಿಮಾನಗಳನ್ನು ನೆನಪಿಸುವುದು. ಈ ಕವನ 'ನವಭಾರತ'ದ ಪರಿಕಲ್ಪನೆಯನ್ನು ಎಲ್ಲರ ಹೃದಯದಲ್ಲಿ ಬಿಂಬಿಸಲು ಹಂಬಲಿಸುತ್ತದೆ. 'ಪುರುಷಸೂಕ್ತ' ವೇದಗಳಲ್ಲಿ ಬಳಕೆಯಾದ ಪದ. 'ವಿಶ್ವಾತ್ಮ' ಎಂಬುದು ಇದರ ಶಬ್ದಾರ್ಥ. ಈ ಪರಿಕಲ್ಪನೆಯನ್ನು ಕವನದಲ್ಲಿ ನವಭಾರತದ ಆತ್ಮ ಅಥವಾ ಚೈತನ್ಯದ ಸ್ವರೂಪವನ್ನು ವರ್ಣಿಸಲು ಬಳಸಿಕೊಳ್ಳಲಾಗಿದೆ.

*ಇವನು ಕಣ್ ತೆರೆದು ಸಾವಿರ ದೀಪ*
*ಮನೆ ಮನೆಗೆ ಸ್ನೇಹ–ವಿಶ್ವಾಸ–ಕರುಣೆ ಪ್ರೀತಿ*
*ಚಿಕ್ಕೆಯಕ್ಷರಗಳಲ್ಲಿ ಇವನ ಮಂತ್ರದ ವಾಣಿ,*
*ಕೆಳಗೆ ಎಡವಿದರೂನು ಇಲ್ಲ ಭೀತಿ–*
(ಪುರುಷಸೂಕ್ತ–ಕಾಡಿನ ಕತ್ತಲಲ್ಲಿ)

– ಭಾರತದ ಭೌಗೋಳಿಕ ವರ್ಣನೆಯನ್ನು ಪ್ರಾಕೃತಿಕ ಸೌಂದರ್ಯದ ಹಿನ್ನೆಲೆಯಲ್ಲಿ ನಿರೂಪಿಸುವ ಈ ಕವನ, ಆಧುನಿಕ ಭಾರತೀಯರ ಕಣ್ ತೆರೆದರೆ ಸಾಕು ಪ್ರೀತಿ, ಸ್ನೇಹ, ಕರುಣೆ, ವಿಶ್ವಾಸಗಳಿಂದ ಎಲ್ಲರನ್ನೂ ಸ್ವೀಕರಿಸುತ್ತದೆ. ಎಂತಹ ಸಂದಿಗ್ಧತೆಯನ್ನೂ ಮೀರುವ ಸಾಮರ್ಥ್ಯ ಹೊಂದಿದೆ. ಹೃದಯವಂತಿಕೆ ಇದೆ. ಇದರ ದನಿ ಬಹುಮುಖಿ ಸಂಸ್ಕೃತಿಯ ವೈಶಿಷ್ಟ್ಯಗಳನ್ನು ಮಾಧ್ಯಮಗಳಲ್ಲಿ ಸಾರುತ್ತಿದೆ. ಸಂಶೋಧನೆಗಳಲ್ಲಿ, ವೈಜ್ಞಾನಿಕ ಸಾಧನೆಗಳಲ್ಲಿ ನವಭಾರತ ನಿರ್ಮಾಣವಾಗಿದೆ. ಕವನ ಕುರಿತು ಬಿ. ಪಿ. ವೀರೇಂದ್ರ ಕುಮಾರ್ 'ಜಿ. ಎಸ್. ಎಸ್. ಕಾವ್ಯಾಂತರಂಗ', ಕೃತಿಯಲ್ಲಿ ಈ ರೀತಿ ಅಭಿಪ್ರಾಯಪಡುತ್ತಾರೆ : "ಅನೇಕ ಸಂಸ್ಕೃತಿಯ ವಿಭಿನ್ನ ಜೀವನ ಶೈಲಿಗಳ ಬಹುರೂಪಿ ಭಾರತ ವಾಸ್ತವವಾದುದು. ಈ ಬಹುರೂಪಿಯಾದ ದರ್ಶನವೇ ಭಾರತದ ವಿಶಿಷ್ಟತೆ. ಈ ಅರಿವು ಪ್ರತಿಯೊಬ್ಬ ಭಾರತೀಯನ ಹೃದಯದಲ್ಲೂ ಜಾಗೃತವಾಗಿದೆ ಎನ್ನುವ ಅಚಲ ವಿಶ್ವಾಸ ಈ ಕವನದ ಪ್ರತಿ ಸಾಲಿನಲ್ಲೂ ವ್ಯಕ್ತಗೊಂಡಿದೆ."

ಭಾರತಮಾತೆಯ ಸಂಸ್ಕೃತಿ, ಇತಿಹಾಸವನ್ನು ಬಿಂಬಿಸುವ ಕವನಗಳೆಂದರೆ 'ಬ್ರಹ್ಮಗಿರಿಯ ದಾರಿಯಲ್ಲಿ', 'ಬ್ರಹ್ಮಗಿರಿಯ ಅಶೋಕನ ಶಾಸನದ ಹತ್ತಿರ' – ಇವೆರಡು ಕವನಗಳು ಅಶೋಕನ ಕಾಲದ ಇತಿಹಾಸ ಬಿಂಬಿಸುತ್ತವೆ. ಹಿಂದೆ ಅಶೋಕ ಮಹಾರಾಜ ಕಳಿಂಗ ಯುದ್ಧದಲ್ಲಿ ನಿಟ್ಟುಸಿರಿಟ್ಟು ಅಹಿಂಸಾ ಧರ್ಮ ಸ್ವೀಕರಿಸಿ, ಸಿದ್ಧಾರ್ಥ ಅಥವಾ ಬುದ್ಧನ ಬೌದ್ಧಧರ್ಮ ಪ್ರಸಾರ ಮಾಡಲು ದೇಶಾದ್ಯಂತ ಶಾಸನಗಳನ್ನು ಕೆತ್ತಿಸಿದನು. ಕೆಲವು ಸ್ತೂಪಗಳು, ಬಂಡೆಗಲ್ಲಿನ ಶಾಸನಗಳು, ಅಂದಿನಿಂದ ಇಂದಿನವರೆಗೂ ನಮ್ಮ ಭಾರತದ ಇತಿಹಾಸ ಹೇಳುವ 'ಸಂರಕ್ಷಿತ ಶಾಸನ'ಗಳಾಗಿವೆ.

ರಾಮಕೃಷ್ಣ ಪರಮಹಂಸರು, ವಿವೇಕಾನಂದರು, ಶಾರದಾದೇವಿ, ಶ್ರೀ ಅರವಿಂದರು, ರವೀಂದ್ರರು, ಮಹಾತ್ಮ ಗಾಂಧಿ, ನೆಹರು, ಹೀಗೆ... ಇನ್ನೂ ಹಲವಾರು ವ್ಯಕ್ತಿಗಳು ಭಾರತದ ರಾಷ್ಟ್ರೀಯ ಚಳುವಳಿಗಳನ್ನು ಮತ್ತು ಭಾರತೀಯ ಸಂಸ್ಕೃತಿಯನ್ನು ಬೆಳೆಸಿ, ಉಳಿಸಿ, ರಾಷ್ಟ್ರಕ್ಕೆ ಸೇವೆ ಸಮರ್ಪಿಸಿದವರು. ಈ ರಾಷ್ಟ್ರೀಯ ಚಳುವಳಿಯಲ್ಲಿ ಭಾಗವಹಿಸಿದ ವಿಚಾರಗಳಿಗೆ ಸಂಬಂಧಿಸಿದ ಕವನಗಳನ್ನು ಜಿ. ಎಸ್. ಎಸ್.ರವರು ರಚಿಸಿರುವುದನ್ನು ಗಮನಿಸಬಹುದು.

'ಕವಿ ರವೀಂದ್ರರನ್ನು ಕುರಿತು' ಎಂಬ ಕವನವು ರಾಷ್ಟ್ರೀಯ ಚಳುವಳಿಯ ನಾಯಕನ ಚಿತ್ರಣವನ್ನು ಬಿಂಬಿಸುತ್ತದೆ. ಈ ಚಿಕ್ಕ ಕವನದಲ್ಲಿ ಬೆಳ್ಳಿಮೋಡದ ಗಡ್ಡ, ನಿಲುವಂಗಿ, ಬೈಗು ಬೆಳಗಿನ ಮುಖ, ಸಹೃದಯ ಭಾವನೆಯ ಬಣ್ಣದ ಅಂಗಿತೊಟ್ಟು ನಿಂತ ವ್ಯಕ್ತಿ ಆ ರವೀಂದ್ರರು. 'ಓ ಕವಿವರ್ಯ, ನೀನು ಪ್ರತಿಭೆಯ ಸೂರ್ಯ' ಎಂದು ಒಂದೇ ವಾಕ್ಯದಲ್ಲಿ ಅವರ ವ್ಯಕ್ತಿತ್ವದ ಚಿತ್ರಣವನ್ನು ವಿವರಿಸಿದ್ದಾರೆ. ಭಾರತೀಯ ಸಂಸ್ಕೃತಿಯನ್ನು ವಿಶ್ವದ ಭೂಪಟದಲ್ಲಿ ಉಳಿಸಿ, ಬೆಳೆಸಿ ಯುವಕರನ್ನು ರಾಷ್ಟ್ರೀಯ ಚಳುವಳಿಯಲ್ಲಿ ಅಂದಿನಿಂದ ಇಂದಿನವರೆಗೂ ತಮ್ಮನ್ನು ತಾವು ತೊಡಗಿಸಿ ಕೊಳ್ಳುವಂತೆ ಮಾಡಿದ ವ್ಯಕ್ತಿ ವಿವೇಕಾನಂದರನ್ನು ಕುರಿತು 'ಶ್ರೀ ವಿವೇಕಾನಂದರಿಗೆ' ಎಂಬ ಕವನದಲ್ಲಿ ಅವರ ಇಡೀ ವ್ಯಕ್ತಿತ್ವವನ್ನು ಚಿತ್ರಿಸಿದ್ದಾರೆ. ರಾಮಕೃಷ್ಣರ ದಿವ್ಯಸಾನಿಧ್ಯದಲ್ಲಿ ಬೆಳೆದ ವಿವೇಕಾನಂದರ ಕುರಿತು ಹೀಗೆ ವ್ಯಕ್ತಪಡಿಸಿದ್ದಾರೆ :

*ಪರಮಹಂಸಾಚಲದ ಶಿವಗಂಗೆಯನು ತಂದು*
*ಜಗಕೆಲ್ಲ ಹರಿಸಿರುವ ಯೋಗ ಪುರುಷ*
*ಮುಟ್ಟಿದ್ದು ಹೊನ್ನಾಯ್ತು ದಿವ್ಯ ಪುರುಷ!* –
(ಶ್ರೀ ವಿವೇಕಾನಂದರಿಗೆ – ಚೆಲುವು–ಒಲವು)

ವಿವೇಕಾನಂದರು ಶ್ರೀ ಶಾರದಾದೇವಿ ಮತ್ತು ರಾಮಕೃಷ್ಣ ಪರಮಹಂಸರ ಕೃಪಾಕಟಾಕ್ಷದಿಂದ ಬೆಳೆದ ಹೆಮ್ಮೆಯ ಪುತ್ರ ಎಂದು ಜಿ. ಎಸ್. ಎಸ್.ರವರು

ಅಭಿಪ್ರಾಯಪಡುತ್ತಾರೆ. 'ದಕ್ಷಿಣೇಶ್ವರದಲ್ಲಿ' ಎಂಬ ಕವನದಲ್ಲಿ ಶ್ರೀ ರಾಮಕೃಷ್ಣ ಪರಮಹಂಸರು ಕಾಳಿಕಾಮಾತೆಯ ಶ್ರೀ ಕ್ಷೇತ್ರದ ದಿವ್ಯ ಸನ್ನಿಧಿಯಲ್ಲಿ, ಭಕ್ತಿಗೀತೆಗಳ ಗಾಯನ, ತೀರ್ಥಪ್ರಸಾದ, ಮಂಗಳಾರತಿಯಂತಹ ವಾತಾವರಣದಲ್ಲಿ ವಿವೇಕಾನಂದರು ಬೆಳೆದರು ಎಂದು ಹೇಳುತ್ತಾರೆ.

ರಾಷ್ಟ್ರೀಯ ಸ್ವಾತಂತ್ರ್ಯ ಚಳುವಳಿಯನ್ನು ಮಾಡಿ ಸ್ವಾತಂತ್ರ್ಯ ಗಳಿಸಿದ ಮೇಲೆ ಆ ಸ್ವಾತಂತ್ರ್ಯವನ್ನು ಉಳಿಸಿಕೊಳ್ಳುವ ಜವಾಬ್ದಾರಿ ನಮ್ಮದಾಗಿದೆ. ಇಂತಹ ಸಮಯದಲ್ಲಿ ನೂರಾರು ಯೋಜನೆಗಳು ಮತ್ತು ಚಿಂತನೆಗಳು ನಮ್ಮ ಮುಂದಿವೆ. ಇಂತಹ ಸಮಯವನ್ನು 'ಬಿಡುಗಡೆಯ ನೆನಪು' ಎಂಬ ಕವನದಲ್ಲಿ ಹೀಗೆ ಹೇಳುತ್ತಾರೆ :

*ವರುಷಕ್ಕೊಮ್ಮೆ ನಿನಗೆ ನೀರೆರೆದು ಹೊಸ ಬಟ್ಟೆ ತೊಡಿಸಿ*
*ಸಾಲು ಸೈನ್ಯಗಳ ಗೌರವ ರಕ್ಷೆಯನ್ನಿತ್ತು, ನಭಕೆ ಬಾವುಟವೆತ್ತಿ*
*ಹನ್ನೊಂದು ವರುಷ ಹಿಂದೆ ನಟ್ಟ ನಡುರಾತ್ರಿ*
*ಹನ್ನೆರಡು ಗಂಟೆಯಲಿ ನಿನಗಾದ ಸೊಗವ*

(ಬಿಡುಗಡೆಯ ನೆನಪು – ದೀಪದ ಹೆಜ್ಜೆ)

ಗೌರವ ರಕ್ಷೆ ಮಾಡಿದರೆ ಸಾಲದು, ಇಲ್ಲಿ ಹನ್ನೊಂದು ವರ್ಷದ ಹಿಂದೆ ಸ್ವಾತಂತ್ರ್ಯ ಪಡೆದು 'ನಾವೀಗ ಹೊಸನಾಡನ್ನು ಕಟ್ಟುತ್ತಿದ್ದೇವೆ, ಶುಭಮಸ್ತು ಎನ್ನು'. ನಾವೀಗ ಅನೇಕ ಅಭಿವೃದ್ಧಿ ಸಾಧಿಸಿದ್ದೇವೆ, ಹೊಸನಾಡನ್ನು ಕಟ್ಟಿದ್ದೇವೆ ಎಂದು ಹೇಳಿರುವುದನ್ನು ಗ್ರಹಿಸಬಹುದು. ಗಾಂಧೀಜಿಯವರು ಭಾರತಕ್ಕೆ ಅಹಿಂಸಾ ಮಾರ್ಗದಿಂದ ಸ್ವಾತಂತ್ರ್ಯ ಗಳಿಸಿಕೊಟ್ಟವರು. ಇವರನ್ನು ನೆನಪು ಮಾಡಿಕೊಳ್ಳಲು ಗಾಂಧಿ ಜಯಂತಿಯನ್ನು ಆಚರಿಸುತ್ತೇವೆ. ಅದರ ನೆನಪಿಗೋಸ್ಕರ '೧೯೫೨ ಕಂಡದ್ದು ಮೂರುಸಲ' ಎಂಬ ಕವನದ ಮೂಲಕ ಕವಿ ಈ ರೀತಿ ವ್ಯಕ್ತಪಡಿಸುತ್ತಾರೆ : "ಒಂಬತ್ತು ವರ್ಷದಿಂದ ನೀನು ಮೇರು ಪರ್ವತದಂತೆ ಬ್ರಿಟಿಷರೆದುರು ನಿಂತು ಸ್ವಾತಂತ್ರ್ಯ ಗಳಿಸಿಕೊಟ್ಟು ಇಂದು ಬಾವುಟದಲ್ಲಿ ನೆಲೆಸಿರುವೆ."

*ಹಿಮಶೈಲ ಶಾಂತಿಯಲಿ ಜ್ವಲಿಸುತಿದೆ ಇದೋ*
*ಎದೆಯ ದೇಗುಲದಲ್ಲಿ ನಿತ್ಯ ನಂದಾದೀಪ*
*ನಿನ್ನ ರೂಪ –*

(ಕಂಡದ್ದು ಮೂರು ಸಲ – ದೀಪದ ಹೆಜ್ಜೆ)

ಕರ್ಮಯೋಗಿಯಾಗಿ ಮೊದಲ ಸಲ ಕಂಡೆ, ಎರಡನೆಯ ಸಲ ಆಫ್ರಿಕಾದ ಕಗ್ಗತ್ತಲೆಯಲ್ಲಿ 'ಭಾರತೀಯರ ಬಿಡುಗಡೆಯ ಬೋಧಿ'ಯಾಗಿ ಕಂಡೆ, ಮೂರನೆಯ ಸಲ ಕ್ವಿಟ್ ಇಂಡಿಯಾ ಚಳುವಳಿಯಲ್ಲಿ ಭಾರತದ ಸ್ವಾತಂತ್ರ್ಯದ ವೇಳೆಯಲ್ಲಿ. ಕೊನೆಗೆ,

*ನಾ ಕಂಡೆ ಸ್ವತಂತ್ರ ಭಾರತದ*
*ಜನಸಮುದ್ರದ ತಡಿಯ ಪ್ರಾರ್ಥನಾ ಶೈಲದಲ್ಲಿ,*
*ಮೂರು ಸಿಡಿಗುಂಡುಗಳ ಪೂಜೆ ಸಂದಿತು ಎದೆಗೆ*
*ಪಂಜರ ಬಿರಿದು ಹಾರಿತು ಹೊರಗೆ ತನ್ನ ಮನೆಗೆ –*

(ಕಂಡದ್ದು ಮೂರು ಸಲ – ದೀಪದ ಹೆಜ್ಜೆ)

ಗಾಂಧೀಜಿಯವರ ಅಂದಿನ ನೆನಪುಗಳನ್ನು ಜಿ. ಎಸ್. ಎಸ್.ರವರು ಈ ರೀತಿ ವ್ಯಕ್ತಪಡಿಸುತ್ತಾರೆ :

ಭಾರತದ ರಾಷ್ಟ್ರೀಯತೆ, ಸ್ವಾತಂತ್ರ್ಯ, ಸಂಸ್ಕೃತಿ, ಜಾತಿ, ಮತ, ಪಂಥ ಮುಂತಾದವುಗಳ ವಿವಿಧ ವೈವಿಧ್ಯ ಹಾಗೂ ಐಕ್ಯತೆಯನ್ನು ಕಾಪಾಡುವುದು ನಮ್ಮೆಲ್ಲರ ಕರ್ತವ್ಯವಾಗಿದೆ ಎಂದು ಜಿ. ಎಸ್. ಎಸ್.ರವರು 'ಐಕ್ಯಗಾನ' ಎಂಬ ಕವನದಲ್ಲಿ ಹೀಗೆ ಹೇಳುತ್ತಾರೆ :

*ಒಂದೇ ಒಂದೇ ನಾವೆಲ್ಲರು ಒಂದೇ, ಈ ದೇಶದೊಳೆಲ್ಲಿದ್ದರು*
*ಭಾರತ ನಮಗೊಂದೇ, ಮರಕ್ಕೆ ಹಲವು ಕೊಂಬೆಗಳಿದ್ದರೂ ಮರವು ಒಂದೇ*
*ನಡೆ ನುಡಿ ಬೇರೆ ಇದ್ದರೂ ಬದುಕುವ ಜನ ಒಂದೇ, ಧ್ವಜ ಒಂದೇ,*

(ಐಕ್ಯಗಾನ – ಪ್ರೀತಿ ಇಲ್ಲದ ಮೇಲೆ)

ನಮ್ಮೆಲ್ಲರಲ್ಲಿರುವ ಸಂಸ್ಕೃತಿ, ಆಚಾರ, ವಿಚಾರ ಒಂದೇ ಎಂದು ಭಾವಿಸಬೇಕು. ಎಲ್ಲರೂ ಎಲ್ಲರಿಗಾಗಿ, ಎಲ್ಲರೂ ನಮಗಾಗಿ ದುಡಿದು ಐಕ್ಯಗಾನದಿಂದ ರಾಷ್ಟ್ರ ಕಟ್ಟೋಣ ಎಂಬ ಕವಿಯ ಆಶಯವನ್ನು ಗ್ರಹಿಸಬಹುದು.



'ಈ ದೇಶದಲ್ಲಿ' ಎಂಬ ಕವನವು ಭಾರತಮಾತೆಯ ಇಂದಿನ ಸಾಮಾಜಿಕ ಪರಿಸ್ಥಿತಿಯನ್ನು ಬಿಂಬಿಸುತ್ತದೆ. ಈ ದೇಶದಲ್ಲಿ ಎಲ್ಲವೂ ಆಮೂಲಾಗ್ರವಾಗಿ ಬದಲಾಗಬೇಕು. ಜಾತಿ, ಮತ, ಪಂಥ ಎಲ್ಲವೂ ಹೋಗಿ ಸಮಾನತೆಯ ಧರ್ಮ ಸ್ಥಾಪನೆಯಾಗಬೇಕು. ವ್ಯಕ್ತಿಪೂಜೆ, ವಂಶಪೂಜೆ ಎಲ್ಲವೂ ನಿಂತು ಸರ್ವರಿಗೂ ಸಮಬಾಳು, ಸರ್ವರಿಗೂ ಸಮಪಾಲು ಎಂಬ ಭಾವನೆ ಉಂಟಾಗಬೇಕೆಂಬ ಆಶಯವನ್ನು ಕವಿ ಇಲ್ಲಿ ವ್ಯಕ್ತಪಡಿಸಿರುವುದನ್ನು ಗಮನಿಸಬಹುದು.

**ಚೆನ್ನವೀರ ಕಣವಿ**

ರಾಷ್ಟ್ರೀಯ ಸ್ವಾತಂತ್ರ್ಯ ಚಳುವಳಿಯಲ್ಲಿ ಪ್ರಮುಖ ಪಾತ್ರ ವಹಿಸಿದವರು ಮಹಾತ್ಮ ಗಾಂಧೀಜಿಯವರು. ಇವರು ಸ್ವಾತಂತ್ರ್ಯ ಚಳುವಳಿಯಲ್ಲಿ ತನ್ನ ಸಂಪತ್ತು ಆಸ್ತಿಯನ್ನೆಲ್ಲಾ ಸಾಬರಮತಿ ಆಶ್ರಮಕ್ಕೆ ನೀಡಿ ತುಂಡು ಉಡುಪು ಧರಿಸಿ ದಿನಕ್ಕೆ ಒಂದು ಬಾರಿ ಊಟಮಾಡಿ ಜಾತ್ಯತೀತ ಮತ್ತು ಸಮಾನತೆ ಬೋಧಿಸಿದ ಮಹಾನ್ ವ್ಯಕ್ತಿ. ಗಾಂಧಿಯವರ ಬಗ್ಗೆ ಚೆನ್ನವೀರ ಕಣವಿಯವರು ಹಲವಾರು ಕವನಗಳನ್ನು ಬರೆದಿದ್ದಾರೆ. 'ಅಮರ ತೇಜಃಪುಂಜ ಮತ್ತು ನಮ್ಮ ಬಾಪು' ಎಂಬ ಕವನಗಳು ರಾಷ್ಟ್ರೀಯ ಸ್ವಾತಂತ್ರ್ಯ ಚಳುವಳಿಯನ್ನು ಬಿಂಬಿಸುವ ಕವನಗಳು. 'ಅಮರ ತೇಜಃಪುಂಜ' ಎಂಬ ಕವನವು ಸ್ವಾತಂತ್ರ್ಯ ಚಳುವಳಿಯ ಸಂದರ್ಭದಲ್ಲಿ 'ಓ ತಂದೆ! ನಿನಗಿದೋ ಈ ನೆಲದ ಕಣಕಣವು' ಕಣ್ಣೀರು ಸುರಿಸಿ ಹಲುಬಿ ಹಂಬಲಿಸುತ್ತಿದೆ. ಈ ನಾಡು ಅಷ್ಟೇ ಅಲ್ಲದೆ ನಿನ್ನೊಡನೆ ಸಾಗುತ್ತಿರುವ ವಿಶ್ವವೇ ನಿನ್ನ 'ಸತ್ಯಾಗ್ರ' ಕರುಣೆಯಿಂದ ಪ್ರಭಾವಿತಗೊಂಡಿದೆ.

*ಯಾವ ನುಡಿಗಡಣಕೂ ನಿಲಕದಿಹೆ ಸಿಲುಕದಿಹೆ*
*ಸಧರ್ಮ ಬೋಧನೆಯ ಶಾಂತಿಯಲಿ ಕರುಣಿಸಿಹೆ*
*ತತ್ವನಿಕಷಕ್ಕಿಟ್ಟ ತಾಪಸಿಯ ಅಪರಂಜಿ*
*ನಿನ್ನದಿದೆ ಬಾಪೂಜಿ ಅಮರ ತೇಜಃಪುಂಜ*

(ಅಮರ ತೇಜಃಪುಂಜ – ಕಾವ್ಯಾಕ್ಷಿ)

'ನಮ್ಮ ಬಾಪು' ಎಂಬ ಕವನವು ಹಿಂದಿನ ಕವನದಲ್ಲಿನ ಮುಂದುವರಿದ ಭಾಗವನ್ನು ಹೇಳುತ್ತದೆ. 'ಮೈಗೆ ಚಿಂದಿಯ ಉಡುಪು ಜಗದ ಉದ್ಧಾರಕನೇ ಬಾಪು' ಎಂದು ಉದ್ಗಾರ ತೆಗೆಯುತ್ತಾರೆ.

'ನಮ್ಮ ಬಾಪು' ಮತ್ತು 'ಹುತಾತ್ಮ' ಎಂಬ ಕವನಗಳು ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದ ಗಾಂಧೀಜಿಯ ವ್ಯಕ್ತಿಚಿತ್ರಣವನ್ನು ಬಿಂಬಿಸುವ ಕವನಗಳಾಗಿವೆ. ನೂರಾರು ವರ್ಷದ ದಾಸ್ಯದ, ಹಾಸ್ಯದ ಬದುಕು ಸಾಕು, ಸಾಕೀಗೋಳು, ಹೊಸ ಜೀವನ ಸಾಗಿಸೋಣ ಎಂದು ಭಾರತ ಮಾತೆಯ ಜನತೆ ಸಿಡಿದೇಳಬೇಕು ಎಂದು ಮನವಿ ಮಾಡಿಕೊಳ್ಳುತ್ತಾರೆ. ಸರ್ವ ಸುಖಭೋಗಗಳಿಗೆ ತಿಲಾಂಜಲಿಯಿತ್ತು ಭಾರತ ಮಾತೆಯ ರಾಷ್ಟ್ರ ನಿರ್ಮಾಣದಲ್ಲಿ ಕ್ರಾಂತಿಗೀತೆಯನ್ನು ಮೊಳಗಿಸಬೇಕು ಮತ್ತು ಕನ್ನಡಾಂಬೆಯು ಸ್ಫೂರ್ತಿಗೊಂಡು ಸಹಕರಿಸಬೇಕೆಂದು ಮನವಿ ಮಾಡಿಕೊಳ್ಳುತ್ತಾರೆ. ೧೯೩೮ರಿಂದ ೧೯೪೦ರ ವೇಳೆಗೆ ವಿದ್ಯಾಭ್ಯಾಸಕ್ಕೆಂದು ಧಾರವಾಡ ಹತ್ತಿರದ ಗರಗ ಗ್ರಾಮಕ್ಕೆ ಬರಲೇಬೇಕಾಯಿತು. ಆ ವೇಳೆಗೆ ಸ್ವಾತಂತ್ರ್ಯ ಚಳುವಳಿ ಕಾವೇರುತ್ತಿದ್ದ ಕಾಲ. ಶಾಲೆಯ ಹುಡುಗರ ಮುಗ್ಧಮನಸ್ಸಿನಲ್ಲಿ ದೇಶಭಕ್ತಿಯ ಕಾವು ಹುಟ್ಟಿಸಿತು. ಕರ್ನಾಟಕ ಏಕೀಕರಣ ಚಳುವಳಿಗೂ ಧಾರವಾಡವೇ ಕೇಂದ್ರವಾಗಿದ್ದರಿಂದ ನಾಡು–ನುಡಿಯ ಬಗೆಗಿನ ಪ್ರೀತಿ, ಅಭಿಮಾನ ಸಹಜವಾಗಿಯೇ ಅವರ ಕಾವ್ಯದ ಮೂಲ ಸೆಲೆಗಳಲ್ಲಿ ಒಂದಾಯಿತು. ಮುಖ್ಯವಾಗಿ ಕಣವಿಯವರು ಬೇಂದ್ರೆ, ಪುಟ್ಟಪ್ಪನವರ ರಾಷ್ಟ್ರಗೀತೆಗಳಿಂದ ಪ್ರಭಾವಿತರಾದರೂ 'ಸಂವೇದನೆ ಮತ್ತು ಭಾಷೆ' ಇವೆರಡೂ ಕಣವಿಯವರಿಗೆ ತನ್ನತನದ ಛಾಪು ಇರುವುದರಿಂದ ಕಾವ್ಯ ರಚಿಸಲು ಸಾಧ್ಯವಾಯಿತು. ಪರಿಶೀಲನಾರ್ಹವಾದ ತೀಕ್ಷ್ಣತೆ, ಒಳನೋಟಗಳ ಒಲವುಗಳಿಂದ ಬೇರೊಂದು ವ್ಯಕ್ತಿತ್ವವನ್ನು ರೂಪಿಸಿಕೊಳ್ಳಲು ಅವರನ್ನು ಪ್ರೇರೇಪಿಸಿತು;

*ಹಿಮಶೈಲದುತ್ತುಂಗ ಶಿಖರದಿಂದೀ ಸೇತು*
*ವರೆಗೆ ಹಬ್ಬಿದ ನಾಡು ಭಾರತವಲಾ; ಗಂಗೆ*
*ಗೋದಾವರಿಯು, ಸಿಂಧು ಕಾವೇರಿಯರು*
*ತುಂಗೆ, ನರ್ಮದೆಯು, ಕೃಷ್ಣೆ ಓ,*
*ಬಿಡುಗಡೆಯ ಹಾಡಾಂತು ಹರಿಯುತಿವೆ* (ನಾವು ನಾಲ್ವತ್ತು ಕೋಟಿ–ಕಾವ್ಯಾಕ್ಷಿ)

ಭವ್ಯ ಭಾರತದೊಳಗೆ ಸಾಂಸ್ಕೃತಿಕ ಪ್ರತ್ಯೇಕವಾದ ಘನತೆ, ಗೌರವವನ್ನು ಪಡೆದುಕೊಂಡು ಕನ್ನಡ ನಾಡು, ತನ್ನದೇ ಆದ ಶ್ರೀಮಂತ ಸೊಬಗನ್ನು ಪಡೆದು ಕೊಂಡಿರುವಲ್ಲಿ ಹಿಂದೆ ಇಲ್ಲ. ಹಾಗೆಯೇ ಸಾಂಸ್ಕೃತಿಕವಾಗಿ ಪ್ರತಿಯೊಬ್ಬ ವ್ಯಕ್ತಿಯ ಆಶಯಗಳು ಒತ್ತು ನೀಡುವುದನ್ನು ಇನ್ನೊಂದು ಅರ್ಥದಲ್ಲಿ ಗಮನಿಸಬೇಕು.

*ಅರರೆ ನರಜೀವ ನರನ ನಿರಿಯುವದಿದೊಳ್ಳಿತೆ ?*
*ಜಾತಿ ಮತ ಪಂಥಗಳ ಕೊಳಚೆಯಲಿ ಕಚ್ಚಾಡಿ*
*ಸೋದರತೆ ಮಾನವತೆ ದಾನವತೆಯಂ ಕೂಡಿ*
*ಧುಮುಕಲಿದೆ ಬಿಸಿರಕುತ ಜಯ ಜಯವೆನ್ನಿ ಪಾಡಿ*

(ಹೋರು ಬೀಳ್ವನ್ನೆಗಂ – ಕಾವ್ಯಾಕ್ಷಿ)

– ಇಲ್ಲಿ ಮನುಷ್ಯ ಕುಲಕ್ಕೆ ಸೇರಿದ ನಾವುಗಳೆಲ್ಲ ಜಾತಿ, ಮತ, ಪಂಥಗಳನೆಣಿಸದೆ, ಭಾರತೀಯ ಸಂಸ್ಕೃತಿಯ ಘನತೆಯನ್ನು ಮೆರೆಯುವುದಕ್ಕಾಗಿ, ಬಂದಿವಾಸವನ್ನು ಬಿಡಿಸಿಕೊಂಡು ಸ್ವತಂತ್ರವಾಗಿ ಬದುಕುವುದಕ್ಕಾಗಿ ಒಗ್ಗೂಡಿ ಹೋರಾಡಲು ಸಿದ್ಧರಾಗ ಬೇಕಾಗಿದೆ ಎನ್ನುವ ಉದ್ದೇಶವನ್ನು ಕವಿ ಜನರೆದೆಯಲ್ಲಿ ತುಂಬುವ ವೀರಸಂಕಲ್ಪವಿದೆ. ಈ ಸಂಕಲ್ಪದ ಸಾರ್ಥಕ ಸ್ವರೂಪವೆನ್ನುವಂತೆ ನಮ್ಮ ದಾಸ್ಯತನದಿಂದ ಬಿಡುಗಡೆಗೊಂಡು ಭಾರತೀಯ ಸ್ವಾತಂತ್ರ್ಯದ ಹಬ್ಬದ ಬಾವುಟವನ್ನು ಬಾನೆತ್ತರಕ್ಕೆ ಹಾರಿಬಿಟ್ಟಿದ್ದು ಇದೇ ಸಂದರ್ಭದಲ್ಲಿಯೇ. ಹೀಗಾಗಿ ಇದರ ಜ್ವಲಂತ ವ್ಯಾಖ್ಯಾನ ಕವಿಯ ಕಾವ್ಯಧಾರೆಯಲ್ಲಿ ನೇರವಾಗಿ ಹರಿದುಬಂದಿದೆ.

ಕವಿ ತಾನು ಸ್ವಾತಂತ್ರ್ಯದ ದಿನವನ್ನು ಚಾತಕ ಪಕ್ಷಿಯಂತೆ ಕಾದು ಕುಳಿತಾಗ, ಬಹು ದಿನದ ಹಿರಿಯ ಬಯಕೆ 'ನಿಷೆಯಿಂದ ಉಷೆಯೆಡೆಗೆ, ಬಂಧದಿಂ ಬಿಡುಗಡೆಗೆ ಜನಕೋಟಿ ಸ್ವಾತಂತ್ರ್ಯ ತೀರದೆಡೆಗೆ' ಎನ್ನುತ್ತಾರೆ. ಬಂದ ಈ ಉತ್ಸಾಹದ ಹಿಂದಿರುವ ತ್ಯಾಗ, ಶ್ರಮ, ಬಲಿದಾನಗಳನ್ನು ಕವಿ ವರ್ಣಿಸುವ ರೀತಿ ಹೀಗಿದೆ :

*ದೇಶ ಭಕ್ತರನು ಸರ್ವಶಕ್ತರನು ಸೆರೆಯ ಕಾಳಕಿಳಿಸಿ*
*ಲಾಠಿ ಗುಂಡು ದುರ್ದಮ್ಯ ಶಿಕ್ಷೆ ಮರ್ದನೆಗೆ ರೂಪುಗೊಳಿಸಿ,*
*ಜನತೆಯುಸಿರ ಹತ್ತಿಕ್ಕಲೆಂದು ಸುತ್ತಾಡಿತಲ್ಲಿ ದಂಡು*
*ಅರಸುತನಕೆ ಓಗೊಟ್ಟುದಿಲ್ಲ ಎದೆಗೆಟ್ಟುದಿಲ್ಲ ಬಂಡು*

(ಬಂಧದಿಂ ಬಿಡುಗಡೆ – ಕಾವ್ಯಾಕ್ಷಿ)

ಆಂಗ್ಲರ ಆಳ್ವಿಕೆಯಲ್ಲಿ ಸಿಕ್ಕ ಭಾರತ ಛಿದ್ರಗೊಂಡ ತನ್ನೆಲ್ಲ ಸಂಪತ್ತನ್ನು, ವೈಭವವನ್ನು ಹಾಳುಮಾಡಿಕೊಂಡಿದೆ. ಸ್ವಾತಂತ್ರ್ಯದ ಒಂದೇ ಒಂದು ಬಲದಿಂದ ತನ್ನ ಹಿಂದಿನ ಸಿರಿಯನ್ನು ಮತ್ತು ಹೋಳಾದ ಭಾರತವನ್ನು ಮತ್ತೆ ಬೆಸೆಯುವ ಶಕ್ತಿ ಜನಕೋಟಿಗೆ ಇದ್ದೇ ಇದೆ ಎನ್ನುವ ಹಿರಿದಾದ ಆಶಾವಾದ ಕವಿಯಲ್ಲಿ ಉತ್ಕಟವಾದ ರೀತಿಯಲ್ಲಿ ಮೂಡುತ್ತದೆ.

## ಆದ್ದರಿಂದ...




ಶಿಶಿರದಲ್ಲಿ ಮರದಿಂದ
ಹಣ್ಣೆಲೆಗಳು ಜಾರಿದಂತೆ
ಎಪ್ಪತ್ತೈದು ವಸಂತಗಳು
ಜೀವನ ವೃಕ್ಷದಿಂದ ಜಾರಿ ಹೋಗಿವೆ.
ಚೂರುಗಳಾದ ಆಶಯಗಳ ಕನ್ನಡಿಯಲ್ಲಿ
ನನ್ನ ದೇಹಸಿರಿ ಸುಕ್ಕುಸುಕ್ಕಾಗಿ
ಜರಾಗ್ರಸ್ತ ದೈನ್ಯದಿಂದ ಪ್ರವಹಿಸುತ್ತಿದೆ
ಅತಿ ದಪ್ಪವಾದ ಬೈಂಡು ಬುಕ್ಕಿನ ಹಾಗಿರುವ
ನನ್ನ ಜೀವನಗ್ರಂಥದಲ್ಲಿ.
ಸಜೀವ ಪುಟಗಳಿಗೋಸ್ಕರ ಹುಡುಕುತ್ತಿರುವೆನು
ದೇವರೂ ದೆವ್ವಗಳೂ ಸ್ವಾರ್ಥಗಳೂ ಭಯಗಳೂ
ಧನಾಧಿಕಾರ ಮದಾಂಧತೆಗಳೂ
ತುಂಬಾ ತುಂಬಾ ಪುಟಗಳನ್ನು
ಚಿಂದಿಚಿಂದಿ ಮಾಡಿರುವಂತಿದೆ.
ಖಂಡವುಳ್ಳ ಅಕ್ಷರಗಳನ್ನು
ಹೃದಯ ಹಿಂಡುವ ಚಿತ್ರಗಳನ್ನು
ನೆಟ್ಟಗೆ ನಿರ್ದಯವಾಗಿ
ಹರಿದು ಛಿದ್ರಗೊಳಿಸಿದಂತಿದೆ
ಕಲೆಗಳನ್ನು ಬಲೆಗಳನ್ನು
ಕಬ್ಬಿಣದ ಹಲ್ಲುಗಳಿಂದ ಜಗಿದು ಬಿಟ್ಟಂತಿದೆ.
ಶಾಕ್ಯ ಮುನಿಯನ್ನು ಕೊಂದು
ಕೆಂಪು ಕಡಲಿನಲ್ಲಿ ನಿಲ್ಲಿಸಿರುವಂತಿದೆ
ಜೀವನವನ್ನು ಜೀವನದಷ್ಟೇ ಗಾಢವಾಗಿ ಪ್ರೇಮಿಸಿದರೂ
ಜೀವಂತವಾದ ನನ್ನ ಅಕ್ಷರಶಿಲ್ಪಗಳನ್ನು
ಒಡೆದ ಹೃದಯದಲ್ಲಿ ಭದ್ರಪಡಿಸಿಕೊಳ್ಳಲಾರದೇ ಹೋದೆ.
ನಡೆವ ದಾರಿ ಪಕ್ಕದಲ್ಲಿ ಏಕಾಕಿಯಾಗಿ ನಿಂತಿರುವ
ತಂತಿಗಳಿಲ್ಲದ ಕರೆಂಟು ನಾನು

ಪಿತೃವನದಲ್ಲಿ ಅರಳಿದ ಮಲ್ಲೆವನ
ಭಯಾಂದೋಳನಗಳ ಮಧ್ಯೆ ಹಿಂದೋಳ
ಎಲ್ಲಿ ತಂತಿಗಳು ? ಎಲ್ಲಿ ಸುಗಂಧಗಳು ?
ಆನಂದ ತರಂಗಗಳು ಕಂಡುಬರುತ್ತಿಲ್ಲೇಕೆ ?
ಹಿಂದಕ್ಕೆ ತಿರುಗಿ ನೋಡಿದರೆ ಪ್ರತಿ
ಹೆಜ್ಜೆ ರೋದಿಸುತ್ತಿದ್ದಂತೆ
ಪ್ರತೀಪಾದ ರಕ್ತ ಸುರಿಸುತ್ತಿದ್ದಂತೆ
ಚರಿತ್ರೆಗಂಟಿಕೊಂಡ ಕಲೆಗಳು
ನನ್ನನ್ನು ಸಂಗಮದಲ್ಲಿ ಮೂದಲಿಸುತ್ತಿವೆ.

ಅದಕ್ಕೇ ನಾನು
ದಣಿವರಿಯದ ಈ ಗಾಳಿ ಮಧ್ಯೆ
ನಗ್ನನಾಗಿ ನಿಲ್ಲಬಲ್ಲವನಾದೆನು
ಮಾರ್ತಾಂಡನ ಖರ ಕಿರಣ ಜ್ವಾಲೆಗೆ
ಬೂದಿಯಾಗಬಲ್ಲವನಾದೆನು
ವಿಶ್ವ ವೇದಿಕೆ ಮೇಲೆ ಉರಿಕೊಳ್ಳಿಗಳಂಥ
ನನ್ನ ಎಪ್ಪತ್ತೈದು ವರ್ಷಗಳನ್ನು
ಒಂದೇ ಸಲಕ್ಕೆ ನೇಣಿಗೆತ್ತಬಲ್ಲವನಾದೆನು.
ಏಕೆಂದರೆ
ಬುನಾದಿಯಿಲ್ಲದ ಮನುಷ್ಯರ ಮಧ್ಯೆ
ರೆಕ್ಕೆಗಳಿದ್ದೂ ಹಾರಲಾಗದ ಹಕ್ಕಿ ಹಾಗೆ
ನನ್ನ 'ಆಲೋಚನೆ' ಖೈದು ಮಾಡಲ್ಪಟ್ಟಿತು
ನನ್ನ ಹೃದಯ ಸ್ವರ್ಗ ಶೃಂಖಲಾಬದ್ಧವಾಯಿತು
ಸ್ವಾರ್ಥ ಮತ್ತೇಭ ಪ್ರಹಾರಕ್ಕೆ
ನನ್ನ ಆಶಯಗಳ ಕಾಮನಬಿಲ್ಲು
ಮೂರ್ಛೆಗೊಂಡಿತು.
ಸಾಗರದಲೆಗಳೂ ಆಕಾಶ ನಕ್ಷತ್ರಗಳೂ
ಸುಕ್ಷೇತ್ರಗಳೂ ಹಚ್ಚನೆ ಪರ್ವತಗಳೂ
ಹಿಮನಗಗಳೂ, ಅಗ್ನಿಪರ್ವತಗಳೂ
ಕೊನೆಗೆ ಹುಲ್ಲು ಕಡ್ಡಿಗಳೂ
ಈ ವಜ್ರಶಿಲಾ ಸದೃಶ ವ್ಯವಸ್ಥೆಯೊಂದಿಗೆ
ಒಂದು ಒಪ್ಪಂದ ಕುದುರಿಸಿಕೊಂಡಿವೆ...
...ಆದ್ದರಿಂದ...

ತೆಲುಗು ಮೂಲ : ಎಸ್. ಮುನಿಸುಂದರಂ
ಕನ್ನಡಕ್ಕೆ : ಕೆ. ವಿ. ಚಂದ್ರಜ್ಯೋತಿ
ಕರ್ನಾಟಕ ಪುಸ್ತಕ ಪ್ರದರ್ಶನ, ಸೆಂಟ್ರಲ್ ಲೈಬ್ರರಿ ಪಕ್ಕ
ಬಿ. ಹೆಚ್. ರಸ್ತೆ, ತುಮಕೂರು – ೫೭೨ ೧೦೧

ಚೆನ್ನವೀರ ಕಣವಿಯವರಂತೆ ಇನ್ನೊಬ್ಬ ಸಂವೇದನಾಶೀಲ ಮಹತ್ವದ ಕವಿಯಾದ ಗಂಗಾಧರ ಚಿತ್ತಾಲರ ಕಾವ್ಯದಲ್ಲಿ ಸ್ವಾತಂತ್ರ್ಯೋತ್ತರದ ಅತಿಯಾದ ಖಾರವಾದ ವಿಡಂಬನೆಯನ್ನು ನಾವು ಗಮನಿಸಬಹುದು. ಬೇಂದ್ರೆಯವರು ಸಾಮಾಜಿಕ ಪ್ರಜ್ಞೆಯುಳ್ಳ ಹಲವು ಕವಿತೆಗಳನ್ನು ಕನ್ನಡಕ್ಕೆ ನೀಡಿದ್ದಾರೆ. ಅವರ 'ಕುರುಡು ಕಾಂಚಾಣ,' 'ಭೂಮಿತಾಯಿಯ ಚೊಚ್ಚಿಲ ಮಗ', 'ಪುಟ್ಟ ವಿಧವೆ', 'ತುತ್ತಿನ ಚೀಲ', 'ಹೆಣದ ಹಿಂದೆ', 'ಬಾಳ ಕರವಾಳ', 'ಯಜ್ಞ' ಇತ್ಯಾದಿ ಕವಿತೆಗಳು ಈ ಧೋರಣೆಯುಳ್ಳವು. ಕುವೆಂಪು ಅವರ 'ಕಲ್ಕಿ', 'ಇಂದಿನ ದೇವರು', 'ಅವತಾರ' – ಹೀಗೆ ಇವರಲ್ಲಿಯೂ ಈ ನೆಲೆಯ ಕವಿತೆಗಳನ್ನು ಸಾಕಷ್ಟು ನೋಡುತ್ತೇವೆ. ಪು.ತಿ.ನ., ಬೇಂದ್ರೆ, ಮಾಸ್ತಿಯವರು ತಮ್ಮ ಕವನಗಳಲ್ಲಿ ಉಗ್ರ ಹೋರಾಟವನ್ನು ಸಾರದೆ, ಸುಧಾರಕನ ರೊಚ್ಚನ್ನು ಪ್ರಕಟಿಸದೆ, ಮಾನವೀಯ ಇತ್ಯಾತ್ಮಕತೆಯನ್ನು ಸಾರಿದರು. ಇವರು ಖಂಡಿಸುವ ರೀತಿಯ ಬದಲು ಮಾನವೀಯತೆ ಸಮಾನತೆಯನ್ನು, ಆರಾಧಿಸುವ ಕ್ರಮವನ್ನು ಅವರು ಆರಿಸಿಕೊಂಡರು. ಡಿ. ಆರ್. ನಾಗರಾಜ್‌ರವರು, 'ಶಕ್ತಿ ಶಾರದೆಯ ಮೇಳ' ಕೃತಿಯಲ್ಲಿ ಈ ರೀತಿ ಹೇಳುವಂತೆ, "ಮನುಷ್ಯ ಮತ್ತು ಸಮಾಜದ ಏಕೀಕೃತ ಸ್ಥಿತಿಗೆ ಭಂಗ ತರುವ ಈ ರೋಗಗಳ ವಿರುದ್ಧ ಕನ್ನಡ ನವೋದಯ ಕವಿತೆಗಳಲ್ಲಿ ಅತ್ಯಂತ ಉಗ್ರವಾಗಿ ಬಂಡೆದ್ದವರೆಂದರೆ ಕುವೆಂಪು" ಎಂದು ಅಭಿಪ್ರಾಯಪಡುತ್ತಾರೆ. ಇವರಲ್ಲಿಯೂ ಒಂದು ಸಂಸ್ಕೃತಿಯ ಜಾಯಮಾನದಲ್ಲಿ ಜಾರಿಯಲ್ಲಿರುವ ಮೌಲ್ಯಗಳ ತಿಳುವಳಿಕೆಗಳ ವಿವೇಚನಾಭಿವ್ಯಕ್ತಿಯಿದೆ; ಆಶಯಗಳಲ್ಲಿ, ಆಸಕ್ತಿಗಳಲ್ಲಿ ಒಂದೇ ಧೋರಣೆಯ ಒಲವು ಕಂಡುಬಂದರೂ ಅಭಿವ್ಯಕ್ತಿ ಕ್ರಮ, ವ್ಯವಸ್ಥೆಯ ಆಳದಿಂದ ಹೊರಡುವ ಅರ್ಥ, ಧ್ವನಿ ಭಿನ್ನವಾಗಿರುತ್ತದೆ. ಕಣವಿಯವರ ವಿಶಾಲ ಮನಸ್ಸು ಸಾಂಸ್ಕೃತಿಕಲೋಕಕ್ಕೆ ಮುಖಾಮುಖಿಯಾಗಿಸುವಂತೆ ವೈಯಕ್ತಿಕ ನೆಲೆಯಲ್ಲಿಯೂ ಅವರು ಮೌಲ್ಯ ಸ್ವೀಕಾರ ಗುಣವನ್ನು ಹೊಂದಿರುವುದು ನವೋದಯ ಪರಂಪರೆಯ ವಿಕಾಸಗುಣವನ್ನೇ ತೋರಿಸುತ್ತದೆ. ಉದಾಹರಣೆಗಾಗಿ ಕಣವಿಯ ಸಮಗ್ರಕಾವ್ಯದ ಕೆಲವು ಸಾಲುಗಳನ್ನು ಗುರುತಿಸಬಹುದು :

*ಬರೆದೆನಯ್ಯ ಗುರಿಯು ಚಿತ್ರ ಎದೆಯ ಕುದಿಯಲಿ* – (ಒಳ್ಳುಗಿರಿಗೆ – ಕಾವ್ಯಾಕ್ಷಿ)
*ಹಿರಿದು ಕಿರಿದೆಂಬುವುದು ಅಲ್ಪಬುದ್ಧಿ* – (ಭಾವಜೀವಿ)
*ನಮ್ಮ ಅನುಭವಗಳೇ ನಮ್ಮ ಗಳಿಕೆ*
*ಕಾಲದೊರೆಗಲ್ಲಿನಲಿ ನಿಂತ ಬಾಳ್ಕೆ* – (ಹೊಸಬಾಳು ನಮ್ಮದಿದೆ – ಆಕಾಶಬುಟ್ಟಿ)
*ಬಗಿದು ನೋಡುವ ಬಯಕೆ ಬಗೆಯೊಳಿದೆ; ಮನ್ನಣೆಯ*
*ಅಳಿಯಾಸೆ ಮಣ್ಣುಗೂಡಲಿ* (ಕವಿತೆಗೆ – ಮಧುಚಂದ್ರ)
*ಬರುವುದೆಲ್ಲ ಬರಲಿ ಬಿಡು ಏಕೆ ಅದರ ಚಿಂತೆ ?*
(ಬರುವುದೆಲ್ಲ ಬರಲಿ ಬಿಡು – ಆಕಾಶಬುಟ್ಟಿ)
*ಮನವು ಬಾನಗಲ, ಎದೆ ತಿಳಿಗೊಳದೊಲು*
*ಭಾವಶುದ್ಧ ಸ್ಫಟಿಕ್ – ಬೆಳದಿಂಗಳು ?* (ಗೆಳೆತನ – ಆಕಾಶಬುಟ್ಟಿ)

– ಇವುಗಳನ್ನು ಗಮನಿಸಿ 'ಕಣವಿಯವರ ಸಂಸ್ಕೃತಿ ಅವರ ಮೂಲಗುಣ; ಶಿಕ್ಷಣದಿಂದ ಪಡೆದ ಮುಖವಾಡವಲ್ಲ' ಎಂದು ಸಂಕ್ರಮಣ ಹೊಸ ಕಾವ್ಯದಲ್ಲಿ ಚಂಪಾ ಅವರು ಅಭಿಪ್ರಾಯಪಡುತ್ತಾರೆ. ಹೀಗೆ ಈ ತಲಸ್ಪರ್ಶಿಯಾದ ಗುಣದಿಂದಲೇ ಎಲ್ಲಿಯೂ ಅವರ ಭಾವನೆಗಳು ಕೃತಕವೆನ್ನಿಸುವುದಿಲ್ಲ. 'ಸದ್ಯ; ಪರಿನಿರ್ವೃತಿ'ಯಂತೆ ಹೃದಯವನ್ನು ಪ್ರೀತಿಯಿಂದ ಮಾತನಾಡಿಸುತ್ತವೆ. ಕಣವಿಯವರ ನೂರು ಕನಸುಗಳ ಸ್ವರೂಪ ವೈಯಕ್ತಿಕವಿದ್ದಂತೆ ಸಾಮಾಜಿಕವೂ ಆಗಿರುವುದು ಇವರ ಕೆಲವು ಕವನಗಳಲ್ಲಿ ನೋಡಬಹುದು.

*ಮನುಕುಲವು ಹೂವಾಗಿ, ಜಗವು ಜೇಂಗೊಡವಾಗಿ*
*ಮನವು ತನಿವಣ್ಣಾಗಲೆಂಬ ಹುಚ್ಚು* (ಭಾವಜೀವಿ)
*ದೈತ್ಯ ದರ್ಪದ ದುರುಳ ದಾರುಣದ ಹೋರಟೆಗೆ*
*ಎಂದೆಂದು ನನ್ನ ತಲೆ ಬಾಗದಿರಲಿ* (ಭಿನ್ನಹ – ಕಾವ್ಯಾಕ್ಷಿ)
*ನಿನ್ನ ನೋವಿನ ನಿನ್ನ ಕಂಬನಿಯೆ ಸಾಕು ?* (ಕಂಬನಿಯೆ ಸಾಕು – ಆಕಾಶಬುಟ್ಟಿ)
*ಯಾವ ಮಂದಿರದ ಆಧಾರಸ್ತಂಭಕೋ*




*ಕಾಣೆ ಇಂತು ಜೀವಸ್ತಂಭ ಸಿದ್ಧವಾಗಿ, ನಿಂತಿಹುದು*
*ಕರ್ತವ್ಯಬದ್ಧವಾಗಿ !* (ಬಾಳಕೊರಡು – ಆಕಾಶಬುಟ್ಟಿ)

"ಕಣವಿಯವರ ಕಾವ್ಯ ಆಂತರ್ಯದ ವಿಕಾಸಕ್ಕೆ ಕೊಟ್ಟಷ್ಟು ಅಥವಾ ಇನ್ನೂ ಒಂದು ತೂಕ ಹೆಚ್ಚು ಲಕ್ಷ್ಯವನ್ನು ಸಾಮಾಜಿಕ ಸ್ವಾಸ್ಥ್ಯಕ್ಕೆ ಕೊಟ್ಟಿದ್ದಾರೆ" ಎಂದು ಜಿ. ಎಸ್. ಆಮೂರ 'ಹೊಂಬೆಳಕು' ಪ್ರಸ್ತಾವನೆಯಲ್ಲಿ ಸಮರ್ಥವಾಗಿಯೇ ಗುರುತಿಸುತ್ತಾರೆ. ಕಣವಿಯವರ ಹೆಚ್ಚು ಪದ್ಯಗಳಲ್ಲಿ ಈ ಅಂಶ ಪ್ರಕಟವಾದದ್ದು ನಿಚ್ಚಳವಾಗಿಯೇ ಇದೆ. ಸತ್ಯವಾದ, ಚೆಲುವಾದ, ಅರ್ಥವತ್ತಾದ ಬಾಳನ್ನು ನೆಚ್ಚಿಕೊಂಡು ಹೋಗುವ ಈ ಕವಿ ತಮ್ಮ ಅಂತರಂಗದ ಕುರಿತೇ ಪ್ರಶ್ನೆಯೊಡ್ಡುತ್ತಾರೆ;

*ಕೀಳು ಬಾಳಿನಿಂದ ನೀನು*
*ಮೇಲಕೆತ್ತಲಾರೆಯೇನು ?* (ಒಳ್ಳುಗಿರಿ – ಕಾವ್ಯಾಕ್ಷಿ)

ಕವಿಯಲ್ಲಿ ಎಂಥ ಕಟುವಾದ ಧೈರ್ಯ, ಸಮಾಜದ ಗಂಭೀರ ಸ್ವರೂಪ ಬಾಯಿಬಿಚ್ಚಿದೆ;

*ವಿಧಿ ಮಾಟದೇರಾಟ ಹೋರಾಟಗಳಿಗೆಲ್ಲ*
*ಎದೆಗೊಟ್ಟು ನಿಲ್ಲು ಜೀವ;*
*ಕಲ್ಲು ಕಲ್ಲಾಗಲೆದೆ ಸಂಕಷ್ಟ ಸಂತತೆಗೆ* (ನಂಜುಂಡನಾಗಿ ಬಾಳು– ಕಾವ್ಯಾಕ್ಷಿ)
*ಬಾಳಿನುಯ್ಯಾಲೆಯನು ತಾಳ್ಮೆಯಲಿ ತೂಗು* (ತಾಳ್ಮೆ – ಕಾವ್ಯಾಕ್ಷಿ)

'ಮಧುರ ಚೆನ್ನರ ನೆನಪಿಗೆ' – ಮಧುರ ಚೆನ್ನ ನಮ್ಮ ನಾಡಿನ ಜಾನಪದ ಸೊಗಡನ್ನು ಜನತೆಗೆ ನಾಡು ನುಡಿಗೆ ಸೇವೆ ಸಲ್ಲಿಸಿದ ವ್ಯಕ್ತಿ ಮತ್ತು ಬೇಂದ್ರೆಯವರಿಗೆ ಪ್ರಭಾವ ಬೀರಿದ ವ್ಯಕ್ತಿ. ಅಂಥವರನ್ನು ಕುರಿತು ನೆನೆದು ಕಣವಿಯವರು ಈ ಕವನ ಬರೆದಿದ್ದಾರೆ. ಅವರಾಡುವ ನುಡಿಯಿಂದ ಜನಪದ ಸಾಹಿತ್ಯ ಸೃಷ್ಟಿಯಾದ ನಂತರ ಅದಕ್ಕೆ ಸಂಗೀತದೊಡನೆ ಮೇಳೈಸಿ ಜನಸಾಮಾನ್ಯರಿಗೆ ಜನಪದ ಸಾಹಿತ್ಯ ಸವಿಯನ್ನು ನೀಡಿದವರು. ಅದನ್ನು ಕವಿಯು ಈ ರೀತಿ ಹೇಳುತ್ತಾರೆ:

*ಹೂವು ಹೂವಿನ ಜೇನು ತೊಳೆಬಿಡಿಸಿ*
*ಸುಗ್ಗಿಯ ಮಾಡಿದರಂದು ನಾಡನಲಿಸಿ*
(ಮಧುರ ಚೆನ್ನರ ನೆನಪಿಗೆ – ದಾರಿದೀಪ)

ವಿಮರ್ಶಾತ್ಮಕವಾಗಿ ಹೇಳುವುದಾದರೂ ಹಳೆಯ ಕಸದ ರಸವನ್ನು ಗಂಧದೊಡನೆ ತೇಯಿದು ಗಮಗಮಿಸುವ ರೀತಿ ಎಂದು ಹೇಳಬಹುದು. ಜನಪದ ಸಾಹಿತ್ಯದ ಎಲ್ಲಾ ರೀತಿ ಎಳೆ ಎಳೆ ಬಿಡಿಸಿ ಸಂಗೀತದೊಡನೆ ಮೇಳೈಸಿ ನಾಡನ್ನು ಕಟ್ಟಿದವರು. ನಾಡಿಗೆ ನಮ್ಮ ಜನಪದ ಸಂಸ್ಕೃತಿಯನ್ನು ಪರಿಚಯಿಸಿದವರು. ಪ್ರೀತಿಯ ಜಲಧಾರೆಯನ್ನು ಜನಮನಕ್ಕೆ ಪರಿಚಯಿಸಿ ತನು ಮನ ಧನ ಅರ್ಪಿಸಿದ ಮಧುರ ಚೆನ್ನರವರನ್ನು ಕಣವಿಯವರು ಸ್ಮರಿಸುವ ರೀತಿ ಇದಾಗಿದೆ :

*ತನುವು ನಿಸದೀಕಲ್ಲು, ಮನವು ಮಾಸತಿಕಲ್ಲು*
*ನಿಮ್ಮ ಸಾಧನೆಗೊಂದು ವೀರಗಲ್ಲು !*
*ಭಾವ ದೇವಾಲಯದಿ ನಿತ್ಯ ಸಂದಾದೀಪ*
*ಶರಣ ಶರಣೆಂಬುದೇ ಕೊನೆಯ ಸೊಲ್ಲು*
(ಮಧುರ ಚೆನ್ನರ ನೆನಪಿಗೆ– ದಾರಿದೀಪ)

ತಮ್ಮ ಜೀವಮಾನವೆಲ್ಲವನ್ನೂ ನಾಡಿಗೆಲ್ಲ ಸಮರ್ಪಿಸಿ ಜನಪದ ಕಾವ್ಯ ಜನಸಾಮಾನ್ಯರಿಗೆ ವಿಡಂಬಿಸಿದ ರೀತಿಯನ್ನು ದೇಹ ನಿಶದೀಕಲ್ಲು ಮನಸ್ಸು ಮಾಸತಿಕಲ್ಲು ಎನ್ನುವ ರೀತಿಯಲ್ಲಿ ನಮ್ಮ ನಾಡಿಗೆ ಮರೆಯಲಾರದಂತಹ ಕೆಲಸ ಮಾಡಿದ್ದಾರೆ.

ಜಿ. ಎಸ್. ಎಸ್. ಮತ್ತು ಕಣವಿಯವರು ಸಮಾಜಕ್ಕೆ ಅಭಿಮುಖವಾಗಿ ನಿಸರ್ಗ ಇತರೆ ವಿಚಾರಗಳಿಗೆ ಮೇಳೈಸಿ ಸಾಮಾಜಿಕ ವಿಚಾರಗಳನ್ನು ಚಿತ್ರಿಸಿದ್ದಾರೆ. ಜಿ. ಎಸ್. ಎಸ್. ಮತ್ತು ಕಣವಿಯವರು ಸ್ವಾತಂತ್ರ್ಯಪೂರ್ವದ ಘಟನೆ ಮತ್ತು ತುರ್ತುಪರಿಸ್ಥಿತಿಯಂತಹ ಘಟನೆಗಳನ್ನು ಸಮಾಜಮುಖಿಯಾಗಿ ಚಿತ್ರಿಸಿದ್ದಾರೆ. ರಾಜಕೀಯ ಪರಿಸ್ಥಿತಿ ಹಾಗೂ ಈಸ್ಟ್ ಇಂಡಿಯಾ ಆಡಳಿತವನ್ನು ಕಟಕಿಸುವಂತಹ ಕವನಗಳನ್ನು ಬರೆದಿದ್ದಾರೆ.

**ಅಶೋಕ ಜಿ. ಎಸ್.**
ಸಹಾಯಕ ಪ್ರಾಧ್ಯಾಪಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು
ಬಾಪೂಜಿ ನಗರ, ಶಿವಮೊಗ್ಗ – ೫೭೭ ೨೦೧

**ಯು**ಕ್ರೇನ್ ಈಗ ಪೂರ್ವ – ಪಶ್ಚಿಮ ಸಂಘರ್ಷಕ್ಕೆ ಸಿದ್ಧವಾಗುತ್ತಿರುವ ಕಣ. ಇದು ಸ್ಫೋಟಗೊಂಡು ಘರ್ಷಣೆಯಾಗುವ ಸಂಭವ ಸದ್ಯಕ್ಕೆ ದೂರ. ರಷ್ಯ, ಯುರೋಪಿಯನ್ ಒಕ್ಕೂಟ ಮತ್ತು ಅಮೆರಿಕಗಳ ಮೇಲಾಟದಲ್ಲಿ ಆತಂಕಕ್ಕೆ, ತೊಂದರೆಗೆ ಈಡಾಗಿರುವವರು ಯುಕ್ರೇನಿನ ಜನಸಾಮಾನ್ಯರು. ಸ್ವತಂತ್ರ ರಾಷ್ಟ್ರವಾಗಿ ಇಪ್ಪತ್ತೆರಡು ವರ್ಷಗಳ ಹಿಂದೆ ಅಸ್ತಿತ್ವಕ್ಕೆ ಬಂದಾಗಿನಿಂದ ಯುಕ್ರೇನ್ ರಾಜಕೀಯವಾಗಿ, ಆರ್ಥಿಕವಾಗಿ ತನ್ನ ನೆಲೆ ಕಂಡುಕೊಳ್ಳಲೇ ಇಲ್ಲ. ರಷ್ಯನ್ ಫೆಡರೇಶನ್ ಸ್ಥಾಪಿತ ಕಾಮನ್‌ವೆಲ್ತ್‌ನ ಸದಸ್ಯನಾಗಿದ್ದರೂ ಪಶ್ಚಿಮ ರಾಷ್ಟ್ರಗಳ ಕಣ್ಣು ಅದರ ಮೇಲಿತ್ತು. ಜಾರ್ಜಿಯ ಮತ್ತು ಯುಕ್ರೇನ್‌ಗಳನ್ನು ತನ್ನತ್ತ ಸೆಳೆದುಕೊಳ್ಳಲು ಈ 'ನ್ಯಾಟೊ' ರಾಷ್ಟ್ರಗಳು ತೆರೆಮರೆಯಲ್ಲಿ ಪ್ರಯತ್ನ ನಡೆಸುತ್ತಿದ್ದುದು ರಹಸ್ಯವೇನಲ್ಲ. ಹದಿನೇಳನೆ ಶತಮಾನದಿಂದ ರಷ್ಯಾದ ಸಾಮ್ರಾಜ್ಯದ ನೆರಳಿನಲ್ಲಿದ್ದ ಯುಕ್ರೇನಿನ ದಕ್ಷಿಣ ಮತ್ತು ಪೂರ್ವ ಭಾಗಗಳಲ್ಲಿ ರಷಿಯನ್ ಭಾಷೆ ಮಾತಾಡುವ




# ಯುಕ್ರೇನ್ ಬಿಕ್ಕಟ್ಟು : ಮತ್ತೊಂದು ಶೀತಯುದ್ಧಕ್ಕೆ ನಾಂದಿಯೆ?

ಜನ ವಾಸವಾಗಿದ್ದರೆ ಅವರ ರಕ್ಷಣೆಗೆ ರಷ್ಯಾ ಬದ್ಧ. ಯುಕ್ರೇನ್‌ನಲ್ಲಿ ದೊಡ್ಡ ಪ್ರಮಾಣದಲ್ಲಿ ಮಿಲಿಟರಿ ಕೈಗಾರಿಕೆಗಳಿವೆ. ಸೋವಿಯೆತ್ ಆಡಳಿತದ ಕಾಲದಲ್ಲಿ ಸ್ಥಾಪಿತವಾದುವು ಅವು. ೧೯೯೭ರಲ್ಲಿ ರಷ್ಯ ಮತ್ತು ಯುಕ್ರೇನ್‌ಗಳು ಕಪ್ಪು ಸಮುದ್ರ ನೌಕಾದಳದ ವಿಭಜನೆ ಕುರಿತು ಒಂದು ಒಪ್ಪಂದಕ್ಕೆ ಬಂದುವು. ಅದರ ಪ್ರಕಾರ ಶೇ. ೮೧ರಷ್ಟು ಭಾಗ ರಷ್ಯದ ಪಾಲಿಗೆ ಬಂದಿತು. ಸೆವಾಸ್ತಪೋಲ್ ಮತ್ತು ಕ್ರಿಮಿಯದಲ್ಲಿರುವ ಮಿಲಿಟರಿ ಸ್ಥಾಪನೆಗಳನ್ನು ಅದು ಒಳಗೊಂಡಿದೆ. ಈಗ ರಷ್ಯ ತನ್ನ ಹಿತಾಸಕ್ತಿ ಕಾಪಾಡಿಕೊಳ್ಳಲು ಮುಂದಾಗಿದೆ. ರಷ್ಯ ಕ್ರಿಮಿಯ ಭೂಭಾಗಕ್ಕೆ ತನ್ನ ಸೇನೆಯನ್ನು ರವಾನಿಸಿದೆ. ಈ ಭಾಗದಲ್ಲಿ ಮೊದಲೇ ೧೬,೦೦೦ ರಷ್ಯನ್ ಸೈನಿಕರಿದ್ದರು ನೌಕಾನೆಲೆ ಹಾಗೂ ವಿಮಾನ ನಿಲ್ದಾಣಗಳನ್ನು ಕಾಪಾಡಿಕೊಳ್ಳಲು.



ಕಳೆದ ನಾಲ್ಕು ತಿಂಗಳಿಂದ ಯುಕ್ರೇನಿನಲ್ಲಿ ತಳಮಳ. ಅಧ್ಯಕ್ಷ ವಿಕ್ಟರ್ ಯಾನುಕೋವಿಚ್ ಸರಕಾರದ ವಿರುದ್ಧವಾಗಿ ಪಾಶ್ಚಾತ್ಯ ಪ್ರೇರಿತ ವಿರೋಧಿಗಳ ಹೋರಾಟ. ಅಸ್ಥಿರ ಪರಿಸ್ಥಿತಿ. ಭ್ರಷ್ಟಾಚಾರದ ಆಪಾದನೆಗಳಿಗೆ ಗುರಿಯಾದ ಯಾನುಕೋವಿಚ್‌ನಿಂದ ವಿರೋಧಿಗಳನ್ನು ದಮನಗೊಳಿಸಲು ಕ್ರಮ ನಡೆದ ಹಿಂಸಾಚಾರದಲ್ಲಿ ನೂರಾರು ಜನರು ಬಲಿ. ಫೆಬ್ರುವರಿ ೨೨ರಂದು ಅಧ್ಯಕ್ಷರ ಪರಾರಿ. ಒಂದು ರೀತಿಯ ಅಂತರ್ಯುದ್ಧದ ಪರಿಸ್ಥಿತಿ ನಿರ್ಮಾಣ. ಈ ಗೊಂದಲದಲ್ಲಿ ಯಾಕ್ರೇನಿಯನ್ ಪಾರ್ಲಿಮೆಂಟಿನ ಅಧ್ಯಕ್ಷ ಅಲೆಕ್ಸಾಂಡರ್ ಬಲೆಕ್ಸಾಂಡರ್ ತುರ್ಚಿನೋವ್ ಅಧಿಕಾರಕ್ಕೆ. ಮುಂದಿನ ಮೇ ತಿಂಗಳ ಕೊನೆಯಲ್ಲಿ ಚುನಾವಣೆಗಳನ್ನು ನಡೆಸಲು ನಿರ್ಧಾರ. ಯೂರೋಪಿಯನ್ ಯೂನಿಯನ್ ಸೇರುವ ಒಪ್ಪಂದವನ್ನು ಯಾನುಕೋವಿಚ್ ತಡಮಾಡಿದ್ದೇ ವಿರೋಧಿಗಳ ಪ್ರತಿಭಟನೆಗೆ ನಾಂದಿ. ಮೂರು ತಿಂಗಳ ಹಿಂದೆ ರಾಜಧಾನಿ ಕೀವ್‌ನಲ್ಲಿ ಪ್ರಾರಂಭವಾದ ಆಂದೋಳನ ಇತರ ಕಡೆಗಳಿಗೂ ಹರಡಿತು. ಪರಿಸ್ಥಿತಿ ಹತೋಟಿಗೆ ತರಲು ವಿಫಲಗೊಂಡ ಅಧ್ಯಕ್ಷನಿಂದ ಪಲಾಯನ. ತೀವ್ರವಾದ



ಆರ್ಥಿಕ ಮುಗ್ಗಟ್ಟಿನಿಂದಾಗಿ ದಿವಾಳಿಯ ಅಂಚಿನಲ್ಲಿರುವ ಯುಕ್ರೇನಿನ ಜನ ಸರಕಾರದ ವಿರುದ್ಧವಾಗಿ ನಿಂತಿದ್ದರಲ್ಲಿ ಆಶ್ಚರ್ಯವೇನಿಲ್ಲ. ಕೀವ್‌ನಲ್ಲಿ ಪ್ರಾರಂಭವಾದ ವಿರೋಧಿಗಳ ಹೋರಾಟಕ್ಕೆ ಅಮೆರಿಕ ಮತ್ತು ಪಾಶ್ಚಾತ್ಯ ದೇಶಗಳು ನೇರವಾಗಿಯೇ ಬಂಡಾಯಕ್ಕೆ ಕುಮ್ಮಕ್ಕು ನೀಡಿದುವು. ಇಲ್ಲಿ ನಡೆದ ವಿದ್ಯಮಾನಗಳು ಪಾಶ್ಚಾತ್ಯ ಪ್ರೇರಿತ ಸಂಚು ಎನ್ನುವುದರಲ್ಲಿ ಸಂಶಯವಿಲ್ಲ. ಇಂಥ ಪರಿಸ್ಥಿತಿ ತನ್ನ ಹಿತಾಸಕ್ತಿಗಳನ್ನು ಕಾಪಾಡಿಕೊಳ್ಳಲು ರಷ್ಯಾದ ಸೇನೆ ಮುಂದಾಗಿರುವುದರಲ್ಲಿ ಆಶ್ಚರ್ಯವೇನಿಲ್ಲ. ಈ ಎಲ್ಲ ಬೆಳವಣಿಗೆಗಳನ್ನು ನೋಡಿದಲ್ಲಿ ಮತ್ತೊಂದು ಶೀತಲ ಸಮರ ಸನ್ನಿಹಿತವೇ ಎನಿಸುತ್ತದೆ.

ಕ್ರಿಮಿಯಾಗೆ ರಷ್ಯಾ ಸೇನೆಯ ರವಾನೆಯನ್ನು ಅಮೆರಿಕ ಮತ್ತು ಪಾಶ್ಚಾತ್ಯ ದೇಶಗಳು ಉಗ್ರವಾಗಿ ಖಂಡಿಸಿವೆ. ಜಿ – ೭ ರಾಷ್ಟ್ರಗಳು – ಅಮೆರಿಕ, ಕೆನಡ, ಫ್ರಾನ್ಸ್, ಜರ್ಮನಿ, ಬ್ರಿಟನ್, ಇಟಲಿ, ಜಪಾನ್‌ಗಳು ಸಭೆ ಸೇರಿ ರಷ್ಯಾಗೆ ಎಚ್ಚರಿಕೆ ನೀಡಿವೆ. ಈ ಮಧ್ಯೆ ಕ್ರಿಮಿಯಾ ಪ್ರಾಂತ ಯುಕ್ರೇನಿನಿಂದ ಪ್ರತ್ಯೇಕಗೊಳ್ಳುವ ಸಾಧ್ಯತೆಯೂ ಇದೆ. ಪಾಶ್ಚಾತ್ಯ ರಾಷ್ಟ್ರಗಳು ಆರ್ಥಿಕ ದಿಗ್ಬಂಧನದ ಬೆದರಿಕೆ ಹಾಕಿವೆ. ಆದರೆ ಈ ಬಗ್ಗೆ ಒಮ್ಮತವಿಲ್ಲ. ಈ ಮಧ್ಯೆ ಯುಕ್ರೇನಿನ ಪ್ರಧಾನಿ ಅಮೆರಿಕಕ್ಕೆ ಭೇಟಿ ನೀಡಿ ಅಧ್ಯಕ್ಷ ಒಬಾಮರನ್ನು ಭೇಟಿಯಾಗಿದ್ದಾರೆ. ಅಮೆರಿಕ ಕೂಡ ಸಂಘರ್ಷಕ್ಕೆ ಸನ್ನದ್ಧವಾಗಿದೆ. ಪೋಲೆಂಡ್ ಮತ್ತು ಲಿಥುವೇನಿಯಗಳಲ್ಲಿ ಅಧಿಕವಾಗಿ ಫೈಟರ್ ವಿಮಾನಗಳನ್ನು ರವಾನಿಸಿದೆ ಮತ್ತು ತನ್ನ ನೌಕಾಸೇನೆಯನ್ನು ಸಜ್ಜುಗೊಳಿಸಿದೆ. ಅಮೆರಿಕ ಪ್ರಪಂಚದ ಯಾವುದೇ ಭಾಗದಲ್ಲಿ ತನ್ನ ಹಿತಾಸಕ್ತಿಗಳನ್ನು ಕಾಪಾಡಿಕೊಳ್ಳಲು ಏನೇ ದುರಾಕ್ರಮಣ ನಡೆಸಿದರೂ ಅದು ಸಮರ್ಥನೀಯ. ಆದರೆ ಇತರರು ಕ್ರಮ ಕೈಗೊಂಡರೆ ಅದು ಅಕ್ರಮ. ಇದು ಮೊದಲಿನಿಂದಲೂ ಅಮೆರಿಕ ಮತ್ತು ನ್ಯಾಟೋ ಕೂಟದ ನಿಲುವು. ರಷ್ಯಾವನ್ನು ಹದ್ದುಬಸ್ತಿನಲ್ಲಿರಿಸಿಕೊಳ್ಳುವ ಹಂಚಿಕೆಯಲ್ಲಿ ಯುಕ್ರೇನಿನ ಬೆಳವಣಿಗೆ ಒಂದು ದೃಷ್ಟಾಂತ. ಸೋವಿಯೆತ್ ಒಕ್ಕೂಟ ವಿಘಟನೆಗೊಂಡ ನಂತರ ಸ್ಥಾಪನೆಗೊಂಡ ಸ್ವತಂತ್ರ ರಾಷ್ಟ್ರ ಕಾಮನ್‌ವೆಲ್ತ್ ಸಂಘಟನೆಯನ್ನು ಛಿದ್ರಗೊಳಿಸಲು, ದುರ್ಬಲಗೊಳಿಸಲು ಪ್ರಯತ್ನಗಳು ನಡೆದೇ ಇವೆ. ಆರೆಂಜ್ ರೆವೊಲ್ಯೂಷನ್, ಪಿಂಕ್ ರೆವೊಲ್ಯೂಷನ್‌ಗಳನ್ನು ಇಲ್ಲಿ ನೆನಪು ಮಾಡಿಕೊಳ್ಳಬಹುದು. ಯುಕ್ರೇನಿನ ಬೆಳವಣಿಗೆಗಳು ಅದರ ಒಂದು ಭಾಗ ಕ್ರಿಮಿಯದ ಜನರು ಈಚೆಗೆ ಜರುಗಿದ ಜನಮತ ಗಣನೆಯಲ್ಲಿ ಶೇ. ೯೭ರಷ್ಟು ಬಹುಮತದಿಂದ ಸ್ವತಂತ್ರಗೊಂಡು, ರಷ್ಯದ ಜೊತೆ ದೃಢವಾದ ಸಂಬಂಧಗಳ ಸ್ಥಾಪನೆಗೆ ಪರವಾಗಿ ಅಭಿಪ್ರಾಯ ವ್ಯಕ್ತಗೊಳಿಸಿದ್ದಾರೆ, ರಷ್ಯದ ಅಧ್ಯಕ್ಷ ಪುಟಿನ್ ಇದಕ್ಕೆ ಮಾನ್ಯತೆಯನ್ನು ನೀಡಿದ್ದಾರೆ. ಇದರಿಂದಾಗಿ ಪರಿಸ್ಥಿತಿ ಇನ್ನಷ್ಟು ಬಿಗಡಾಯಿಸಿದೆ. ಬಿಕ್ಕಟ್ಟು ಶೀಘ್ರವಾಗಿ, ಶಾಂತಿಯುತವಾಗಿ ಬಗೆಹರಿದರೆ ಒಳಿತು.

**ಸೀಯಾರ್ಕೆ**
'ಚೌಬೀನ', ನಂ. ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು – ೫೬೦ ೦೮೫



# ಎಡಚನೊಬ್ಬನ ಒಂದಿಷ್ಟು ಅಳಲುಗಳು

ಎಡಚರಾಗುವದಕ್ಕೆ ಕಾರಣಗಳೇನು ಎಂದು ಹುಡುಕ ಹೊರಟಾಗ ಯಾವುದೋ ಪುಸ್ತಕದಲ್ಲಿ ಎಡಚರ ಬಗ್ಗೆ ಬರೆದಿದ್ದು ಸಿಕ್ತು. ಎಡಚರಾಗುವುದು ರೂಢಿಯಿಂದಲ್ಲ. ಹುಟ್ಟಿನಿಂದ. ಸಾಮಾನ್ಯರಿಗೂ ಎಡಚರಿಗೂ ಮೆದುಳಿನ ಒಂದು ಭಾಗದಲ್ಲಿ ಚಿಕ್ಕ ವ್ಯತ್ಯಾಸಗಳಿರುತ್ತವೆ. ಎಡಚರು ವಿಶೇಷ ವ್ಯಕ್ತಿಗಳಾಗಿರುತ್ತಾರೆ, ಹೀಗೆ... ಇನ್ನು ಏನೇನೋ ವೈಜ್ಞಾನಿಕ ಕಾರಣಗಳನ್ನು ಓದಿದ ನೆನಪು.

ಕೆಲವು ದಿನಗಳ ಹಿಂದೆ ಯಾವುದೋ ಕಾಯಿಲೆಗೆ ಸಂಬಂಧಪಟ್ಟಂತೆ ಊರಲ್ಲೆಲ್ಲಾ ಒಂದೇ ದಿನ ಸಾಮೂಹಿಕ ಗುಳಿಗೆ ವಿತರಣಾ ಮಾಡುವ ಕೆಲಸಕ್ಕೆ ಸಿಬ್ಬಂದಿಗಳ ಕೊರತೆ ಎಂದು ಸದಾ ಆಫೀಸ್‌ನಲ್ಲಿ ಕುಳಿತಿರುತ್ತಿದ್ದ ನನ್ನನ್ನೂ ಹಾಕಿದ್ದರು. ತಪ್ಪಿಸಿಕೊಳ್ಳಲು ಸಾಧ್ಯವಾಗದೇ ಗೊಣಗುತ್ತಲೇ ಸಹೋದ್ಯೋಗಿ ಜೊತೆ ಗುಳಿಗೆ ಹಂಚಲು ಮನೆ ಮನೆಗೆ ಹೊರಟೆ. ಸಹೋದ್ಯೋಗಿ ಮನೆಯ ಜನರ ಹೆಸರು, ವಯಸ್ಸು ಇತ್ಯಾದಿ ಬರೆದುಕೊಳ್ಳೋದು, ಅದಕ್ಕೆ ಸರಿಯಾಗಿ ಗುಳಿಗೆ ಎಣಿಸಿ ಕೊಡೋದು ನನ್ನ ಕೆಲಸ. ಸುಮಾರು ಅರ್ಧದಷ್ಟು ಮನೆ ತಿರುಗಿ ಆದಮೇಲೆ ಬರೆಯುವ ಕೆಲಸ ನನಗೂ ಗುಳಿಗೆ ಎಣಿಸಿ ಕೊಡುವ ಕೆಲಸ ನನ್ನ ಸಹೋದ್ಯೋಗಿಗೂ ಬದಲಾಯಿತು. ಸುಮಾರು ಮೂರು ಮನೆಗಳಲ್ಲಿ ಬರೆದು ಮುಗಿಸಿ ನಾಲ್ಕನೇ ಮನೆಗೆ ಹೋಗಿರಬೇಕು. ಆಗ ತಾನೇ ಪೂಜೆಗೆ ತಯಾರಿಗಿದ್ದ ನಡುವಯಸ್ಸಿನ ಬ್ರಾಹ್ಮಣನಿಗೆ ನಮ್ಮ ಪ್ರವೇಶ ಸಹ್ಯವಾಗದಿದ್ದುದು ಅವರ ಮೂಕ ಭಾವದಿಂದಲೇ ಗೊತ್ತಾಯಿತು. ಒಲ್ಲದ ಮನಸ್ಸಿನಿಂದಲೇ ವಿವರ ಹೇಳತೊಡಗಿದ್ದ. ನಾನು ಬರೆಯತೊಡಗಿದ್ದೆ. ಸಹೋದ್ಯೋಗಿ ಗುಳಿಗೆ ಎಣಿಸಲು ತೊಡಗಿದ್ದ. ಇನ್ನೇನು ಬರೆಯುವುದು ಮುಗಿಯುತ್ತಾ ಬಂದಿತ್ತು, ಅಷ್ಟರಲ್ಲಿ ಒಂಥರಾ ಧ್ವನಿಯಲ್ಲಿ, "ಓ ನೀವು ರೊಡ್ಡನಾ, ಬಲಗೈಯಲ್ಲಿ ಬರೆಯೋಕ್ಕೆ ಬರಲ್ವಾ, ಹೀ, ಹೀ" ಎಂದು ವ್ಯಂಗ್ಯವಾಗಿ ಹೇಳುತ್ತ ಹಲ್ಲು ಗಿಂಜತೊಡಗಿದ್ದ. ನಾನು ಎಡಚನೆಂಬುದು ನಾನೇ ಮರೆತು ಹೋಗಿರುವಾಗ, ಇವರಿಂದ ಬಂದ ಮಾತು ಕೇಳಿದಾಗ ಒಂಥರಾ ಗಲಿಬಿಲಿ, ಶಾಕ್, ಅವಮಾನ ಆದಂತಾಯಿತು. ಆದರೂ ಅದನ್ನು ತೋರ್ಪಡಿಸಿಕೊಳ್ಳದೆ "ಹೌದು, ನಾನು ಎಡಚ" ಎಂದು ಹೇಳಿ ನಮ್ಮ ಕೆಲಸ ಮುಗಿಸಿ ಹೊರಟೆವು. ಬ್ರಾಹ್ಮಣ ಅಪಶಕುನ ಅಪಶಕುನ ಎಂದು ಗೊಣಗುತ್ತ ಪೂಜೆಗೆ ಹೊರಟ. ನನಗೆ ಬೇಸರವಾಗಿದ್ದನ್ನು ಮನಗಂಡ ಸಹೋದ್ಯೋಗಿ ಬೇರೆ ಯಾವುದೇ ವಿಷಯದ ಬಗ್ಗೆ ಮಾತನಾಡತೊಡಗಿದ್ದರೂ ನನಗೆ ಬಾಲ್ಯದಿಂದಲೂ ಎಡಚನೆಂಬ ಕಾರಣಕ್ಕೆ ಅನುಭವಿಸಿಕೊಂಡು ಬಂದ ವಿವಿಧ ಅನುಭವಗಳು ಕಣ್ಣುಮುಂದೆ ಹಾದುಹೋಯಿತು.

ನಾನು ಎಡಚನೆಂಬ ಅರಿವಿಗೆ ಬಂದ ಮೊದಲ ಘಟನೆ ಬಹುಶಃ ಅದೇ ಇರಬೇಕು. ವಯಸ್ಸು ಐದರಿಂದ ಆರು ಇರಬಹುದೇನೋ, ನಾವು ನಾಲ್ಕೈದು ಮಂದಿ ಮಕ್ಕಳು ಆಟ ಆಡುತ್ತಿದ್ದೆವು. ಏನೋ ಯಾವುದೋ ವಿಷಯಕ್ಕೆ ಜಗಳ ಸುರುವಾಗಿ ಒಬ್ಬನಿಗೆ ಹೊಡೆಯಲು ಹೋದೆ. ಆತ ತಪ್ಪಿಸಿಕೊಂಡು 'ರೊಡ್ಡ ರೊಡ್ಡ' ಎಂದು ಅಣಕಿಸುತ್ತಾ ಓಡತೊಡಗಿದ್ದ. ಉಳಿದ ಗೆಳೆಯರು ಸಹ 'ರೊಡ್ಡ' ಎಂದು ಹೇಳುತ್ತ ನಗತೊಡಗಿದ್ದರು. ನನಗೆ ರೊಡ್ಡ ಅಂದರೆ ಏನು ಅಂತಾನೇ ಗೊತ್ತಾಗದೇ ಅವಮಾನವಾದಂತಾಗಿ ಅಳುತ್ತಾ ಅಮ್ಮನ ಹತ್ತಿರ ಹೋಗಿ ಹೇಳಿದೆ. ಆಗ ಅಮ್ಮ ರೊಡ್ಡ ಅಂತಾ ಕರೆದಿದ್ದು ನೀನು ಎಡಗೈ ಮುಂದೆ ಮಾಡಿ ಹೊಡೆಯಲು ಹೋಗಿದ್ದಕ್ಕೆ. ನೀನು ಎಡಗೈಯಲ್ಲಿ ಬರೆಯೋದು ಮತ್ತು ಎಲ್ಲ ಕೆಲಸಕ್ಕೆ ಎಡಗೈ ಮುಂದೆ ಮಾಡುತ್ತಿ ಎಂದು ತಿಳಿಸಿದಾಗಲೇ ನಾನು ಇತರರಿಗಿಂತ ಡಿಫರೆಂಟ್ ಅಂತಾ ಗೊತ್ತಾಗಿದ್ದು. ನಾನು ಎಡಗೈಯಲ್ಲಿ ಬರೆಯೋದನ್ನ ತಪ್ಪಿಸಲು ಮಾಡಿದ ಕಸರತ್ತುಗಳನ್ನು, ಅದರಲ್ಲಿ ವಿಫಲವಾಗಿದ್ದನ್ನು ಸಹ ತಿಳಿಸಿದಳು. ಯಾವುದೋ ಪುಣ್ಯಾತ್ಮ ಎಡಗೈಗೆ ಏನೂ ಮಾಡಲಿಕ್ಕಾಗದೇ ಇರುವ ಹಾಗೇ ಗಾಯ ಮಾಡಿಡಿ ಎಂದು ಉಪದೇಶ ಮಾಡಿದ್ದನಂತೆ. ಆದರೆ ಅಮ್ಮ ಮಾತ್ರ ಅಂಥ ಪ್ರಯತ್ನಕ್ಕೆ ಕೈಹಾಕಲಿಲ್ಲ. ಪುಣ್ಯ ನನ್ನ ಎಡಗೈ ನೋವಿನಿಂದ ಪಾರಾಯಿತು. ಈ ಘಟನೆಯ ನಂತರ ಗೆಳೆಯರ ಜೊತೆ, ಬೆರೆಯುವುದು ಓಡಾಡುವುದು ಕಡಿಮೆ ಮಾಡತೊಡಗಿದೆ. ನನಗೆ ನಾ ಒಬ್ಬನೆ ಒಂದು ಉಳಿದವರೆಲ್ಲಾ ಒಂದು, ಅನಿಸತೊಡಗಿತ್ತು. ಯಾಕೋ ಒಂಟಿಯಾಗಿ ಕಾಲ ಕಳೆಯೋದು ಇಷ್ಟವಾಗತೊಡಗಿತ್ತು.

ದೊಡ್ಡವನಾದ ಹಾಗೇ ಎಡಚನಾಗಿದ್ದಕ್ಕೆ ಎದುರಿಸಬೇಕಾದ ಚಿಕ್ಕ ಪುಟ್ಟ ತೊಂದರೆಗಳು ಅರಿವಿಗೆ ಬರತೊಡಗಿತ್ತು. ಇನ್ನು ಶಾಲೆಗಳಲ್ಲಿ ಒತ್ತೊತ್ತಾಗಿ ಕುಳಿತು ನಾನು ಬರೆಯುವಾಗ ನನ್ನ ಪಕ್ಕಕ್ಕೆ ಕುಳಿತವರಿಗೆ ನನ್ನ ಕೈ ತಾಗಿ ಇಬ್ಬರಿಗೂ ಡಿಸ್ಟರ್ಬ್ ಆಗುತ್ತಿತ್ತು. ಅದಕ್ಕಾಗಿ ನನ್ನನ್ನು ಕೊನೆಗೆ ಕುಳ್ಳಿರಿಸಲಾಗುತ್ತಿತ್ತು. ಪರೀಕ್ಷಾ ಸಂದರ್ಭದಲ್ಲಿ ಎಲ್ಲರೂ ಒಂದೇ ಕೋನದಲ್ಲಿ ಕುಳಿತರೆ ಮಧ್ಯದಲ್ಲಿ ನಾನು ಮಾತ್ರ ವಿರುದ್ಧ ಕೋನದಲ್ಲಿ ಕುಳಿತು ಬರೆಯುತ್ತಿದ್ದುದರಿಂದ ಪರೀಕ್ಷಾ ಮೇಲ್ವಿಚಾರಕರಿಗೆ ನನ್ನ ಮೇಲೆ ಕಣ್ಣು. ನಕಲು ಮಾಡಲು ಈ ರೀತಿ ಕುಳಿತಿದ್ದಾನೆ ಎನ್ನುವ ಸಂಶಯ. ಇನ್ನು ಸ್ಕ್ವಾಡ್‌ನವರು ಬಂದರಂತೂ ಅವರ ಕಣ್ಣಿಗೆ ಬೀಳುತ್ತಿದ್ದಿದ್ದೇ ನಾನು. ಹೀಗೆ ಒಂದೇ ಎರಡೇ ಅನುಭವಿಸಿದ ತೊಂದರೆಗಳನ್ನು ಹೇಳಲು ಆಗದೆ, ಹಾಗೇ ಇರಲೂ ಆಗದೆ ಅನುಭವಿಸಿದ ತೊಳಲಾಟ ನನ್ನ ವ್ಯಕ್ತಿತ್ವದ ಮೇಲೆ ಪರಿಣಾಮ ಬೀರಿತು.

**ವಿನಾಯಕ ಲಕ್ಷ್ಮಣ್ ಪಟಗಾರ**

ಮುಖ್ಯವಾಗಿ ಮನೆಯಲ್ಲಿ, ಇಲ್ಲವೇ ಸಂಬಂಧಿಗಳ ಮನೆಯಲ್ಲಿ ನಡೆಯುವ ಹಬ್ಬ, ಹರಿದಿನಗಳಲ್ಲಿ ಅದರಲ್ಲೂ ಧಾರ್ಮಿಕ ಕಾರ್ಯಕ್ರಮಗಳಲ್ಲಿ ಎಲ್ಲರಂತೆ ಖುಷಿಯಿಂದ ಭಾಗವಹಿಸುವುದಕ್ಕೆ ಆಗುತ್ತಿರಲಿಲ್ಲ. ಚಿಕ್ಕವನಿದ್ದಾಗ ಸಂಬಂಧಿಗಳ ಮನೆಯಲ್ಲಿ ನಡೆಯುತ್ತಿದ್ದ ಪೂಜಾ ಕಾರ್ಯಕ್ಕೆ ಎಲ್ಲ ಮಕ್ಕಳಂತೆ ನಾನು ಉತ್ಸಾಹದಿಂದ ಚಿಕ್ಕಪುಟ್ಟ ಸಹಾಯ ಮಾಡುತ್ತ ಓಡಾಡುತ್ತಿದ್ದೆ. ಪೂಜಾರಿ ಕೇಳಿದ ಪೂಜಾ ಸಾಮಾನನ್ನು ರೂಢಿಯಂತೆ ಎಡಗೈಯಲ್ಲಿ ಕೊಟ್ಟೆ. ಜೋರಾಗಿ "ಬಲಗೈಯಲ್ಲಿ ಕೊಡಕ್ಕಾಗಲ್ವಾ, ಅಷ್ಟು ಗೊತ್ತಾಗಲ್ವಾ, ದಡ್ಡ" ಎಂದರು. ನೆರೆದಿದ್ದ ಸಂಬಂಧಿಗಳು ನನ್ನನ್ನು ದಡ್ಡನೆಂಬಂತೆ ನೋಡಿ ತಮ್ಮ ತಮ್ಮೊಳಗೆ ನಗೆಯಾಡಿಕೊಂಡರು. ನನಗೆ ಅವಮಾನವಾಗಿ ಅಳು ಬಂದು ದೂರ ಹೋಗಿ ಒಬ್ಬಂಟಿಯಾಗಿ ಅತ್ತುಬಿಟ್ಟಿದ್ದೆ. ಮುಂದೆ ಅಂತಹ ಕಾರ್ಯಕ್ರಮಕ್ಕೆ ಹೋಗುವುದನ್ನೆ ಕಡಿಮೆ ಮಾಡಿದೆ. ದೇವರಿಗೆ ತೆಂಗಿನಕಾಯಿ ಒಡೆಯುವಾಗಲೂ ಇದೇ ರೀತಿ ಅವಮಾನವಾಗಿತ್ತು. ಅವತ್ತಿನಿಂದ ದೇವರಿಗೆ ತೆಂಗಿನಕಾಯಿ ಒಡೆಯುವದನ್ನೆ ನಿಲ್ಲಿಸಿದೆ. ಊಟದ ವಿಚಾರದಲ್ಲಿ ಈಗಲೂ ನಾನು ಎಡಗೈಯಲ್ಲಿ ಊಟ ಮಾಡಿಕೊಳ್ಳುವದನ್ನ ಮಿಸ್ ಮಾಡಿಕೊಳ್ಳುತ್ತೇನೆ. ಬಾಲ್ಯದಲ್ಲಿ ಎಡಗೈಯಲ್ಲಿ ಊಟ ಮಾಡುತ್ತಿದ್ದೆ. ಆದರೆ ಅಮ್ಮ ಒತ್ತಾಯ ಮಾಡಿ ಮಾಡಿ ಬಲಗೈಯಲ್ಲಿ ಊಟ ಮಾಡುವದನ್ನ ರೂಢಿ ಮಾಡಿಸಿದ್ದಾಳೆ. ಆದರೆ ಇಂದಿಗೂ ನನಗೆ ಬಲಗೈ ಊಟ ಅಷ್ಟೊಂದು ಖುಷಿ ಕೊಡುತ್ತಿಲ್ಲ. ಇಂದಿಗೂ ಒಬ್ಬಂಟಿಯಾಗಿ ಊಟ ಮಾಡುವ ಸಂದರ್ಭ ಬಂದರೆ ಯಾರೂ ನೋಡುವುದಿಲ್ಲ ಅಂತಾ ಮನವರಿಕೆ ಆದರೆ ಎಡಗೈಯಿಂದ ಖುಷಿಯಿಂದ ಊಟ ಮಾಡಿಬಿಡೋಣಾ ಅನಿಸುತ್ತೆ.

ದೊಡ್ಡವನಾದ ಹಾಗೇ ನನಗೆ ಎಡಚನೆಂಬುದು ಅಷ್ಟೊಂದು ಗಿಲ್ಟಾಗಿ ಕಾಡಲಿಲ್ಲ. ಬಹುಶಃ ಒಂಟಿತನದ ಕಾರಣಕ್ಕೆ ಓದುವ ಹವ್ಯಾಸ ರೂಢಿಯಾಯಿತು. ಕನ್ನಡ ಸಾಹಿತ್ಯ, ಕಥೆ, ಧಾರಾವಾಹಿ, ಆತ್ಮಕಥೆಗಳಲ್ಲಿ ಓದು ಆತ್ಮವಿಶ್ವಾಸವನ್ನು ಹೆಚ್ಚಿಸಿತ್ತು. ನಟ ವಿಷ್ಣುವರ್ಧನ್, ಅಮಿತಾಭ್ ಬಚ್ಚನ್, ಕ್ರಿಕೆಟ್ ಆಟದ ಲಾರಾ, ಗಂಗೂಲಿ, ತೆಂಡುಲ್ಕರ್, ಬರಾಕ್ ಒಬಾಮ – ಹೀಗೆ ಹಲವಾರು ಖ್ಯಾತನಾಮರು ಎಡಚರೆಂದು ತಿಳಿದಾಗ ನನಗೂ ಆತ್ಮವಿಶ್ವಾಸ ವೃದ್ಧಿಸಿತ್ತು. ಎಡಚರಾಗುವದಕ್ಕೆ ಕಾರಣಗಳೇನು ಎಂದು ಹುಡುಕ ಹೊರಟಾಗ ಯಾವುದೋ ಪುಸ್ತಕದಲ್ಲಿ ಎಡಚರ ಬಗ್ಗೆ ಬರೆದಿದ್ದು ಸಿಕ್ಕಿತು. ಎಡಚರಾಗುವುದು ರೂಢಿಯಿಂದಲ್ಲ. ಹುಟ್ಟಿನಿಂದ. ಸಾಮಾನ್ಯರಿಗೂ ಎಡಚರಿಗೂ ಮೆದುಳಿನ ಒಂದು ಭಾಗದಲ್ಲಿ ಚಿಕ್ಕ ವ್ಯತ್ಯಾಸಗಳಿರುತ್ತವೆ. ಎಡಚರು ವಿಶೇಷ ವ್ಯಕ್ತಿಗಳಾಗಿರುತ್ತಾರೆ, ಹೀಗೆ... ಇನ್ನು ಏನೇನೋ ವೈಜ್ಞಾನಿಕ ಕಾರಣಗಳನ್ನು ಓದಿದ ನೆನಪು. ನಂತರದ ದಿನಗಳಲ್ಲಿ ಯಾರೇ ರೊಡ್ಡ ಎಂದು ಕರೆದರೂ ನಾನು ಅವಮಾನವೆಂದಾಗಲಿ, ಕೀಳೆಂದಾಗಲಿ ಭಾವಿಸಿಕೊಳ್ಳಲಿಲ್ಲ. ಯೆಸ್. ನಾನು ರೊಡ್ಡ. ಏನೀಗ ? ಎಂದು ತಿರುಗಿ ಹೇಳತೊಡಗಿದೆ. ಎಷ್ಟೋ ಬಾರಿ ಬಲಗೈಯಲ್ಲಿ ಬರೆದು ತೋರ್ಸು ನೋಡೋಣ ಎಂದು ಸವಾಲ್ ಹಾಕಿದವರಿಗೆ, "ಮೊದಲು ನೀವು ಎಡಗೈಯಲ್ಲಿ ಬರೆದು ಕಾಣಿಸಿ. ನಂತರ ನಾನು ಬರೆದು ಕಾಣಿಸುತ್ತೇನೆ" ಎಂದು ತಿರುಗೇಟು ನೀಡಿದೆ. ಎಡಚನೆಂಬ ಕಾರಣಕ್ಕೆ ನನ್ನನ್ನು ಸಾರ್ವಜನಿಕವಾಗಿ ಅಣಕಿಸಲು, ಅವಮಾನಿಸಲು, ಕಾಯುತ್ತಿದ್ದವರಿಗೆ ನಾನು ತಿರುಗೇಟು ನೀಡುವದನ್ನ ನೋಡಿ ನನ್ನ ಉಸಾಬರಿಗೆ ಬರುವದನ್ನೇ ಬಿಟ್ಟರು.

ದಿನನಿತ್ಯದ ಜೀವನದಲ್ಲಿ ನಡೆಯುವ ಕೆಲವೊಂದು ರೀತಿ ರಿವಾಜುಗಳು ನನಗೆ ಎಡಚನಾಗಿದ್ದಕ್ಕೆ ಮುಜುಗರ, ಕಿರಿಕಿರಿಯನ್ನುಂಟು ಮಾಡುತ್ತವೆ. ಥ್ಯಾಂಕ್ಸ್ ಎಂದು ಕೈಕೊಡಲು ಮುಂದಾದಾಗ ನನ್ನ ಎಡಗೈ ಮುಂದೆ ಹೋಗುತ್ತೆ. ನಂತರ ತಪ್ಪಿನ ಅರಿವಾಗಿ ಬಲಗೈ ಮುಂದೆ ಮಾಡುವುದು ಇವತ್ತಿಗೂ ನಡೆದೇ ಇದೆ. ಎಲ್ಲರೂ ಬಲಗೈಯಲ್ಲಿ ಕಪ್ ಹಿಡಿದು ಚಹಾ ಕುಡಿಯುವಾಗ ನಾನು ಎಡಗೈಯಲ್ಲಿ ಕಫ್ ಹಿಡಿದು ಚಹಾ ಕುಡಿಯೋದರಿಂದ ಅವರಿಗೆ, ನನಗೆ ಆಗುವ ಕಸಿವಿಸಿ, ದೇವಸ್ಥಾನಗಳಲ್ಲಿ ತೀರ್ಥ ತೆಗೆದುಕೊಳ್ಳುವಾಗ, ಕುಂಕುಮ ಹಚ್ಚಿಕೊಳ್ಳುವಾಗ, ಪ್ರಸಾದ ತಿನ್ನುವಾಗ ಎಡಗೈ ಮುಂದಾಗಿ ಪೂಜಾರಿಯ, ನೆರೆದಿದ್ದ ಭಕ್ತಾದಿಗಳ ವಕ್ರ ನಗೆಗೋ, ಮುನಿಸಿಗೋ, ಅವರ ವಿಚಿತ್ರ ನೋಟಕ್ಕೋ ಗುರಿಯಾಗುವುದನ್ನ ಇನ್ನು ತಪ್ಪಿಸಿಕೊಳ್ಳಲಾಗುತ್ತಿಲ್ಲ. ಇನ್ನು ಆಫೀಸ್‌ನಲ್ಲಾಗಲಿ, ಎಲ್ಲೇ ಆಗಲಿ ಸಾಮಾನ್ಯವಾಗಿ ಬಲಗೈಯವರಿಗೆ ಅನುಕೂಲವಾಗಿರುವ ವ್ಯವಸ್ಥೆಗಳಲ್ಲಿ ನಾವು ಕುಳಿತು ಬರೆಯುವಾಗ, ಕೆಲಸ ಮಾಡುವಾಗ ಒಂದು ರೀತಿಯ ಹಿಡಿತ ಕಿರಿ ಕಿರಿ ಉಂಟಾಗುತ್ತದೆ. ಕೆಲವೊಂದಿಷ್ಟು ಅಭ್ಯಾಸಗಳಿಗೆ ನಾನೇ ಕಾರಣನಾಗುತ್ತಿದ್ದೆನಾ ಅಂತಾ ಮನಸ್ಸಿಗೆ ಒಂಥರಾ ಆಗುತ್ತೆ. ಕಂಪ್ಯೂಟರ್ ಕೀಬೋರ್ಡ್, ಮೌಸ್ ಇಡುವ ಜಾಗ, ಡೆಸ್ಕ್ ವಿತ್ ಚೇರ್ – ಹೀಗೆ ದಿನನಿತ್ಯ ಬಳಸುವ ಹಲವಾರು ವಸ್ತುಗಳು, ಬಲಗೈಯವರಿಗೆ ಅನುಕೂಲಕರ ರೀತಿಯಲ್ಲಿ ರಚಿಸಲ್ಪಟ್ಟಿದ್ದು, ನಾವು ಎಡಚರು ಅದಕ್ಕೆ ಹೊಂದಾಣಿಕೆ ಮಾಡಿಕೊಂಡು ಬಳಸಬೇಕಾಗಿದೆ. ಸಾಮಾನ್ಯರು ಸರಾಗವಾಗಿ ಕಲಿಯಬಹುದನ್ನು ನಾವು ಎಡಚರು ಪ್ರತಿಯೊಂದನ್ನೂ ಸಾಹಸಪಟ್ಟು ಕಲಿಯಬೇಕಾಗಿದೆ.

ಇವತ್ತಿಗೂ ಅರ್ಥವಾಗದ ವಿಚಾರವೇನೆಂದರೆ 'ಬಲ'ವೆಂದರೆ ಶುಭ ಸೂಚಕವಾಗಿಯೂ 'ಎಡ' ಎಂದರೆ ಅಶುಭ ಎಂದು ಯಾಕೆ ಪರಿಗಣಿಸುತ್ತಾರೆ ? ಎಂದು ಎಲ್ಲದಕ್ಕೂ ಇದನ್ನು ಅನ್ವಯಿಸುತ್ತಾ ಹೋದರೆ ನಾನು ಎಡಚನಾಗಿ ಹುಟ್ಟಿದ್ದೆ ತಪ್ಪಾ ? ನಾನಾಗಿ ಎಡಚನಾಗಲಿಲ್ಲ. ಹುಟ್ಟಿನಿಂದಲೇ ಬಂದಿರುವಂತಹದು. ಇದರಲ್ಲಿ ನನ್ನ ತಪ್ಪಾದರೂ ಏನು ? ಸಮಾಜದಲ್ಲಿ 'ಬಲ'ಕ್ಕೆ ಕೊಟ್ಟಿರುವ ಪ್ರಾಶಸ್ತ್ಯದಿಂದಾಗಿ ನಾವು ದಿನನಿತ್ಯದ ಎಷ್ಟೋ ಕೆಲಸಗಳನ್ನು ಇವತ್ತು ಅನಿವಾರ್ಯವಾಗಿ ಮನಸ್ಸಿಲ್ಲದ ಮನಸ್ಸಿನಿಂದ ಬಲಗೈಯಲ್ಲಿ ತೊಂದರೆಪಟ್ಟು ಮಾಡಬೇಕಾಗಿದೆ. ಇನ್ನಾದರೂ ನಮ್ಮನ್ನ ಒಂದು ರೀತಿಯಲ್ಲಿ ಕುಹಕದಿಂದ, ವ್ಯಂಗ್ಯದಿಂದ, ಅಣಕಿಸುವ ದೃಷ್ಟಿಯಿಂದ ನೋಡದೆ ಎಲ್ಲರಂತೆ ಒಬ್ಬರು ಎಂಬಂತೆ ನೋಡಿದರೆ ಸಾಕು. ಹಾಂ ! ಅಂದ ಹಾಗೇ ಇಲ್ಲಿಯವರೆಗೆ ಎಡಚರ ಬಗ್ಗೆ ಬರೆದಿದ್ದದ್ದು, ಕಂಪ್ಯೂಟರ್ ಮುಂದೆ ಕೀಬೋರ್ಡ್‌ನಲ್ಲಿ ಕುಟ್ಟಿದ್ದು ಎಲ್ಲಾ ಎಡಗೈಯಲ್ಲೇ !

**ವಿನಾಯಕ ಲಕ್ಷ್ಮಣ್ ಪಟಗಾರ**
ಬೆಟ್ಕುಳಿ – ೫೮೧ ೩೩೩, ಕುಮಟಾ ತಾಲ್ಲೂಕು
ಉತ್ತರ ಕನ್ನಡ ಜಿಲ್ಲೆ

## ನಟ ಸಿ. ಆರ್. ಸಿಂಹ ಇನ್ನಿಲ್ಲ



ಕನ್ನಡ ರಂಗಭೂಮಿ ಮತ್ತು ಚಲನಚಿತ್ರ ಕ್ಷೇತ್ರಗಳಲ್ಲಿ ಮನೆಮಾತಾಗಿದ್ದ ೭೨ರ ಹರೆಯದ ಸಿ. ಆರ್. ಸಿಂಹ ಇದೇ ಫೆಬ್ರವರಿ ೨೪ರಂದು ಪ್ರಾಸ್ಟೇಟ್ ಕ್ಯಾನ್ಸರ್ ಕಾಯಿಲೆಯಿಂದ ಬೆಂಗಳೂರಿನ ಸೇವಾಕ್ಷೇತ್ರ ಆಸ್ಪತ್ರೆಯಲ್ಲಿ ಕೊನೆಯುಸಿರೆಳೆದದ್ದು ಒಂದು ದೊಡ್ಡ ದುರಂತ. ಗಾಂಧಿಬಜಾರಿನ ಸನ್ನಿಧಿ ರಸ್ತೆಯಲ್ಲಿದ್ದ ಸಿಂಹನ ತಾತನವರೇ ಬಾಲಕ ಸಿಂಹನ ಅಭಿನಯ ಕಲೆಯಲ್ಲಿದ್ದ ಅಭೂತಪೂರ್ವ ಪ್ರತಿಭೆಯನ್ನು ಗುರುತಿಸಿ ಬೆನ್ನುತಟ್ಟಿದ್ದು, ಬಾಲ್ಯದಿಂದಲೇ ನಾಟಕದ ಗೀಳು ಬೆಳೆಸಿಕೊಂಡ ಸಿಂಹ ಪ್ರಭಾತ್ ಕಲಾವಿದರು, ಅನಂತರ ನ್ಯಾಷನಲ್ ಕಾಲೇಜು ಹಿಸ್ಟ್ರಿಯಾನಿಕ್ಸ್ ಕ್ಲಬ್‌ನಂತಹ ಸಂಸ್ಥೆಗಳಲ್ಲಿ ಸಕ್ರಿಯವಾಗಿ ತೊಡಗಿಕೊಂಡು ಕನ್ನಡ ಮತ್ತು ಇಂಗ್ಲಿಷ್ ನಾಟಕಗಳಲ್ಲಿ ಟಿ.ವಿ. ಸೀರಿಯಲ್‌ಗಳಲ್ಲಿ ಬಹುಮುಖ್ಯ ಪಾತ್ರಗಳಲ್ಲಿ ಅಭಿನಯಿಸಿ ಅತ್ಯಂತ ಜನಪ್ರಿಯ ನಟನಾಗಿದ್ದು ಒಂದು ದಂತಕಥೆಯೇ ಸರಿ. ಮರೆಯಲಾಗದ ನಾಟಕ ಪ್ರದರ್ಶನಗಳನ್ನು ನೀಡಿದ ನಟರಂಗ ಸಂಸ್ಥೆ ಅವರ ಕೊಡುಗೆಯೇ. ಹಲವು ಯಶಸ್ವಿ ನಾಟಕಗಳು, ಚಲನಚಿತ್ರಗಳಲ್ಲಿ ನಟಿಸಿದ್ದೇ ಅಲ್ಲದೆ, ಅವುಗಳನ್ನು ನಿರ್ದೇಶಿಸಿದ್ದೂ ಸಿಂಹ ಅವರ ಹಿರಿಮೆ.

೨೦೦೪ರಲ್ಲಿ ಸಂಗೀತ ನಾಟಕ ಅಕಾಡೆಮಿ ನೀಡಿದ ಪ್ರತಿಷ್ಠಿತ ಪುರಸ್ಕಾರಕ್ಕೆ ಭಾಜನರಾಗಿದ್ದ ಸಿ. ಆರ್. ಸಿಂಹ ವಿದೇಶಗಳಲ್ಲೂ ನಾಟಕಗಳಲ್ಲಿ ನಟಿಸಿದ್ದರು. ಅವರ ಬಹುಮುಖೀ ಪ್ರತಿಭೆ, ಜೀವನೋತ್ಸಾಹ ಇಂದಿನ ಮುಂದಿನ ಕಲಾವಿದರ ಪೀಳಿಗೆಗೆ ಸ್ಫೂರ್ತಿ ನೀಡುವುದರಲ್ಲಿ ಯಾವ ಸಂದೇಹವೂ ಇಲ್ಲ. ದಿವಂಗತರಿಗೆ 'ಹೊಸತು' ಬಳಗ ಸಂತಾಪ ಸೂಚಿಸುತ್ತದೆ.

ನಾನು ಓದಿದ ಪುಸ್ತಕ

ಮೊದಲನೆಯ ಭಾಗ : ೪೧೬ ಪುಟಗಳು
ಎರಡನೆಯ ಭಾಗ : ೪೪೮ ಪುಟಗಳು
ಮೂರನೆಯ ಭಾಗ : ೪೦೦ ಪುಟಗಳು
ನಾಲ್ಕನೆಯ ಭಾಗ : ೪೪೮ ಪುಟಗಳು

ಒಟ್ಟು : ೧೭೧೨ ಪುಟಗಳು

**(ಈ ಐತಿಹಾಸಿಕ ಕೃತಿಯು ತಮಿಳು ಭಾಷೆಯಲ್ಲಿದೆ)**
**ಕೃತಿಕರ್ತೃ :ಸಿದ್ಧಾರ್ಥನ್**

ಈ ಕೃತಿಯ ಕರ್ತೃ ಸಿದ್ಧಾರ್ಥನ್ ಅದ್ಭುತವಾಗಿ ಇಲ್ಲಿಯ ಬರಹವನ್ನು ಚಿತ್ರಿಸಿದ್ದಾರೆ. ಅದರಲ್ಲಿ ಯಶಸ್ವಿಯಾಗಿದ್ದಾರೆ. ಇಲ್ಲಿನ ಬರಹ ಓದಿಸಿಕೊಳ್ಳುವ ಗುಣವನ್ನು ಹೊಂದಿದೆ. ಸಾವಿರದ ಏಳುನೂರರಷ್ಟು ಪುಟಗಳು ಧಾರಾವಾಹಿಯಾಗಿ ಸಾಗಿವೆ. 'ಸಾಮ್ರಾಟ್ ಅಶೋಕನ್' ಸಾಧಾರಗಳೊಂದಿಗೆ ಕೂಡಿದ ಒಂದು ಒಳ್ಳೆಯ ಬರಹ; ಚಾರಿತ್ರಿಕ ಕಾದಂಬರಿ. ಲೇಖಕರು ಶ್ರೀಲಂಕಾದ ಅನೇಕ ಸ್ಥಳಗಳಿಗೆ ಹೋಗಿದ್ದಾರೆ. ವಿಷಯ ಸಂಗ್ರಹಣೆಗೆ ಸಾಕಷ್ಟು ಹೆಣಗಿದ್ದಾರೆ. ಹಾಗಾಗಿ ಈ ಕೃತಿ ಗಂಭೀರ ಸ್ವರೂಪವನ್ನು ಪಡೆದಿದೆ.

**ಶೇಷನಾರಾಯಣ**

# ಸಾಮ್ರಾಟ್ ಅಶೋಕನ್

## (ಚಾರಿತ್ರಿಕ ಕಾದಂಬರಿ)

**ಈ** ನಾಲ್ಕು ಭಾಗಗಳಿಗೂ ಪ್ರತ್ಯೇಕ ಹೆಸರುಗಳು ಇವೆ. ಬೇಸಿಗೆ ಕಾಲದ ಪ್ರಾರಂಭ, ಉಚ್ಚಕಾಲ, ಮಳೆ, ಮಂಜು... ಹೀಗೆ. ತಮಿಳಿನಲ್ಲಿ ಇವುಗಳಿಗೆ ಇಳವೇಲಿನ್, ಮುದುವೇಲಿನ್, ಮಳ್ಳೈ, ಪನಿ... ಈ ರೀತಿ.

ಕ್ರಿಸ್ತಪೂರ್ವ ೨೯೮–೨೭೪ ಬಿಂದುಸಾರನ ಆಳ್ವಿಕೆಯ ಕಾಲ. ಬಿಂದುಸಾರನ ಮಗನೇ ಅಶೋಕ. ಬಿಂದುಸಾರನ ತಂದೆ ಚಂದ್ರಗುಪ್ತ ಮೌರ್ಯ ಸಾಮ್ರಾಜ್ಯವನ್ನು ಸ್ಥಾಪಿಸಿದ ಅರಸ. ಇದು ಭಾರತದಲ್ಲಿಯೇ ಮೊದಲ ಸಾಮ್ರಾಜ್ಯ.

ಪ್ರಖ್ಯಾತನಾದ ಅಲೆಕ್ಸಾಂಡರ್ ಖೈಬರ್ ಕಣಿವೆಯ ಮೂಲಕ ತನ್ನ ಅಗಾಧ ಸೇನೆಯೊಡನೆ ಭಾರತಕ್ಕೆ ದಂಡೆತ್ತಿ ಬಂದ. ಗ್ರೀಸಿನಿಂದ ಹೊರಟು ಭಾರತಕ್ಕೆ ಅವನು ಬಂದದ್ದು ಒಂದು ಸಾಹಸವೇ. ಆಗ ಅಲೆಕ್ಸಾಂಡರ್ ಎಂದರೆ ಜಗತ್ತೇ ನಡುಗುತ್ತಿತ್ತು. ಅವನು ಅಂಥ ದಕ್ಷನಾಗಿದ್ದ ಅರಸ.

ಆದರೆ ಅಲೆಕ್ಸಾಂಡರ್ ಭಾರತದಲ್ಲಿ ಹೆಚ್ಚು ಕಾಲ ಉಳಿಯಲು ಸಾಧ್ಯವಾಗಲಿಲ್ಲ. ಏನೇನೋ ಗಹನ ವಿಚಾರಗಳು, ಕೆಲಸಗಳು. ಆದರೆ ತನ್ನ ಬಳಗದ ಒಬ್ಬಳು ಹೆಣ್ಣುಮಗಳನ್ನು ಬಿಂಬಸಾರನಿಗೆ ಕೊಟ್ಟು ವಿವಾಹ ಮಾಡಿ ಗ್ರೀಸಿಗೆ ಹಿಂದಿರುಗಿದ. ಇವಳೂ ಅಶೋಕ ಚಕ್ರವರ್ತಿಗೆ ಒಬ್ಬ ಚಿಕ್ಕಮ್ಮ. ಈಕೆಯ ಹೆಸರು ಹೆಲೀನಾ.

ರಾಜಗುರು ಚಾಣಕ್ಯ ಚಂದ್ರಗುಪ್ತನನ್ನು ಅರಸನನ್ನಾಗಿ ನಿಯಮಿಸಿದ. ಆ ಕಾಲದಲ್ಲಿ ಅರಸರನ್ನೂ ನೇಮಕ ಮಾಡುವ ಅಧಿಕಾರ ರಾಜಗುರುವಿಗೂ ಇತ್ತು. ಆಮೇಲೆ ಇದು ಕೈತಪ್ಪಿ ಮಂತ್ರಿಮಂಡಲಕ್ಕೆ ಹೋಯಿತು. ದಕ್ಷರಾದ ಮಂತ್ರಿಗಳನ್ನು ಅರಸನೇ ನಿಯಮಿಸುತ್ತಿದ್ದ.

ಒಬ್ಬ ಅರಸ ನಿಧನ ಆದಾಗ ಅವನ ಜೇಷ್ಠ ಪುತ್ರನೇ ಮುಂದಿನ ರಾಜನಾಗುತ್ತಿದ್ದ. ಆಗ ವಂಶಪಾರಂಪರ್ಯವಾದ ಆಡಳಿತ ಪದ್ಧತಿ. ಮಂತ್ರಿಗಳು ಹಾಗೆಯೇ ಆತನನ್ನು ಪಟ್ಟಾಭಿಷೇಕ ಮಾಡಿ ಗದ್ದುಗೆಗೆ ಕೂರಿಸುತ್ತಿದ್ದರು.

ಕೆಲವು ಕಾರಣಗಳಿಂದ ಹಿರಿಯ ಮಗ ರಾಜ್ಯಾಡಳಿತ ನಡೆಸುವಷ್ಟು ಸಮರ್ಥನಾಗಿಲ್ಲದಿದ್ದರೆ, ಇತರೇ ಮಕ್ಕಳಲ್ಲಿ ಒಬ್ಬ ದಕ್ಷನಾಗಿ ಭಿನ್ನವಾಗಿದ್ದರೆ, ಆಡಳಿತದ ಹೊರೆ ಹೊರುವಷ್ಟು ಸಮರ್ಥನಾಗಿದ್ದರೆ, ಹಿರಿಯ ಮಗನಿಗೇ ಅಲ್ಲದೆ ಇಂಥ ಮಕ್ಕಳಲ್ಲಿ ಒಬ್ಬನನ್ನು ಅರಸನನ್ನಾಗಿ ನಿಯಮಿಸಲು ಮಂತ್ರಿಗಳು ತೀರ್ಮಾನ ತೆಗೆದು ಕೊಳ್ಳುತ್ತಿದ್ದರು. ಅಶೋಕನ ವಿಚಾರವೂ ಹಾಗೆಯೇ. ಅವನು ತಂದೆಗೆ ಎರಡನೆಯ ಮಗ. ಮೊದಲನೆಯ ಮಗ ಸುಷೀಮ. ಮೌರ್ಯ ಸಾಮ್ರಾಜ್ಯ ಪೂರ್ವಕ್ಕೆ ಅಸ್ಸಾಮ್‌ವರೆಗೆ, ಪಶ್ಚಿಮಕ್ಕೆ ಕಾಶ್ಮೀರ, ಅಫ್ಘಾನಿಸ್ತಾನದವರೆಗೂ ವ್ಯಾಪಿಸಿತ್ತು. ಮೌರ್ಯ ಸಾಮ್ರಾಜ್ಯದ ರಾಜಧಾನಿ ಪಾಟಲಿಪುತ್ರ. ಈಗಿನ ಪಾಟ್ನಾ. ಅಸ್ಸಾಮ್ ಈ ಆಡಳಿತಕ್ಕೆ ಒಳಪಟ್ಟಿರಲಿಲ್ಲ, ಪ್ರತ್ಯೇಕವಾಗಿತ್ತು. ಕಾಮರೂಪ ಎನ್ನುವುದು ಅದರ ಹಳೆಯ ಹೆಸರು. ಪ್ರಾಗ್ಜ್ಯೋತಿಪುರ ಅದರ ರಾಜಧಾನಿ.

ದಕ್ಷಿಣಕ್ಕೆ ಕಳಿಂಗ (ಈಗಿನ ಒರಿಸ್ಸಾ) ಅಲ್ಲದೆ ಬೇರೆ ಬೇರೆ ಕೆಲವು ರಾಜ್ಯಗಳೂ ಮೌರ್ಯ ಸಾಮ್ರಾಜ್ಯಕ್ಕೆ ಸೇರಿರಲಿಲ್ಲ. ಚೇರ, ಚೋಳ, ಪಾಂಡ್ಯ ನಾಡುಗಳೂ ಕರ್ನಾಟಕವೂ ಪ್ರತ್ಯೇಕವಾಗಿದ್ದವು. ಕರ್ನಾಟಕಕ್ಕೆ ಆಗ 'ಮಹಿಷೂರ ರಾಜ್ಯ' ಎಂದು ಹೆಸರಿತ್ತು.

ಪ್ರಾಯಪ್ರಬುದ್ಧರಾದ ಅರಸನ ಮಕ್ಕಳು, ಅರಸನಾಗುವುದಕ್ಕೆ ತಕ್ಕ ತರಬೇತಿ ಪಡೆದ ಮೇಲೆ, ಅರಸ ಇಂಥವರನ್ನು ಬೇರೆ ಬೇರೆ ಪ್ರಾಂತ್ಯದ ನಗರಗಳಿಗೆ ಆಡಳಿತ ನಡೆಸುವುದಕ್ಕೆ ನಿಯಮಿಸುತ್ತಿದ್ದ. ಈತ ಮೂಲ ಅರಸನಂತೆಯೇ ಅಧಿಕಾರ ಚಲಾಯಿಸುತ್ತ ಆ ಭಾಗದಲ್ಲಿ ಆಳ್ವಿಕೆ ನಡೆಸುತ್ತಿದ್ದ.

ಹಾಗೆಯೇ ಬಿಂದುಸಾರ ತನ್ನ ನಾಲ್ವರು ಮಕ್ಕಳನ್ನೂ ಬೇರೆ ಬೇರೆ ಪ್ರಾಂತ್ಯದ ನಗರಗಳಿಗೆ ಅಧಿಪತಿಗಳನ್ನಾಗಿ ಮಾಡಿದ್ದ. ಉಜ್ಜಯಿನಿ, ಕಾಬೂಲ್... ಹೀಗೆ.

ಅಶೋಕನೂ ಈ ರೀತಿಯೇ ಅರಸನಾದವನು. ಅವನು ಎಲ್ಲ ಮಕ್ಕಳುಗಳಿಗಿಂತಲೂ ಚುರುಕಾಗಿದ್ದ. ಚುರುಕು ಎನ್ನುವುದಕ್ಕೆ ಬದಲು ದಕ್ಷನಾಗಿದ್ದ. ಆಡಳಿತವನ್ನು ಜಾಣ್ಮೆಯಿಂದ ನಿರ್ವಹಿಸುವುದರಲ್ಲಿ, ಶತ್ರುಗಳಿಂದ ರಾಜ್ಯವನ್ನು ರಕ್ಷಿಸುವುದರಲ್ಲಿ, ಸಮರ್ಥನಾಗಿದ್ದ.

ಆ ಕಾಲದಲ್ಲಿ ಒಬ್ಬ ಅರಸು ನಾಲ್ಕಾರು ಪತ್ನಿಯರನ್ನು ಹೊಂದಿರುವುದೂ ಸಾಮಾನ್ಯ ಸಂಗತಿಯಾಗಿತ್ತು. ನಾಲ್ಕಾರು ಪತ್ನಿಯರನ್ನು ಅಂತಃಪುರದಲ್ಲಿ ತುಂಬಿಕೊಂಡಿರುವವನನ್ನೇ 'ಒಬ್ಬ ಅರಸು' ಎಂದು ಜನ ಭಾವಿಸುತ್ತಿದ್ದರು.

ಹಾಗೆಯೇ ಬಿಂದುಸಾರನಿಗೆ ನಾಲ್ವರು ಪತ್ನಿಯರು. ಇವರಲ್ಲಿ ಗ್ರೀಸಿನಿಂದ ಬಂದ ಅಲೆಕ್ಸಾಂಡರ್‌ನ ಬಳಗದವಳೂ ಒಬ್ಬಳು. ಅಶೋಕನಿಗೂ ಹಾಗೆಯೇ. ಇದರಲ್ಲಿ ಕಾಶ್ಮೀರದ ಅರಸನ ಕುವರಿಯೂ ಒಬ್ಬಳು. ಚಾರುದತ್ತ ಮತ್ತೋರ್ವ ಪತ್ನಿಯ ಮಗ. ಅಶೋಕ ನಂತೆಯೇ ದಕ್ಷನಾಗಿದ್ದ. ಅಶೋಕನಿಗೆ ಬಲಗೈನಂತೆ ಇದ್ದ.

ಅಶೋಕ ಅರಸನಾಗುವುದಕ್ಕೆ ಮೊದಲೇ ಬೌದ್ಧಮತ ಜನರ ಆಕರ್ಷಣೆಗೆ ಒಳಗಾಗಿತ್ತು. ಜಾತಿಗಳು ಇಲ್ಲ, ನಾವೆಲ್ಲರೂ ಒಂದು ಎನ್ನುವ ಬುದ್ಧನ ಮಾತುಗಳಿಗೆ ಜನ ಮಾರುಹೋಗಿದ್ದರು. ಸಮಾನತೆ ಎನ್ನುವ ಪದವನ್ನು ಬಳಸಿದವನೇ ಬುದ್ಧ, ಹಾಗೆಯೇ ಅದಕ್ಕೆ ಅಷ್ಟೇ ವಿರೋಧವೂ ಇತ್ತು. ಹಳೆಯ ಆಚರಣೆಗಳನ್ನು ತೊರೆಯುವುದು ಅಷ್ಟು ಸುಲಭವಲ್ಲವಷ್ಟೆ!

ಬುದ್ಧನ ಕಾಲ ಎರಡೂವರೆ ಸಾವಿರ ವರ್ಷಗಳ ಹಿಂದಿನದು. ಆತ ೮೦ವರ್ಷಗಳಷ್ಟು ಕಾಲ ಜೀವಿಸಿದ್ದ. ಅಶೋಕ ಚಕ್ರವರ್ತಿ ಅರವತ್ತೈದು ಎಪ್ಪತ್ತು ವರ್ಷಗಳಷ್ಟು ಕಾಲ.

ಈ ಕೃತಿ ಸನಾತನ ಧರ್ಮವನ್ನೂ ಬೌದ್ಧ ಧರ್ಮವನ್ನೂ ಕೂಲಂಕಷವಾಗಿ ಚರ್ಚಿಸುತ್ತದೆ. ಸನಾತನ ಧರ್ಮ ಎಂದರೆ ಹಿಂದೂ ಧರ್ಮ, ವರ್ಣಾಶ್ರಮ ಧರ್ಮವನ್ನೂ ಪ್ರತಿಪಾದಿಸುತ್ತದೆ. ಮೇಲು – ಕೀಳು ವರ್ಣಾಶ್ರಮ ಧರ್ಮದ ಮುಖ್ಯ ತಿರುಳು. ಕರ್ಮ ಫಲದಂತೆ ಎಲ್ಲವೂ ನಡೆಯುತ್ತದೆ ಎಂದು ಸಾರುವುದೇ ಸನಾತನ ಧರ್ಮ. ವೇದಗಳು, ಉಪನಿಷತ್ತುಗಳು, ಪುರಾಣಗಳು, ಶಾಸ್ತ್ರಗಳು ಆಚರಣೆ – ಇತ್ಯಾದಿ.

ಬುದ್ಧ ಇವೆಲ್ಲವನ್ನೂ ವಿರೋಧಿಸುತ್ತಾನೆ. ವೇದ ಗಳನ್ನೂ ಉಪನಿಷತ್ತುಗಳನ್ನೂ ಅವನು ನಂಬುವುದಿಲ್ಲ. ದೇವರು, ಕರ್ಮಫಲ – ಹೀಗೆ. ಆತ್ಮ ಎನ್ನುವುದು ಇಲ್ಲ ಎನ್ನುವುದೇ ಅವನ ಮುಖ್ಯ ಪ್ರತಿಪಾದನೆ. ದೇಹದಿಂದ ಪ್ರಾಣ ಹೊರಟುಹೋದ ಮೇಲೆ ಇದ್ದವನು ಇಲ್ಲವಾಗುತ್ತಾನೆ ಅಷ್ಟೇ ಎಂದು ಸಾರುತ್ತಾನೆ. ಆದರೆ ಪುನರ್ಜನ್ಮವನ್ನೂ ಆತ ನಂಬುತ್ತಾನೆ. ಬುದ್ಧನಲ್ಲಿ ಕೆಲವು ವೈಚಿತ್ರ್ಯಗಳೂ ಇದ್ದವು. ಅಹಿಂಸೆಯನ್ನು ಅವನು ಪ್ರತಿಪಾದಿಸಿದರೂ ಅಹಿಂಸಾ ಪರಮೋಧರ್ಮ ಎಂದು ಸಾರಿದರೂ ಆತ ಮಾಂಸಾಹಾರಿಯಾಗಿದ್ದ. ಆತ ಪರಿನಿರ್ವಾಣ ಹೊಂದುವುದಕ್ಕೆ ಕೆಲವು ದಿನಗಳ ಹಿಂದೆ ಹಂದಿಯ ಮಾಂಸ ಸೇವಿಸಿದನೆಂದು ಬುದ್ಧನ ಕಥೆಗಳಲ್ಲಿ ಹೇಳಲಾಗಿದೆ.

ವೈದಿಕರು ಕೆಲವು ಪ್ರಶ್ನೆಗಳನ್ನು ಬುದ್ಧನಿಗೆ, ಬುದ್ಧನ ಶಿಷ್ಯರಿಗೆ, ಹಾಕುತ್ತಾರೆ. ಹಾಗೆ ಹಾಕುವುದು ಸ್ವಾಭಾವಿಕವೇ.

"ನೀವು ದೇವರನ್ನು ನಂಬುವುದಿಲ್ಲ. ಆತ್ಮವನ್ನು ನಂಬುವುದಿಲ್ಲ. ವೇದ, ಉಪನಿಷತ್ತು... ಹೀಗೆ ಯಾವುದನ್ನೂ ನಂಬುವುದಿಲ್ಲ. ಆದರೆ ಪುನರ್ಜನ್ಮವನ್ನು ಮಾತ್ರ ನಂಬುತ್ತೀರಿ. ಇದು ಸರಿಯೆ? ಹೇಗೆ ಕಾರಣವಿಲ್ಲದೆ ಕಾರ್ಯ ನಡೆಯುವುದಿಲ್ಲವೋ ಹಾಗೆಯೇ ಕರ್ಮಫಲವಿಲ್ಲದೆ ಏನೂ ನಡೆಯುವುದಿಲ್ಲ, ಅಲ್ಲವೆ?"

ಉದ್ದಕ್ಕೂ ಇಂಥ ಚರ್ಚೆಗಳು; ಘಟನೆಗಳು. ವೇದ, ಉಪನಿಷತ್ತುಗಳ ಕಾಲ ಸರಿಸುಮಾರು ನಾಲ್ಕು ಐದು ಸಾವಿರ ವರುಷಗಳಿಂದಲೂ ಆಚರಣೆಯಲ್ಲಿ ನಡೆದು ಬಂದಿದೆಯಷ್ಟೆ. ಜನರಲ್ಲಿ ರಕ್ತಗತವಾಗಿ ಈ ಆಚರಣೆಗಳು ತುಂಬಿಕೊಂಡಿವೆ. ಯಜ್ಞ, ಯಾಗಗಳನ್ನೂ ಮಾಟ, ಮಂತ್ರಗಳನ್ನೂ ಜನ ನಂಬಿದ್ದಾರೆ; ಆಚರಿಸಿಕೊಂಡು ಬಂದಿದ್ದಾರೆ. ಜಗತ್ತು ನಂಬಿಕೆಯ ಮೇಲೆಯೇ ನಿಂತಿದೆ; ನಡೆಯುತ್ತಿದೆ. ಇದು ವೈದಿಕ ಮತದ ಸನಾತನರ ವಾದ.

"ಯಾವುದನ್ನೂ ಪ್ರಶ್ನಿಸದೆ ಒಪ್ಪಿಕೊಳ್ಳಬೇಡಿ. ಬದಲಾವಣೆಯೇ ನಿರಂತರ; ಶಾಶ್ವತ" ಎಂದು ಬುದ್ಧ ಸಾರುತ್ತಾನೆ. ಹಾಗೆಯೇ ಯಾವುದೋ ಸತ್ಯವನ್ನೂ ಕಂಡುಹಿಡಿಯಲು ಬುದ್ಧ ಹೊರಟಾಗ ಅವನಿಗೆ ಇಪ್ಪತ್ತೊಂಬತ್ತರ ಪ್ರಾಯ.

ಅವನು ಜನಸಾಮಾನ್ಯರಲ್ಲಿ ಒಬ್ಬನಲ್ಲ. ಒಂದು ರಾಜ್ಯದ ಅರಸು ಶುದ್ಧೋದನನ ಮಗ. ಪತ್ನಿ ಯಶೋಧರೆಯನ್ನೂ ಮಗು ರಾಹುಲನನ್ನೂ ಬಿಟ್ಟು ಅವನು ಕಾಡಿಗೆ ಹೊರಟು ಹೋಗುತ್ತಾನೆ. ಧ್ಯಾನದಲ್ಲಿ ಮುಳುಗಿದ್ದು ಏಳು ವರ್ಷಗಳ ನಂತರ ಬುದ್ಧನಾಗಿ ಅರಮನೆಗೆ ಮೊದಲು ಹಿಂದಿರುಗುತ್ತಾನೆ. ಅರಸ ಕುಮಾರನಾಗಿ ಅಲ್ಲ. ಒಬ್ಬ ಬೌದ್ಧ ಭಿಕ್ಷುವಾಗಿ. ಈಗ ರಾಹುಲ ಏಳು ವರ್ಷದ ಹುಡುಗ. ಯಶೋಧರೆ ಅರಮನೆಯಲ್ಲಿಯೇ ಇದ್ದವಳು; ಬೆಳೆದವಳು. ಪತಿ ತನ್ನನ್ನು ಬಿಟ್ಟುಹೋದನೆಂದು, ಸನ್ಯಾಸಿಯಾಗಿ ಹಿಂದಿರುಗಿದನೆಂದು, ಆಕೆ ಅವನನ್ನು ದೂಷಿಸಲಿಲ್ಲ; ಕೆಟ್ಟ ಮಾತು ಆಡಲಿಲ್ಲ. ಅದಕ್ಕೆ ಬದಲು ತಾನು ಬೌದ್ಧ 'ಭಿಕ್ಷುಣಿಯಾಗಿ, ಬೌದ್ಧನ ಸಂಘಕ್ಕೆ ಸೇರಿಕೊಳ್ಳುತ್ತಾಳೆ.'

ಬೌದ್ಧ ತತ್ತ್ವಗಳನ್ನು ಜಗತ್ತಿಗೆ ಹೆಚ್ಚು ಪರಿಚಯಿಸಿದವನೇ ಅಶೋಕ ಚಕ್ರವರ್ತಿ. ಬುದ್ಧನ ತತ್ತ್ವಗಳನ್ನು, ಸಿದ್ಧಾಂತಗಳನ್ನು, ಅಶೋಕ ಚಕ್ರವರ್ತಿ ಪೂರ್ಣವಾಗಿ ನಂಬಿದ್ದಾನೆ, ಒಪ್ಪಿದ್ದಾನೆ. ಅಹಿಂಸಾ ತತ್ತ್ವವೇ ಬೌದ್ಧಮತದ ಮುಖ್ಯ ಸಾರಾಂಶ. ಹಾಗಲ್ಲದೆ ಮಾನವರಲ್ಲಿನ ಮೇಲು–ಕೀಳುಗಳು ಅವನನ್ನು, ಮುಖ್ಯವಾಗಿ ವೈದಿಕ ಮತವನ್ನು ಧಿಕ್ಕರಿಸುವಂತೆ ಮಾಡಿವೆ. ಕರ್ಮಫಲ ಎಂದು ಅಸಮಾನತೆಯನ್ನು ಪೋಷಿಸುವ, ಘೋಷಿಸುವ ಬಗೆಗಂತೂ ಅವನ ಧಿಕ್ಕಾರವಿದೆ.

ಹಾಗೆಂದೇ ನಮ್ಮ ಬಾವುಟದಲ್ಲಿಯೂ ಅಶೋಕ ಚಕ್ರ ವಿಜೃಂಭಿಸಿದೆ. ಯಜ್ಞ–ಯಾಗಗಳ ಆಚರಣೆಯಿಲ್ಲದೆ ಆ ಕಾಲದಲ್ಲಿ ಯಾವ ಕೆಲಸವೂ ನಡೆಯುತ್ತ ಇರಲಿಲ್ಲ. ಜನರ ತಲೆಯೊಳಗೆ, ರಕ್ತದೊಂದಿಗೆ, ಈ ಪದ್ಧತಿ ತುಂಬಿ ಹೋಗಿತ್ತು. ಯಜ್ಞದಲ್ಲಿ ಒಂದು ಮೇಕೆಯೂ ಆಹುತಿಯಾಗುತ್ತಿತ್ತು.

ಅಶೋಕ ಈ ಪದ್ಧತಿಯನ್ನು ನಿಲ್ಲಿಸಿದ. ಬುದ್ಧನ ತತ್ತ್ವದಂತೆ ಪ್ರಾಣಿಬಲಿಯನ್ನು ನಿಷೇಧಿಸಿದ. ಪ್ರಾಣಿವಧೆ ಮಾಡಿದರೆ ಶಿಕ್ಷೆಗೆ ಒಳಗಾಗಬೇಕಾಗುತ್ತದೆ ಎಂದು ರಾಜಾಜ್ಞೆಯನ್ನೇ ಹೊರಡಿಸಿದ.

ನೇಪಾಳ, ಟಿಬೆಟ್, ಬರ್ಮಾ, ಚೈನಾ, ಜಪಾನ್ ಗಳಿಗೂ ಬೌದ್ಧಮತ ಹರಡಿತು. ದಕ್ಷನಾದ ಅಶೋಕ ಚಕ್ರವರ್ತಿಯೇ ಈ ಸಿದ್ಧಾಂತವನ್ನು ಆ ನಾಡುಗಳಿಗೆಲ್ಲ ಪ್ರಚುರಪಡಿಸಿದವನು. ಅಶೋಕನ ಒಬ್ಬ ಮಗನೂ ಮಗಳೂ ಶ್ರೀಲಂಕಾಕ್ಕೆ ಹೋಗಿ ಅಲ್ಲೇ ಎಂಟು ವರ್ಷಗಳು ಉಳಿದು ಸಿಂಹಳ ಭಾಷೆಯನ್ನು ಕಲಿತು, ಬುದ್ಧ ತತ್ತ್ವಗಳನ್ನು ಪ್ರಚಾರ ಮಾಡುತ್ತಾರೆ. ಪಾಟಲಿಪುತ್ರಕ್ಕೆ ಹಿಂದಿರುಗುವಾಗ ಮಧುರೆಯಲ್ಲಿಯೂ ಕಾಂಚೀಪಟ್ಟಣದಲ್ಲಿಯೂ ಉಳಿದು ಆ ನಗರಗಳಲ್ಲಿಯೂ ಬುದ್ಧನ ತತ್ತ್ವಗಳನ್ನು ಉಪದೇಶಿಸುತ್ತಾರೆ.

ಅಶೋಕ ಚಕ್ರವರ್ತಿ ತೀರಾ ಘಾಸಿಗೊಂಡದ್ದು ತಾನು ಕಳಿಂಗದ ಮೇಲೆ ದಂಡೆತ್ತಿ ನಡೆದಾಗ. ಕಳಿಂಗ ಎನ್ನುವುದು ಈಗಿನ ಒರಿಸ್ಸಾ ರಾಜ್ಯ. ಒಂದು ಲಕ್ಷದಷ್ಟು ಸಿಪಾಯಿಗಳೂ ಒಂದೂವರೆ ಲಕ್ಷ ಕುದುರೆಗಳೂ ಈ ಯುದ್ಧದಲ್ಲಿ ನಾಶವಾದುವಂತೆ – ಆ ಯುದ್ಧದಲ್ಲಿ ನಡೆದ ಸಾವು ನೋವುಗಳಿಗೆ ತಾನೇ ಕಾರಣ ಎಂದು ಬಹಳವಾಗಿ ಮರುಗಿದ ಚಕ್ರವರ್ತಿ ಅಶೋಕ, "ನಾನು ಇನ್ನು ಮುಂದೆ ಯುದ್ಧ ಮಾಡುವುದಿಲ್ಲ" ಎಂದು ತೀರ್ಮಾನ ಮಾಡುತ್ತಾನೆ. ತೀರ್ಮಾನ ಮಾತ್ರವಲ್ಲ, ಶಪಥ. ಅವನ ಮೆಚ್ಚಿನ ಸಹೋದರನೂ ಬಲಗೈ ಭಂಟನೂ ಆದ ಚಾರುದತ್ತನು ಈ ಯುದ್ಧದಲ್ಲಿ ಹತನಾಗುತ್ತಾನೆ. ಅಶೋಕ ಚಕ್ರವರ್ತಿಯ ಮನಃಪರಿವರ್ತನೆಗೆ ಈ ಯುದ್ಧದಲ್ಲಿ ಜರುಗಿದ ಸಾವುನೋವುಗಳೇ ಮುಖ್ಯ ಕಾರಣ.

ಮತ್ತೊಂದು ಮುಖ್ಯ ವಿಚಾರವೆಂದರೆ ಅಶೋಕನ ಪತ್ನಿಯರಲ್ಲಿಯೇ ಒಬ್ಬಳು ಬುದ್ಧನ ತತ್ತ್ವಗಳನ್ನೂ ಸಿದ್ಧಾಂತಗಳನ್ನೂ ಒಪ್ಪುವುದಿಲ್ಲ. ಸನಾತನ ಧರ್ಮವನ್ನೇ ಆಕೆ ನಂಬುತ್ತಾಳೆ. ಇವಳ ಕಡೆಯವರಿಂದ ಅಶೋಕನ ಕೊಲೆಯ ಯತ್ನವೂ ನಡೆಯುತ್ತದೆ. ಆದರೆ ಅಶೋಕ ಈ ಸಂಚಿನಿಂದ ಪಾರಾಗುತ್ತಾನೆ.

ಈ ಕೃತಿಯ ಕರ್ತೃ ಸಿದ್ಧಾರ್ಥನ್ ಅದ್ಭುತವಾಗಿ ಇಲ್ಲಿಯ ಬರಹವನ್ನು ಚಿತ್ರಿಸಿದ್ದಾರೆ. ಅದರಲ್ಲಿ ಯಶಸ್ವಿಯಾಗಿದ್ದಾರೆ. ಇಲ್ಲಿನ ಬರಹ ಓದಿಸಿಕೊಳ್ಳುವ ಗುಣವನ್ನು ಹೊಂದಿದೆ. ಸಾವಿರದ ಏಳುನೂರರಷ್ಟು ಪುಟಗಳು ಧಾರಾವಾಹಿಯಾಗಿ ಸಾಗಿವೆ. 'ಸಾಮ್ರಾಟ್ ಅಶೋಕನ್' ಸಾಧಾರಗಳೊಂದಿಗೆ ಕೂಡಿದ ಒಂದು ಒಳ್ಳೆಯ ಬರಹ; ಚಾರಿತ್ರಿಕ ಕಾದಂಬರಿ. ಲೇಖಕರು ಶ್ರೀಲಂಕಾದ ಅನೇಕ ಸ್ಥಳಗಳಿಗೆ ಹೋಗಿದ್ದಾರೆ. ವಿಷಯ ಸಂಗ್ರಹಣೆಗೆ ಸಾಕಷ್ಟು ಹೆಣಗಿದ್ದಾರೆ. ಹಾಗಾಗಿ ಈ ಕೃತಿ ಗಂಭೀರ ಸ್ವರೂಪವನ್ನು ಪಡೆದಿದೆ. ಒಂದು ಮುಖ್ಯ ಸಂಗತಿಯೆಂದರೆ ಕೆಲವು ಸಂಸ್ಕೃತ ಶ್ಲೋಕಗಳನ್ನು ತಮಿಳಿಗೆ ಭಾಷಾಂತರಿಸಿದ್ದಾರೆ. ಮತ್ತೆ ಕೆಲವನ್ನು ಸಂಸ್ಕೃತದಲ್ಲಿ ಇರುವ ಹಾಗೆ ಎಂದು ತಮಿಳಿನಲ್ಲಿ ಹಾಗೆಯೇ ಹಾಕಿದ್ದಾರೆ, ಎಂದರೆ ಬರೆದಿದ್ದಾರೆ. ಇಂಥವುಗಳಲ್ಲಿ ತಪ್ಪುಗಳು ಉಳಿದಿವೆಯೇನೋ ಎಂದು ನನಗೆ ಸಂದೇಹವಾಗಿದೆ. ಈ ಬಗ್ಗೆ ಸ್ವಲ್ಪ ಗಮನಹರಿಸುವುದು ಒಳ್ಳೆಯದು.

ಈ ಕೃತಿಗಳ ಪ್ರಕಟಣೆಯ ವಿಷಯವೂ ಅಷ್ಟೇ. ಸರಕಾರ, ವಿಶ್ವವಿದ್ಯಾಲಯಗಳು, ದೊಡ್ಡ ದೊಡ್ಡ ಸಂಘ ಸಂಸ್ಥೆಗಳು – ಇಂಥವುಗಳು ಮಾತ್ರ ಪ್ರಕಟಿಸಲು ಸಾಧ್ಯ. ಕೃತಿ ಮಹತ್ವ ಹೊಂದಿದ್ದರೂ ಮಾರಾಟ ಆಗುವುದು ವಿಳಂಬ. ಎಲ್ಲ ಭಾರತೀಯ ಭಾಷೆಗಳ ವಿಚಾರವೂ ಹೀಗೆಯೇ; ಒಂದೇ ಥರ. ಇದು ಮುಖ್ಯವಾಗಿ ಯೋಚಿಸಬೇಕಾದ ವಿಚಾರ.

**ಶೇಷನಾರಾಯಣ**
ಲಕ್ಕಪ್ಪ ಬಡಾವಣೆ, ನಂ. ೧೩೦, ೪ನೇ ಕ್ರಾಸ್, ಸಿಂಗಾಪುರ
ವಿದ್ಯಾರಣ್ಯಪುರ ಅಂಚೆ, ಬೆಂಗಳೂರು – ೫೬೦ ೦೯೭

## ನೆನಪು



ಹಲವು ಕಥೆ – ಕಾದಂಬರಿಗಳಿಂದ ಕನ್ನಡದ ಜನರ ಮನಗೆದ್ದ ಸೃಜನಶೀಲ ಬರಹಗಾರ, ಕನ್ನಡದ ಹಿರಿಯ ಸಾಹಿತಿ **ಶ್ರೀ ಯಶವಂತ ಚಿತ್ತಾಲರು** ನಿಧನರಾಗಿದ್ದು ಅತ್ಯಂತ ಖೇದಕರ. ಸೃಜನಶೀಲ ಬರಹಗಾರರಾಗಿದ್ದ ಅವರನ್ನು ಕಳೆದು ಕೊಂಡಿದ್ದಕ್ಕೆ 'ಹೊಸತು', 'ನವಕರ್ನಾಟಕ' ಬಳಗ ತೀವ್ರ ಸಂತಾಪ ವ್ಯಕ್ತಪಡಿಸುತ್ತದೆ.



**ಶಶಿಕಾಂತ ಯಡಹಳ್ಳಿ**

**ಕನ್ನಡ ಭಾಷೆ ಹಾಗೂ ಸಂಸ್ಕೃತಿಯ ಮೇಲೆ ಬೇರೆಲ್ಲಾ ಮಾಧ್ಯಮಗಳಿಗಿಂತ ಹೆಚ್ಚು ಪ್ರಭಾವ ಬೀರುವ ಸಾಮರ್ಥ್ಯ ಸಿನಿಮಾಗಳಿಗಿದೆ ಎನ್ನುವುದು ನಿರ್ವಿವಾದ. ಆದರೆ ಅದು ನಕಾರಾತ್ಮಕವಾಗಿ ಪ್ರಭಾವ ಬೀರುತ್ತಿರುವುದೇ ಆತಂಕದ ವಿಷಯ.**

# ಕನ್ನಡ ಭಾಷೆ-ಸಂಸ್ಕೃತಿ ಮತ್ತು ಡಬ್ಬಿಂಗ್

ಡಬ್ಬಿಂಗ್ ವರವೋ ಶಾಪವೋ ? ಎನ್ನುವುದನ್ನು ಪಕ್ಕಕ್ಕಿಟ್ಟು ಅದಕ್ಕೆ ಪೂರಕವಾದ ಬೇರೆ ಪ್ರಮುಖ ವಿಷಯಗಳ ಬಗ್ಗೆ ನೋಡೋಣ. ಡಬ್ಬಿಂಗ್ ಭೂತದ ವಿರುದ್ಧ ಸಿನಿಮಾ, ಟಿವಿ ರಂಗಗಳ ಹಲವು ನಟರು, ಕೆಲವು ತಂತ್ರಜ್ಞರು ಗಣರಾಜ್ಯೋತ್ಸವದ ಮಾರನೆಯ ದಿನ ಜನವರಿ ೨೬ರಂದು ಬೆಂಗಳೂರಿನಲ್ಲಿ ಬೀದಿಗಿಳಿದರು. "ಐದು ದಶಕಗಳಿಂದ ಇಲ್ಲದಿದ್ದ ಡಬ್ಬಿಂಗ್ ಈಗ್ಯಾಕೆ ? ಡಬ್ಬಿಂಗ್ ಬಂದರೆ ಕನ್ನಡ ಭಾಷೆ ಅವಸಾನವಾಗುತ್ತದೆ. ಅನ್ಯಭಾಷೆಗಳು ಕರ್ನಾಟಕವನ್ನಾಳುತ್ತವೆ. ಕನ್ನಡ ಚಲನಚಿತ್ರರಂಗ ಮಖಾಡೆ ಮಲಗುತ್ತದೆ. ಕನ್ನಡದ ಕಲಾವಿದರು – ತಂತ್ರಜ್ಞರು ನಿರುದ್ಯೋಗಿಗಳಾಗುತ್ತಾರೆ. ಕನ್ನಡಿಗರು ತಮ್ಮ ನೆಲದಲ್ಲೇ ಅನಾಥರಾಗುತ್ತಾರೆ..." ಹೀಗೆಲ್ಲಾ ಹಲವು ಆತಂಕಗಳನ್ನು, ಆಕ್ರೋಶಗಳನ್ನು ಸಿನಿಮಾ ನಾಯಕ ನಟ ನಟಿಯರು ಸಾರ್ವಜನಿಕವಾಗಿ ತೋಡಿಕೊಂಡರು. ಕನ್ನಡದ "ಹೋರಾಟಗಾರ"ರಾದ ವಾಟಾಳ್ ನಾಗರಾಜ್ ಈ ಡಬ್ಬಿಂಗ್ ವಿರೋಧಿ ಚಳುವಳಿಯ ವ್ಯವಸ್ಥಾಪಕರು. ಡಬ್ಬಿಂಗ್ ಪರ – ವಿರೋಧದ ಒಳಮರ್ಮವನ್ನರಿಯದ ಸಹಸ್ರಾರು "ಅಭಿಮಾನಿ ದೇವರುಗಳು" ಹೋಲ್‌ಸೇಲಾಗಿ ಸಿನಿಮಾ ನಾಯಕ – ನಾಯಕಿಯರನ್ನು ಕಣ್ಣಾರೆ ನೋಡುವ ಅವಕಾಶವನ್ನು ಸದುಪಯೋಗ ಪಡಿಸಿಕೊಂಡರು. "ಇನ್ನೂ ಹೆಚ್ಚಿನ ಸಂಖ್ಯೆಯಲ್ಲಿ ಕನ್ನಡಿಗರು ಬರಬೇಕಿತ್ತು" ಎಂದು ನಟ ಸುದೀಪ್ ಬೇಸರ ವ್ಯಕ್ತಪಡಿಸಿದರೆ, "ಒಬ್ಬನೆ ಬಂದರೂ ಸರಿ, ಸಾವಿರ ಮಂದಿ ಬಂದರೂ ಸರಿ ಅದು ರೆಪ್ರಜೆಂಟೇಶನ್, ಅದೇ ರೆಕಾಗ್ನಿಶನ್" ಎಂದು ಶಿವರಾಜಕುಮಾರ್ ಗುಡುಗಿದರು.

"ಕನ್ನಡ ಚಲನಚಿತ್ರರಂಗದ ಅಸ್ತಿತ್ವಕ್ಕೇನಾದರೂ ತೊಂದರೆಯಾದರೆ ಕನ್ನಡ ಭಾಷೆ ನೆಲ ಕಚ್ಚುತ್ತದೆ" ಎನ್ನುವ ಭಾವನಾತ್ಮಕ ಸಿದ್ಧಾಂತವನ್ನು ನಂಬಿಸಲು ಈ ನಮ್ಮ ಗ್ಲ್ಯಾಮರ್ ನಾಯಕರುಗಳು ಈ ಹೋರಾಟದ ಮೂಲಕ, ಮಾಧ್ಯಮಗಳಲ್ಲಿ ಹೇಳಿಕೆ ಕೊಡುವ ಮೂಲಕ ತಮ್ಮ ಆಕ್ರೋಶ ಆಟಾಟೋಪಗಳನ್ನು ಹೆಚ್ಚಾಗಿಯೇ ತೋರಿಸಿದರು. ಆದರೆ ಇದು ಅವಾಸ್ತವ ಪರಿಕಲ್ಪನೆ. ಕನ್ನಡ ಭಾಷೆಗೂ ದೃಶ್ಯಮಾಧ್ಯಮಕ್ಕೂ ಅನಿವಾರ್ಯವೆನಿಸುವ ಮಹತ್ತರವಾದ ಸಂಬಂಧವಿಲ್ಲ. ಕನ್ನಡ ಭಾಷೆ ಎಂಬ ಆಲದ ಮರದ ಒಂದು ಟೊಂಗೆಯಾಗಷ್ಟೆ ಸಿನಿಮಾರಂಗವನ್ನು ಪರಿಗಣಿಸಬೇಕು. ತನ್ನದೇ ಸ್ವಯಂಕೃತ ಪಾಪಗಳಿಂದ ಈ ಟೊಂಗೆ ಗೆದ್ದಲು ಹಿಡಿದು ನೆಲಕ್ಕೊರಗಿದರೂ ಮರದ ಅಸ್ತಿತ್ವಕ್ಕೇನೂ ಧಕ್ಕೆಯಿಲ್ಲ. ಆದರೆ ಒಂದು ಸುಂದರವಾದ ಭಾಗ ಕಳೆದುಹೋಯಿತಲ್ಲಾ ಎನ್ನುವ ಹಳಹಳಿಯಂತೂ ಇದ್ದೇ ಇರುತ್ತದೆ. ನಾಯಿಗೆ ಬಾಲ ಮುಖ್ಯ, ಬಾಲ ಕಳೆದುಕೊಂಡರೂ ನಾಯಿ ಬದುಕಬಹುದು. ನಾಯಿಯೇ ಇಲ್ಲವಾದರೆ ಬಾಲ ಇದ್ದೂ ಅಪ್ರಯೋಜಕ. ಆದರೆ ಬಾಲವೇ ನಾಯಿಯನ್ನು ನಿಯಂತ್ರಿಸಲು ಪ್ರಯತ್ನಿಸಿದರೆ, ನಾನಿರುವುದರಿಂದಲೇ ನೀನಿರುವುದು ಎಂದು ಬಾಲವೇ ನಾಯಿಗೆ ಹೇಳಿದರೆ ನಂಬಲು ಸಾಧ್ಯವೇ ? ಇಲ್ಲಿ ನಾಯಿ ಎಂದರೆ ಕನಿಷ್ಠ ಎಂದು ಅರ್ಥವಲ್ಲ. ಇದು ಕೇವಲ ಒಂದು ಉದಾಹರಣೆ ಮಾತ್ರ.

ಹಿಂದೆ ಕನ್ನಡದಲ್ಲಿ ಸಿನಿಮಾ ಎನ್ನುವುದು ಇಲ್ಲದಿದ್ದಾಗಲೂ ಕನ್ನಡ ಭಾಷೆ ಶ್ರೀಮಂತವಾಗಿತ್ತು. ಮುಂದೊಂದು ದಿನ ಇದೇ ರೀತಿ ಕಳಪೆ ಸಿನಿಮಾಗಳನ್ನು ಕೊಡುತ್ತಾ ಹೋಗಿ ಪ್ರೇಕ್ಷಕರಿಂದ ಸಿನಿಮಾಗಳು ಸಾರಾಸಗಟಾಗಿ ತಿರಸ್ಕೃತಗೊಂಡು ಇಡೀ ಸಿನಿಮಾರಂಗ ತನ್ನ ಅಸ್ತಿತ್ವವನ್ನು ಕಳೆದುಕೊಂಡರೂ ಕನ್ನಡ ಭಾಷೆ ಇದ್ದೇ ಇರುತ್ತದೆ. ಎಂಬತ್ತರ ದಶಕದವರೆಗೂ ಬಂದಿರುವ ಬಹುತೇಕ ಸಿನಿಮಾಗಳಲ್ಲಿ ಭಾಷೆಯ ಬಳಕೆ ಮತ್ತು ಸಾಂಸ್ಕೃತಿಕ ಶ್ರೀಮಂತಿಕೆ ಕನ್ನಡ ಭಾಷಾ ಬೆಳವಣಿಗೆಗೆ ಪೂರಕವಾಗಿತ್ತು. ತದನಂತರ ಕನ್ನಡ ಭಾಷೆಯನ್ನು ಒಂದು ಹಂತದಲ್ಲಿ ಕುಲಗೆಡಿಸಿದ್ದೇ ಇತ್ತೀಚಿನ ಎರಡು ದಶಕಗಳಲ್ಲಿ ಬಂದಿರುವ ಅರ್ಧಕ್ಕಿಂತ ಹೆಚ್ಚು ಕಳಪೆ ಸಿನಿಮಾಗಳು; ದ್ವಂದ್ವಾರ್ಥವುಳ್ಳ ಸಂಭಾಷಣೆಗಳು, ಅಶ್ಲೀಲ ನಡೆನುಡಿಗಳು,







ಡಗಾರ್. ಮಾಲ್, ಐಟಂ ಎನ್ನುವಂತಹ ಮಹಿಳಾ ವಿರೋಧಿ ಪದಗಳು. ಅಮ್ಮಾ ಲೂಜಾ ಅಪ್ಪಾ ಲೂಜಾ ಎನ್ನುವಂತಹ ದರಿದ್ರ ಸಿನಿಮಾ ಹಾಡುಗಳು.

ಸೆನ್ಸಾರ್ ಮಂಡಳಿ, ಸಬ್ಸಿಡಿ ಕಮಿಟಿ ಹಾಗೂ ಪ್ರಶಸ್ತಿ ಆಯ್ಕೆ ಕಮಿಟಿಯವರನ್ನು ಹೋಗಿ ಕೇಳಿ. ಶೇಕಡ ಎಪ್ಪತ್ತರಷ್ಟು ಸಿನಿಮಾಗಳಲ್ಲಿ ಬಳಸಲಾದ ಭಾಷೆ ಹಾಗೂ ತೋರಿಸಲಾದ ದೃಶ್ಯಗಳು ಹೇಗೆ ನಮ್ಮ ಭಾಷೆ ಹಾಗೂ ಸಂಸ್ಕೃತಿಗೆ ಮಾರಕವಾಗಿವೆ ಎನ್ನುವುದನ್ನು ವಿವರಿಸುತ್ತಾರೆ. ಈಗಲೂ ನಗರ – ಗ್ರಾಮಗಳ ಮಕ್ಕಳು, ಯುವಕರ ಬಾಯಲ್ಲಿ ಜನಪ್ರಿಯ ಸಿನಿಮಾಗಳು ಹುಟ್ಟುಹಾಕಿದ ಹೊಡಿ, ಬಡಿ, ಕಡಿ ಎನ್ನುವ ಭಾಷೆಯೇ ಬಳಕೆಯಲ್ಲಿದೆ. ಹಲವರು ಇಂದೂ ಗಟ್ಟಿ ಧ್ವನಿಯಲ್ಲಿ ಗುನುಗುವುದು ಕನ್ನಡ ಸಿನಿಮಾದ ದರಿದ್ರ ಹಾಡುಗಳನ್ನು. ಎಲ್ಲಾ ಚಿತ್ರಗಳೂ ಹೀಗೇ ಎಂದು ಹೇಳಲಾಗದು. ಆದರೆ ಬಹುತೇಕ ಚಿತ್ರಗಳು ನಮ್ಮ ಕನ್ನಡ ಭಾಷೆ ಮತ್ತು ಸಂಸ್ಕೃತಿಯ ಬೆಳವಣಿಗೆಗೆ ಪೂರಕವಾಗಿಲ್ಲ. ಬಹುತೇಕ ಚಿತ್ರಗಳು ವೈಭವೀಕರಿಸುವ ಲವ್, ಸೆಕ್ಸ್ ಮತ್ತು ಹಿಂಸೆಯಿಂದಾಗಿ ಯುವಜನಾಂಗವೇ ದಾರಿತಪ್ಪುವ ಸನ್ನಿವೇಶ ಸೃಷ್ಟಿಯಾಗಿರುವುದಂತೂ ಸುಳ್ಳಲ್ಲ. ಹೀಗಾಗಿ ಈ ವ್ಯಾಪಾರಿ ಕನ್ನಡ ಚಿತ್ರಗಳಿಂದ ಭಾಷೆ ಉಳಿಯುತ್ತದೆ, ಕನ್ನಡ ಸಂಸ್ಕೃತಿ ಬೆಳೆಯುತ್ತದೆ ಎನ್ನುವುದು ಸತ್ಯಕ್ಕೆ ದೂರವಾದ ಮಾತು.

ಕನ್ನಡ ಭಾಷೆ ಹಾಗೂ ಸಂಸ್ಕೃತಿಯ ಮೇಲೆ ಬೇರೆಲ್ಲಾ ಮಾಧ್ಯಮಗಳಿಗಿಂತ ಹೆಚ್ಚು ಪ್ರಭಾವ ಬೀರುವ ಸಾಮರ್ಥ್ಯ ಸಿನಿಮಾಗಳಿಗಿದೆ ಎನ್ನುವುದು ನಿರ್ವಿವಾದ. ಆದರೆ ಅದು ನಕಾರಾತ್ಮಕವಾಗಿ ಪ್ರಭಾವ ಬೀರುತ್ತಿರುವುದೇ ಆತಂಕದ ವಿಷಯ. ಕಲಾತ್ಮಕ ಎನ್ನುವ ಸಿನಿಮಾಗಳು, ಪ್ರಯೋಗಾತ್ಮಕ ಚಿತ್ರಗಳು ಕನ್ನಡ ಭಾಷೆ ಮತ್ತು ಸಂಸ್ಕೃತಿಗೆ ಪೂರಕವಾಗಿ ಅತ್ಯುತ್ತಮ ಕೊಡುಗೆಯನ್ನು ಕೊಟ್ಟು ಜಾಗತಿಕ ಮನ್ನಣೆಯನ್ನು ಗಳಿಸಿವೆಯಾದರೂ ಬಹುತೇಕ "ಅಭಿಮಾನಿ ದೇವರು"ಗಳು ನಕಾರಾತ್ಮಕವಾದ ವ್ಯಾಪಾರಿ ಸೂತ್ರಗಳ ಚಿತ್ರಗಳಿಗೆ ಮಾರುಹೋಗಿದ್ದೊಂದು ವಿಪರ್ಯಾಸ.

ಯಾರು ಏನೇ ಹೇಳಿದರೂ ಸಿನಿಮಾ ಎನ್ನುವುದು ಜಾಗತೀಕರಣದ ಕಾಲಘಟ್ಟದಲ್ಲಿ ಒಂದು ವ್ಯಾಪಾರೋದ್ಯಮ. ಉದ್ಯಮ ಎಂದ ಮೇಲೆ ಅಲ್ಲಿ ಲಾಭ ನಷ್ಟಗಳ ವ್ಯಾಕರಣ ಮಾತ್ರ ಅಸ್ತಿತ್ವದಲ್ಲಿರುತ್ತದೆ. "ಹಾಕಿದ ಬಂಡವಾಳಕ್ಕೆ ಪ್ರತಿಯಾಗಿ ಎಷ್ಟು ಲಾಭ ಬರುತ್ತದೆ, ಹಾಗೆ ಲಾಭವನ್ನು ಹೊಂದಲು ಏನೇನೆಲ್ಲಾ ಸರಕನ್ನು ನಾವು ಸಿದ್ಧಪಡಿಸಿ ಮಾರಬೇಕು, ಅದಕ್ಕೆ ಅದೆಷ್ಟು ವಾಮಮಾರ್ಗಗಳನ್ನು ಬಳಸಬೇಕು ?" ಎನ್ನುವ ಚಿಂತೆ ಹಾಗೂ ಚಿಂತನೆಯಲ್ಲೇ ಉದ್ಯಮ ಎನ್ನುವುದು ತನ್ನ ಅಸ್ತಿತ್ವವನ್ನು ಕಾಪಾಡಿಕೊಳ್ಳುತ್ತದೆ. ಇಲ್ಲಿ ಭಾಷೆ, ಸಂಸ್ಕೃತಿ, ಕಲಾತ್ಮಕತೆ, ಜನಪರತೆ, ಜೀವಪರತೆ ಎನ್ನುವುದೆಲ್ಲಾ ಮುಖ್ಯವಾಗುವುದೇ ಇಲ್ಲ. ಹೆಣ್ಣಿನ ಅಂಗಾಂಗಗಳನ್ನು ಬೆತ್ತಲೆ ತೋರಿಸಿದರೆ ಹಣ ಬರುತ್ತದೆಂದಾದರೆ ಅದನ್ನೇ ರೂಪಿಸಿಕೊಂಡು ಐಟಂ ಸಾಂಗ್‌ಗಳ ಒಂದು ಸರಣಿಯೇ ಶುರುವಾಗುತ್ತದೆ. ತಮ್ಮ ತಂಗಿ, ತಾಯಿ, ಹೆಂಡತಿ, ಗೆಳತಿಯರನ್ನು ಮನೆಯಲ್ಲಿ ಬೆಚ್ಚಗಿಡುವ ಇದೇ ವ್ಯಾಪಾರಿ ಚಿತ್ರಗಳ ಕೆಲವು ಜನ ಬೇರೆಯವರ ಹೆಣ್ಣುಮಕ್ಕಳನ್ನು ಬೆತ್ತಲೆಗೊಳಿಸಿ ಹಣ ದೋಚುವ ಕಾಯಕವನ್ನು ಬಲು ನಿಷ್ಠೆಯಿಂದಲೇ ಮಾಡುತ್ತಿದ್ದಾರೆ. ಹೆಣ್ಣನ್ನು ಭೋಗದ ವಸ್ತು ಎಂದು ಪ್ರತಿಬಿಂಬಿಸುವ ಸಿನಿಮಾಗಳನ್ನು ಬಿಕರಿ ಮಾಡುತ್ತಿದ್ದಾರೆ. ಇಂತಹ ವ್ಯಾಪಾರಿ ಚಿತ್ರಗಳಲ್ಲಿ ಈಗ ಡಬ್ಬಿಂಗ್ ವಿರೋಧಿಸಿ ಹೋರಾಟಕ್ಕಿಳಿದ ಬಹುತೇಕ ನಾಯಕ ನಟರುಗಳು ಸಂಕೋಚವಿಲ್ಲದೆ ಅಭಿನಯಿಸಿದ್ದಾರೆ. ಇಲ್ಲಿ ಕಲೆಯ ಹೆಸರಲ್ಲಿ ಕಾಸು ಮಾಡಿಕೊಳ್ಳುವ ದೊಡ್ಡ ತಂತ್ರವೇ ಇದೆ. ಇಂತಹ ವ್ಯಾಪಾರಿ ತಂತ್ರಕ್ಕೆ ಭಾಷೆಯ ಭಾವನಾತ್ಮಕತೆಯನ್ನು ಸೇರಿಸುವ ನೈತಿಕ ಹಕ್ಕು ನಿಜಕ್ಕೂ ಇಂತಹ ಸಿನಿಮಾಗಳನ್ನು ಮಾಡುವ ಹಾಗೂ ಅಂತಹ ಸಿನಿಮಾಗಳಲ್ಲಿ ತೊಡಗಿಸಿಕೊಳ್ಳುವ ಕಲಾವಿದ ತಂತ್ರಜ್ಞರಿಗೆ ಇದೆಯಾ ?

ಯಾವುದೇ ಉದ್ಯಮಕ್ಕೆ ಭಾಷೆ ಮತ್ತು ಸಂಸ್ಕೃತಿಯ ಹಂಗಿರುವುದಿಲ್ಲ ಎನ್ನುವುದು ಬಹುತೇಕ ಎಲ್ಲಾ ಕ್ಷೇತ್ರಗಳಲ್ಲೂ ಸಾಬೀತಾಗಿದೆ. ಸತ್ಯವೇನೆಂದರೆ ಆಯಾ ಭಾಷೆ ಮತ್ತು ಸಂಸ್ಕೃತಿಯನ್ನು ತನ್ನ ಹಿತಾಸಕ್ತಿಗೆ ಪೂರಕವಾಗಿ ವಿಕೃತಗೊಳಿಸುತ್ತಲೇ ಎಲ್ಲಾ ವ್ಯಾಪಾರೋದ್ಯಮಗಳು ಬೆಳೆಯುತ್ತವೆ. ಎಲ್ಲಾ ಬಗೆಯ ಉದ್ಯಮಿಗಳು ಲಾಭಕ್ಕೆ ನಿಷ್ಠರಾಗಿರುತ್ತಾರೆಯೇ ಹೊರತು ಭಾಷೆಗಲ್ಲ. ಭಾಷೆ ಎಂಬುದು ಉದ್ಯಮಿಗಳಿಗೆ ಕೇವಲ ಲಾಭ ಮಾಡಿಕೊಳ್ಳಲು ಇರುವ ಮಾಧ್ಯಮವಾಗಿದೆ. ಸಂಸ್ಕೃತಿ ಎನ್ನುವುದು 'ತೋರುಂಬ ಲಾಭ'ವಾಗಿದೆ. ಕಲೆ ಎನ್ನುವುದು ಕಾಸು ಸಂಪಾದನೆಗೆ ಹೆದ್ದಾರಿಯಾಗಿದೆ. ಇಂತಹುದರಲ್ಲಿಯೂ ಎಲ್ಲೋ ಕೆಲವೇ ಕೆಲವು ಪ್ರಜ್ಞಾವಂತರು ಭಾಷೆ, ಸಂಸ್ಕೃತಿ, ಕಲೆಗೆ ಪೂರಕವಾಗಿ ಸಿನಿಮಾ ಮಾಧ್ಯಮವನ್ನು ಬಳಸಿಕೊಂಡಿದ್ದಾರಾದರೂ ಅಂತಹವರು ಈ ವ್ಯಾಪಾರಿ ಸಂಸ್ಕೃತಿಯ ದಲ್ಲಾಳಿಗಳ ಕುತಂತ್ರಕ್ಕೆ ಒಂದಿಲ್ಲೊಂದು ರೀತಿಯಲ್ಲಿ ಬಲಿಯಾದವರು.

ತನ್ನ ಆಂತರಿಕ ಸಮಸ್ಯೆಯನ್ನು ಸಾರ್ವತ್ರಿಕಗೊಳಿಸಿ ಬಹುಜನರ ಬೆಂಬಲವನ್ನು ಹಾಗೂ ಸಿಂಪತಿಯನ್ನು ಗಳಿಸುವುದು ಉದ್ಯಮಿಗಳ ತಾಂತ್ರಿಕ ನಡೆಯಾಗಿದೆ. ಈಗ ಇದೇ ತಂತ್ರವನ್ನು ನಮ್ಮ ಕನ್ನಡ ಸಿನಿಮಾ ವ್ಯಾಪಾರೋದ್ಯಮದ ಫಲಾನುಭವಿಗಳು ಕನ್ನಡಿಗರ ಮೇಲೆ ಪ್ರಯೋಗಿಸುತ್ತಿದ್ದಾರೆ. ಸಿನಿಮೋದ್ಯಮದ ಸಮಸ್ಯೆಯನ್ನು ಕನ್ನಡ ಭಾಷಾ ಸಮಸ್ಯೆ ಎನ್ನುವಂತೆ ಬಿಂಬಿಸುತ್ತಿದ್ದಾರೆ. ಕನ್ನಡಿಗರನ್ನು ಭಾವನಾತ್ಮಕವಾಗಿ ಪ್ರಚೋದಿಸಿ, ಅವರ ಬೆಂಬಲವನ್ನು ಪಡೆದು ತಮ್ಮ ಹಿತಾಸಕ್ತಿಯನ್ನು ಕಾಪಾಡಿಕೊಳ್ಳಲು ಹೋರಾಟಕ್ಕಿಳಿದಿದ್ದಾರೆ. ಈ ತಂತ್ರಗಾರಿಕೆಯ ಅರಿವಾಗಿದ್ದರಿಂದಲೋ ಏನೋ ವಾಟಾಳ್ ಮತ್ತು ಕನ್ನಡ ರಕ್ಷಣಾ ಪಡೆಯ ಪ್ರವೀಣ್ ಶೆಟ್ಟಿ ಗುಂಪನ್ನು ಹೊರತುಪಡಿಸಿ ಬಹುತೇಕ ಕನ್ನಡ ಸಂಘಟನೆಗಳು ಹಾಗೂ ಕನ್ನಡ ಪರ ಹೋರಾಟಗಾರರು ಈ ಡಬ್ಬಿಂಗ್ ವಿರೋಧಿ ಹೋರಾಟದಿಂದ ಒಂದು ಅಂತರವನ್ನು ಕಾಪಾಡಿಕೊಂಡರು. ಪ್ರಗತಿಪರ ಚಿಂತಕರು, ವಿಚಾರವಾದಿಗಳು ದೂರವೇ ಉಳಿದರು. ಬಹುತೇಕ ಪ್ರಜ್ಞಾವಂತರು ಡಬ್ಬಿಂಗ್ ವಿರೋಧಿ ಪ್ರಹಸನವನ್ನು ನೋಡಿ ನಿರ್ಲಕ್ಷಿಸಿದರು.

ಈಗ ಡಬ್ಬಿಂಗ್ ಎನ್ನುವುದು ಬಂದರೆ ಕನ್ನಡ ಭಾಷೆಗೆ ಆತಂಕ ಉಂಟಾಗಲಿದೆ ಎನ್ನುವುದು ಡಬ್ಬಿಂಗ್ ವಿರೋಧಿಗಳ ಪ್ರಮುಖ ಆರೋಪವಾಗಿದೆ. ಡಬ್ಬಿಂಗ್ ಎಂದರೆ ಬೇರೆ ಭಾಷೆಯ ಚಿತ್ರಗಳಿಗೆ ಕನ್ನಡ ಭಾಷೆಯ ಧ್ವನಿಯನ್ನು ಒದಗಿಸಿ ಕನ್ನಡಿಗರಿಗೆ ಪ್ರದರ್ಶಿಸುವುದಾಗಿದೆ. ಈಗ ಕನ್ನಡಿಗರು ಕನ್ನಡ ಭಾಷೆಯ ಚಿತ್ರಗಳಿಗಿಂತಲೂ ಅನ್ಯಭಾಷೆಯ ಚಿತ್ರಗಳನ್ನು ಹೆಚ್ಚು ನೋಡುತ್ತಿದ್ದಾರೆನ್ನುವುದು ಗೊತ್ತಿರುವ ವಿಷಯ. ಹೇಗೂ ಥೀಯೆಟರ್‌ನಲ್ಲೋ, ಡಿವಿಡಿಗಳಲ್ಲೋ, ಇಂಟರ್‌ನೆಟ್‌ಗಳಲ್ಲೋ ಬೇರೆ ಭಾಷೆಯ ಚಿತ್ರಗಳನ್ನು ನೋಡುತ್ತಿರುವವರಿಗೆ ಅದೇ ಚಿತ್ರಗಳನ್ನು ಕನ್ನಡ ಭಾಷೆಯ ಮೂಲಕ ನೋಡುವಂತೆ ಮಾಡಿದರೆ ಏನು ಸಮಸ್ಯೆ ? ಕನ್ನಡ ಭಾಷೆಯ ಮೂಲಕ ಇಡೀ ಜಗತ್ತಿನ ಎಲ್ಲಾ ಭಾಷೆಯ ಚಿತ್ರಗಳನ್ನು ನೋಡಿದರೆ ಕನ್ನಡ ಭಾಷೆಗೆ ಆಗುವ ನಷ್ಟವೇನು ?

ನಿಜ ಹೇಳಬೇಕೆಂದರೆ ಡಬ್ಬಿಂಗ್‌ನಿಂದ ಕನ್ನಡ ಭಾಷೆಗೆ ಲಾಭವಿದೆ. ಸ್ಥಿತಿವಂತ ಕನ್ನಡಿಗರು ತಮ್ಮ ಮಕ್ಕಳಿಗೆ ಆಂಗ್ಲ ಮಾಧ್ಯಮದಲ್ಲಿ ಶಿಕ್ಷಣ ಕೊಡಿಸುತ್ತಿದ್ದಾರೆ. ಶಾಲೆಯಲ್ಲಿ ಕನ್ನಡದ ಉಸಿರೆತ್ತಲಾಗದ ಆ ಮಕ್ಕಳು ತಮ್ಮ ಜೊತೆಗಾರರೊಂದಿಗೆ ಆಂಗ್ಲ ಭಾಷೆಯಲ್ಲೇ ವ್ಯವಹರಿಸುತ್ತಿದ್ದಾರೆ. ಕನ್ನಡ ಭಾಷೆಯಿಂದ ಒಂದು ಅಂತರವನ್ನು ಕಾಪಾಡಿಕೊಂಡೇ ಯುವಕರಾಗುತ್ತಿದ್ದಾರೆ. ಮನೆಯಲ್ಲಿ ಕನ್ನಡ ಭಾಷೆ ಆಡಿದರೂ ಇವರನ್ನು ಆಂಗ್ಲ ಭಾಷೆ ಆವರಿಸಿಕೊಂಡಿರುತ್ತದೆ. ಇಂತಹವರು ಇಂಗ್ಲಿಷ್ ಚಿತ್ರಗಳನ್ನು ಅಥವಾ ಇಂಗ್ಲಿಷ್ ಸಬ್‌ಟೈಟಲ್ ಇರುವ ಬೇರೆ ದೇಶಗಳ ಚಿತ್ರಗಳನ್ನೋ ನೋಡಲು ಬಯಸುತ್ತಾರೆ. ಒಂದು ವೇಳೆ ಇವರು ನೋಡುತ್ತಿರುವ ಅದೇ ಸಿನಿಮಾಗಳನ್ನು ಕನ್ನಡ ಭಾಷೆಯಲ್ಲಿ ತೋರಿಸುವ ವ್ಯವಸ್ಥೆಯಾದರೆ ತಮ್ಮ ಮಾತೃಭಾಷೆಯಲ್ಲೇ ತಮಗಿಷ್ಟವಾದ ಚಿತ್ರಗಳನ್ನು ನೋಡಬಹುದು. ಅವರು ಕೇವಲ ಚಿತ್ರವನ್ನು ಮಾತ್ರ ನೋಡುವುದಿಲ್ಲ. ನೋಡುತ್ತಲೇ ಅವರು ಮರೆತುಹೋದ ಅದೆಷ್ಟೋ ಕನ್ನಡ ಭಾಷೆಯ ಶಬ್ದಗಳು ವಾಕ್ಯಗಳು ನೋಡುಗರ ಅರಿವಿಲ್ಲದಂತೆ ಅವರನ್ನು ಆವರಿಸಿಕೊಳ್ಳುತ್ತವೆ. ಕನ್ನಡ ಭಾಷೆ ಕಿವಿಯ ಮೇಲೆ ಬೀಳುತ್ತಾ ಹೋದಂತೆ ಆ ಭಾಷೆಗೆ ಆಪ್ತರಾಗುತ್ತಾರೆ. ಹೀಗೆ ಕನ್ನಡ ಭಾಷೆ ಎನ್ನುವುದು



ಆಂಗ್ಲ ಭಾಷಾ ಪ್ರೇರಿತರ ಅಂತರಂಗದಲ್ಲಿ ಚಿಗುರುತ್ತದೆ. ಹೀಗಾದರೂ ಒಂದಿಷ್ಟು ಭಾಷೆಯ ಬೆಳವಣಿಗೆಯ ಸಾಧ್ಯತೆಗಳಿವೆ.

ಡಬ್ಬಿಂಗ್ ಮಾಡದೇ ಹೋದರೂ ಅನ್ಯ ಭಾಷೆಯ ಚಿತ್ರಗಳನ್ನು ನೋಡುವವರನ್ನು ನಿರ್ಬಂಧಿಸಲಂತೂ ಸಾಧ್ಯವಿಲ್ಲ. ಯಾವಾಗ ನಿಯಂತ್ರಣ ಸಾಧ್ಯವಿಲ್ಲವೋ ಆಗ ಮಾತೃಭಾಷೆಯಲ್ಲೇ ಆ ಚಿತ್ರಗಳನ್ನು ತೋರಿಸಿದರೆ ಕನ್ನಡ ಭಾಷೆಗೆ ಅನುಕೂಲವಲ್ಲವೆ ? ನಮ್ಮ ಮಕ್ಕಳು ಇಂಗ್ಲಿಷಿನಲ್ಲಿ ಬರುವ ನ್ಯಾಷನಲ್ ಜಿಯಾಗ್ರಾಫಿಕ್, ಅನಿಮಲ್ ಪ್ಲಾನೆಟ್‌ಗಳಂತಹ ಅನೇಕ ಟಿವಿ ಚಾನೆಲ್‌ಗಳನ್ನು ಕನ್ನಡದಲ್ಲಿ ನೋಡಿದರೆ ಹೆಚ್ಚೆಚ್ಚು ಜ್ಞಾನ ಹೊಂದುತ್ತಾ ಕನ್ನಡ ಭಾಷೆಯ ಜೊತೆಗೆ ಅನುಸಂಧಾನ ಮಾಡುತ್ತಾ ಬೆಳೆಯುತ್ತಾರಲ್ಲವೆ ?

ಈಗ ತಮಿಳು, ತೆಲುಗು, ಮಲಯಾಳಂ, ಹಿಂದಿ, ಇಂಗ್ಲೀಷ್...  ಮುಂತಾದ ಭಾಷೆಯ ಚಿತ್ರಗಳನ್ನು ನೋಡುವ ಬಹುತೇಕರು ಆಯಾ ಭಾಷೆಗಳನ್ನು ತಮಗರಿವಿಲ್ಲದೆ ಕಲಿಯುತ್ತಿದ್ದಾರೆ. ಆಯಾ ಭಾಷೆಗಳ ಚಿತ್ರಗಳ ಮೋಡಿಗೊಳಗಾಗಿ ಮಾತೃಭಾಷಾ ಕೀಳರಿಮೆಯನ್ನು ಬೆಳೆಸಿಕೊಳ್ಳುತ್ತಿದ್ದಾರೆ. ಜೊತೆಗೆ ಅನ್ಯ ಭಾಷಿಕರೊಂದಿಗೆ ಅವರದೇ ಭಾಷೆಯಲ್ಲಿ ಸಂವಹನ ಮಾಡಲು ಆರಂಭಿಸುತ್ತಾರೆ. ಇದರಿಂದಾಗಿ ಕನ್ನಡ ಭಾಷೆಗೆ ನಿಜಕ್ಕೂ ಹೊಡೆತ ಬೀಳುತ್ತದೆ. ಈ ಅನಾಹುತವನ್ನು ತಪ್ಪಿಸಲು ಕನ್ನಡ ಭಾಷೆಯ ಮೂಲಕವೇ ಎಲ್ಲಾ ಭಾಷೆಯ ಜನಪ್ರಿಯ ಚಿತ್ರಗಳನ್ನು, ಟಿವಿ ಕಾರ್ಯಕ್ರಮಗಳನ್ನು ತೋರಿಸುವುದರ ಮೂಲಕ ಕನ್ನಡ ಭಾಷೆಯ ಬೆಳವಣಿಗೆಗೆ ಪೂರಕವಾಗಿ ಸ್ಪಂದಿಸಬಹುದಾಗಿದೆ. ಮನೆಯಲ್ಲಿ ಮಕ್ಕಳು, ಯುವಕರು ಬೇರೆ ಭಾಷೆಯ ಚಾನೆಲ್‌ಗಳನ್ನೋ, ಚಿತ್ರಗಳನ್ನೋ ನೋಡುವಾಗ  ಮನೆಯ ಹಿರಿಯರು ಭಾಷೆ ಅರಿಯದೆ ಒಂದು ರೀತಿಯ ಕೀಳರಿಮೆಯನ್ನು ಹೊಂದುತ್ತಾರೆ. ಅಕಸ್ಮಾತ್ ಅನ್ಯ ಭಾಷೆಗಳ ದೃಶ್ಯಮಾಧ್ಯಮವನ್ನು ಕನ್ನಡದಲ್ಲಿ ನೋಡುವ ಅವಕಾಶ ಒದಗಿದರೆ ಮನೆಯವರೆಲ್ಲಾ ಕುಳಿತು ನೋಡುತ್ತಾ... ಸಂಭಾಷಿಸುತ್ತಾ... ಕನ್ನಡವನ್ನು ಸವಿಯಬಹುದಲ್ಲವೆ ?

ಹೋಗಲಿ, ಎಲ್ಲಿಯೂ ಇಲ್ಲದ ಡಬ್ಬಿಂಗ್ ವಿರೋಧ ಕರ್ನಾಟಕದಲ್ಲಿ ಮಾತ್ರ ಯಾಕೆ ? ಡಬ್ಬಿಂಗ್‌ನಿಂದ ಮುಕ್ತವಾಗಿರುವ ಭಾರತದ ಎಲ್ಲಾ ಭಾಷೆಗಳು ಈಗೇನು ಸರ್ವನಾಶವಾಗಿವೆಯಾ ? ಮರಾಠಿ ಭಾಷೆ ಡಬ್ಬಿಂಗ್‌ನಿಂದಾಗಿ ಅವನತಿ ಹೊಂದಿತು ಎನ್ನುತ್ತಾರೆ. ಇದು ಅವಾಸ್ತವ. ಮುಂಬೈಯೊಂದನ್ನು ಮಾತ್ರ ಗಮನಿಸಿದವರು ಈ ರೀತಿ ಹೇಳಬಹುದಾಗಿದೆ. ಆದರೆ ಕೇವಲ ಮುಂಬೈ ಒಂದೇ ಇಡೀ ಮಹಾರಾಷ್ಟ್ರ ಆಗಲಾರದು. ಕರ್ನಾಟಕದಲ್ಲಿ ಪುಕ್ಕಟೆ ನಾಟಕಗಳನ್ನು ತೋರಿಸಿದರೂ ಜನ ಬರುತ್ತಿಲ್ಲ. ಆದರೆ ಮಹಾರಾಷ್ಟ್ರದಲ್ಲಿ ಹಣ ಕೊಟ್ಟು ಸರದಿ ಸಾಲಲ್ಲಿ ನಿಂತು ಟಿಕೆಟ್ ಪಡೆದು ನಾಟಕಗಳನ್ನು ಮರಾಠಿಗರು ನೋಡುತ್ತಾರೆ. ಇಲ್ಲಿ ಸರಕಾರಿ ಗ್ರಂಥಾಲಯಗಳೇ ಕಣ್ಣುಮುಚ್ಚುತ್ತಿವೆ. ಆದರೆ ಮಹಾರಾಷ್ಟ್ರದಲ್ಲಿ ಖಾಸಗಿ ಗ್ರಂಥಾಲಯಗಳು ಲಾಭದಾಯಕವಾಗಿ ನಡೆಯುತ್ತಿವೆ. ಹಿಂದಿಯನ್ನು ವ್ಯಾವಹಾರಿಕ ಭಾಷೆಯನ್ನಾಗಿಸಿಕೊಂಡರೂ ಬಹುತೇಕ ಮರಾಠಿಗರು ತಮ್ಮ ಮಾತೃಭಾಷೆಯನ್ನು ಬಿಟ್ಟಿಲ್ಲ. ಕನ್ನಡಿಗರ ಹಾಗೆ ಇಂಗ್ಲಿಷ್ ವ್ಯಾಮೋಹದ ಸಮೂಹಸನ್ನಿಗೆ ಒಳಗಾಗಿಲ್ಲ. ಭಾರತದಲ್ಲಿ ಯಾವುದಾದರೂ ಭಾಷೆ ಅವನತಿಯತ್ತ ಸಾಗಿದ್ದರೆ ಅದಕ್ಕೆ ಆಂಗ್ಲ ಭಾಷಾ ಪ್ರಧಾನ ಶಿಕ್ಷಣ ಪದ್ಧತಿ ಮಾತ್ರ ಕಾರಣವಾಗಿದೆಯೇ ಹೊರತು ಡಬ್ಬಿಂಗ್ ಅಲ್ಲವೇ ಅಲ್ಲ. ಈ ಸತ್ಯಗಳನ್ನು ತಿರುಚಿ ಕನ್ನಡಿಗರನ್ನು ಭಾವನಾತ್ಮಕವಾಗಿ ಪ್ರಚೋದಿಸಿ ತಮ್ಮ ಸ್ವಾರ್ಥಸಾಧನೆಗಾಗಿ ಇಳಿದಿರುವ ಕನ್ನಡ ದೃಶ್ಯಮಾಧ್ಯಮಗಳ ಕೆಲವು ಜನರನ್ನು ಯಾಕೆ ಬೆಂಬಲಿಸಬೇಕು ? ರೈತರ ಆತ್ಮಹತ್ಯೆ, ಸರಕಾರ ಜನರ ಮೇಲೆ ದಾಳಿ ಮಾಡಿದಾಗ, ದಲಿತರ ಮೇಲೆ ನಿರಂತರ ದಬ್ಬಾಳಿಕೆಗಳು ನಡೆದಾಗ, ಮಹಿಳೆಯರ ಮೇಲೆ ದಿನನಿತ್ಯ ಲೈಂಗಿಕ ಶೋಷಣೆ ಆಗುತ್ತಿರುವಾಗ, ಕನ್ನಡ ಕುಲ – ನೆಲ – ಜಲಕ್ಕೆ ಆತಂಕ ಎದುರಾದಾಗ, ಭ್ರಷ್ಟಾಚಾರ ಎನ್ನುವುದು ರಾಜ್ಯಾದ್ಯಂತ ಸರ್ವವ್ಯಾಪಿಯಾಗಿರುವಾಗ... ಎಂದೂ ಎಂದೆಂದೂ ಧ್ವನಿ ಎತ್ತದ ಕೇವಲ ದುಡ್ಡಿನ ಮೇಲೆ ಧಿಮಾಕು ತೋರಿಸುವ ಸಿನಿಮಾ ಜನರ ಪರವಾಗಿ ಹೋರಾಟಕ್ಕಿಳಿಯಬೇಕೆ ?




ಕನ್ನಡಿಗರ ಔದಾರ್ಯದಿಂದಲೇ ಐಶಾರಾಮಿ ಜೀವನ ನಡೆಸುತ್ತಿರುವವರು ತಮ್ಮ ಸ್ವಂತ ಅಸ್ತಿತ್ವಕ್ಕೆ ಬಂದ ಆತಂಕದಿಂದಾಗಿ ಧ್ವನಿ ಎತ್ತಿದಾಗ ಕನ್ನಡಿಗರೆಲ್ಲರೂ ಒಕ್ಕೊರಲಿನಿಂದ ಬೆಂಬಲಿಸಿ ಬೀದಿಗಿಳಿಯಬೇಕೆ ? ನಮ್ಮ ದೇಶದ ಸಂವಿಧಾನಕ್ಕೆ ಅಗೌರವ ತೋರಿಸುವ ವರೊಂದಿಗೆ, ಈ ನೆಲದ ಕಾನೂನನ್ನು ಕಡೆಗಣಿಸಿದವ ರೊಂದಿಗೆ ಇಡೀ ಕನ್ನಡ ಜನತೆ ಕೈಜೋಡಿಸಬೇಕೆ ?

ಈ ಭಾಷೆಯೆಂಬ ಭಾವನಾತ್ಮಕ ಮಂತ್ರ ಹೆಚ್ಚು ಮೋಡಿ ಮಾಡದಿದ್ದರೆ, ಕನ್ನಡದ ಲಕ್ಷಾಂತರ ಕಲಾವಿದರು ಹಾಗೂ ತಂತ್ರಜ್ಞರು ಬೀದಿಪಾಲಾಗುವರೆಂಬ ಇನ್ನೊಂದು ಹುಸಿ ಸೆಂಟಿಮೆಂಟ್ ಸುದ್ದಿಯನ್ನು ಡಬ್ಬಿಂಗ್ ವಿರೋಧಿಗಳ ಪಡೆ ಸಮರ್ಥಿಸಿಕೊಳ್ಳುತ್ತಿದೆ. ಆದರೆ ಸತ್ಯವೇನೆಂದರೆ ಕನ್ನಡ ಸಿನಿಮಾ ನಿರ್ಮಾಣದ ನೇಪಥ್ಯದಲ್ಲಿ ಕೆಲಸ ಮಾಡುವ ಲೈಟ್‌ಮ್ಯಾನ್‌ನಿಂದ ಹಿಡಿದು ಕ್ಯಾಮರಾಮ್ಯಾನ್ ವರೆಗೂ ಬಹುತೇಕ ಅನ್ಯ ಭಾಷೀಯರೆ ಕೆಲಸ ಮಾಡುತ್ತಿದ್ದಾರೆ. ಕನ್ನಡಿಗರಿದ್ದಾರಾದರೂ ಅವರಿಗೆ ಹೆಚ್ಚು ಮನ್ನಣೆಯನ್ನು ಕೊಡಲಾಗುತ್ತಿಲ್ಲ. ಅದೆಷ್ಟೋ ಉದಯೋನ್ಮುಖ ಕಲಾವಿದರಿಗೆ, ಸಹಾಯಕರಿಗೆ ಕನಿಷ್ಠ ಸಂಭಾವನೆಯನ್ನೂ ಕೊಡದೆ ದುಡಿಸಿಕೊಳ್ಳಲಾಗುತ್ತಿದೆ. ತಾಂತ್ರಿಕವಾಗಿ ಪರಿಣತರಾದವರು ಯಾವ ಭಾಷೆಯ ಸಿನಿಮಾ ಇಂಡಸ್ಟ್ರಿಯಲ್ಲಿದ್ದರೂ ಬದುಕುತ್ತಾರೆ. ಡಬ್ಬಿಂಗ್ ಬಂದ ತಕ್ಷಣ ಸಿನಿಮಾ – ಟಿವಿ ಧಾರಾವಾಹಿ ನಿರ್ಮಾಣಗಳೇನೂ ಸಂಪೂರ್ಣ ಬಂದಾಗುವುದಿಲ್ಲವಲ್ಲ. ತಾಕತ್ತಿದ್ದವರು, ಟ್ಯಾಲೆಂಟ್ ಇದ್ದವರು ಎಲ್ಲಿದ್ದರೂ ಬದುಕುತ್ತಾರೆ.

ನಮ್ಮ ಸಿನಿಮಾ ನಿರ್ಮಾತೃಗಳಿಗೆ ಅನ್ಯ ಭಾಷೆಯ ತಂತ್ರಜ್ಞರು ಬೇಕು, ಬೇರೆ ಭಾಷೆಯ ನಾಯಕಿಯರು – ಖಳನಾಯಕರು ಬೇಕು, ಕಥೆ ಕೂಡ ಎರವಲು ಪಡೆದದ್ದೇ ಆಗಬೇಕು, ಕೆಲವು ಸಲ ನಿರ್ದೇಶಕರು ಬೇರೆ ಭಾಷೆಯವರೇ ಆಗಬೇಕು... ಆದರೆ ಹೀರೋಗಳಾಗಿ ಈ ಸೋಕಾಲ್ಡ್ ಕನ್ನಡಿಗರು ಮಿಂಚಬೇಕು. ಇದರಿಂದ ಅರ್ಥವಾಗುತ್ತದೆ ಡಬ್ಬಿಂಗ್ ಬರುವುದರಿಂದ ಯಾರಿಗೆ ಲಾಭ ಎನ್ನುವುದು. ಲಾಭ ನಷ್ಟಗಳ ಲೆಕ್ಕಾಚಾರ ಹಾಕಬೇಕಾದ ಬಹುತೇಕ ನಿರ್ಮಾಪಕರೇ ಡಬ್ಬಿಂಗ್ ವಿರುದ್ಧವಾಗಿ ಮಾತಾಡುತ್ತಿಲ್ಲ. ವಿತರಕರು, ಪ್ರದರ್ಶಕರು ಚಕಾರವೆತ್ತುತ್ತಿಲ್ಲ. ಪ್ರಜ್ಞಾವಂತ ಸಿನಿಮಾ ನಿರ್ದೇಶಕರು ಡಬ್ಬಿಂಗನ್ನು ವಿರೋಧಿಸುತ್ತಿಲ್ಲ. ಈ ಎಲ್ಲಾ ಥಳಕು ಬಳುಕಿನ ಲೋಕವನ್ನು ಕಟ್ಟಲು ಮೂಲ ಕಾರಣರಾದ ಪ್ರೇಕ್ಷಕ ಪ್ರಭುಗಳು ಡಬ್ಬಿಂಗ್ ಬೇಡವೇ ಬೇಡಾ ಎಂದು ಹಠ ಹಿಡಿದು ಕೂತಿಲ್ಲ. ತಮ್ಮ ಶ್ರಮದ ಸಹಸ್ರಾರು ಪಟ್ಟು ಹರಿದುಬರುವ ಅಗಣಿತ ಲಾಭದಲ್ಲಿ ಎಲ್ಲಿ ಖೋತಾ ಆಗುವುದೋ, ಎಲ್ಲಿ ತಮ್ಮ ಸಾರ್ವಭೌಮತೆಗೆ ಧಕ್ಕೆ ಬರುತ್ತದೆಯೋ ಎಂದು ಆತಂಕಗೊಂಡ ಸಿನಿಮಾ ಟಿವಿ ಫಲಾನುಭವಿ ನಾಯಕ–ನಾಯಕಿಯರು ಬೀದಿಗೆ ಬಂದಿದ್ದಾರೆ. ತಮ್ಮ ಸಮಸ್ಯೆಯನ್ನು ಸಾರ್ವತ್ರಿಕಗೊಳಿಸುತ್ತಿದ್ದಾರೆ. ಜನತೆಯನ್ನು ತಮ್ಮ ತಾರಾಮೆರುಗಿನಿಂದ ಸಮ್ಮೋಹಿತರನ್ನಾಗಿಸಲು ಪ್ರಯತ್ನಿಸುತ್ತಿದ್ದಾರೆ.

ಅರ್ಥವಾಗದ ಅನ್ಯ ಭಾಷೆಯಲ್ಲಿರುವ ಮನರಂಜನೆ, ಬೋಧನೆ, ಶಿಕ್ಷಣವನ್ನು ನಮ್ಮದೇ ಮಾತೃಭಾಷೆಯಲ್ಲಿ ನೋಡುವ ಹಕ್ಕೂ ನಮ್ಮ ಮಕ್ಕಳಿಗಿಲ್ಲವೇ ? ಎಲ್ಲಾ ಭಾಷೆಯಲ್ಲಿರುವ ಅರಿವನ್ನು ಕನ್ನಡದಲ್ಲಿ ಪಡೆಯುವ ಕನ್ನಡಿಗರ ಹಕ್ಕನ್ನು ನಿರಾಕರಿಸುವುದು ಒಂದು ರೀತಿಯಲ್ಲಿ ಜನವಿರೋಧಿ ನಿಲುವಾಗಿದೆಯಲ್ಲವೇ ? ಕೆಲವೇ ಕೆಲವು ಜನ ತಮ್ಮ ಸ್ವಾರ್ಥಕ್ಕಾಗಿ ಕೋಟ್ಯಂತರ ಜನರ ಹಕ್ಕನ್ನು ನಿರ್ಬಂಧಿಸುವುದು ಜೀವವಿರೋಧಿಯಲ್ಲವೆ ? ಭಾರತದ ಸಂವಿಧಾನಕ್ಕೆ ಗೌರವ ಕೊಡದೆ ಅದರ ಒಕ್ಕೂಟದ ಪರಿಕಲ್ಪನೆಯ ಆಶಯಕ್ಕೆ ವಿರುದ್ಧವಾದ ನಿಲುವನ್ನು ಹೊಂದಿರುವ ಡಬ್ಬಿಂಗ್ ವಿರೋಧಿಗಳ ನಿಲುವು ಸರಿಯೇ ? ಇಷ್ಟಕ್ಕೂ ಅಂತಿಮವಾಗಿ ಡಬ್ಬಿಂಗ್ ಬೇಕೆ ಬೇಡವೆ ಎಂದು ತೀರ್ಮಾನಿಸುವವರು ಪ್ರೇಕ್ಷಕ ಪ್ರಭುಗಳೇ.

**ಶಶಿಕಾಂತ ಯಡಹಳ್ಳಿ**
ನಂ. ೧೩೧, 'ಪ್ರಗತಿ ನಿವಾಸ' ರಾಮ ದೇವಸ್ಥಾನದ ರಸ್ತೆ
ದೊಮ್ಮಲೂರು, ಬೆಂಗಳೂರು – ೫೬೦ ೦೭೧




# ರಾಷ್ಟ್ರೀಕೃತ ಬ್ಯಾಂಕುಗಳ ಕೆಟ್ಟ ಸಾಲಗಳು

**ಕೊಳಲೂರು ರಾಧೇಯ**

ಇತ್ತೀಚಿನ ವರ್ಷಗಳಲ್ಲಿ, ಬ್ಯಾಂಕ್ ಕ್ಷೇತ್ರದಲ್ಲಿ 'ಕೆಟ್ಟ ಸಾಲಗಳು' (ಅನುತ್ಪಾದಕ ಆಸ್ತಿಗಳು) ಎಂಬ ಪದಪುಂಜಗಳು ಹೆಚ್ಚಾಗಿ ಕೇಳಿಬರುತ್ತಿವೆ. ಬ್ಯಾಂಕ್ ಪರಿಭಾಷೆಯಲ್ಲಿ (ಆಂಗ್ಲ ಭಾಷೆಯಲ್ಲಿ) ಮರುಪಾವತಿಯಾಗದ ಸಾಲಗಳನ್ನು (Non-performing Assets) ಎನ್‌ಪಿಎ ಎಂದು ಕರೆಯುತ್ತಾರೆ. ವರ್ಷದಿಂದ ವರ್ಷಕ್ಕೆ ಈ ಕೆಟ್ಟ ಸಾಲಗಳ ಮೊತ್ತ ಜಾಸ್ತಿಯಾಗುತ್ತಿರುವುದು ಅತ್ಯಂತ ಕಳವಳಕಾರಿ ವಿಷಯ. ಸೆಪ್ಟೆಂಬರ್ ೨೦೧೩ರಲ್ಲಿ, ಸಾರ್ವಜನಿಕ ಕ್ಷೇತ್ರದ ಬ್ಯಾಂಕುಗಳ ಎನ್‌ಪಿಎ ಶೇ. ೨೮.೫ರಷ್ಟು ವೃದ್ಧಿಸಿ, ಅದರ ಮೊತ್ತ ರೂ. ೨.೩೬ ಲಕ್ಷ ಕೋಟಿಯಷ್ಟಿತ್ತು ಎಂದು ಸ್ವತಃ ಕೇಂದ್ರ ಸರ್ಕಾರದ ಅರ್ಥ ಸಚಿವ ಪಿ. ಚಿದಂಬರಂ ಹೇಳಿದ್ದಾರೆ. (ಫೈನಾನ್ಷಿಯಲ್ ಎಕ್ಸ್‌ಪ್ರೆಸ್ ೬-೩-೨೦೧೪ರ ಸಂಚಿಕೆ, ಪುಟ ೮) ಮಾರ್ಚ್ ೨೦೧೩ರಲ್ಲಿ ಎನ್‌ಪಿಎಯ ಮೊತ್ತ ರೂ. ೧.೮೩ ಲಕ್ಷ ಕೋಟಿಯಷ್ಟಿತ್ತು.

ಈ ಋಣಾತ್ಮಕ ಬೆಳವಣಿಗೆಗೆ ಎಲ್ಲ ಕ್ಷೇತ್ರಗಳ, ಜನವಿಭಾಗಗಳ ಕೊಡುಗೆಗಳೂ ಇವೆ. ಸಣ್ಣವರಿಂದ ಹಿಡಿದು ಅತಿ ದೊಡ್ಡ ಕುಳಗಳೂ ಸಾಲ ಮರುಪಾವತಿ ಮಾಡದವರ ಪೈಕಿ ಇದ್ದಾರೆ. ಆದರೆ ಸ್ವಾಭಾವಿಕವಾಗಿ ದೊಡ್ಡ ಕುಳಗಳು ಮರುಪಾವತಿ ಮಾಡದ ಸಾಲಗಳ ಮೊತ್ತ ಜಾಸ್ತಿ ಇದ್ದೇ ಇರುತ್ತದೆ. ದೊಡ್ಡ ದೊಡ್ಡ ವ್ಯಾಪಾರಿ ಗುಂಪುಗಳು, ಕುಟುಂಬಗಳು, ಕೈಗಾರಿಕೋದ್ಯಮಿಗಳು – ರೈತರು ಇತ್ಯಾದಿ ಮಂದಿ ಸಾಲ ಚುಕ್ತಾ ಮಾಡದವರ ಪಟ್ಟಿಯಲ್ಲಿದ್ದಾರೆ. ಪಿ. ಚಿದಂಬರಂ "ದೊಡ್ಡ ಕಾರ್ಪೊರೇಟ್ ಮತ್ತು ಸಣ್ಣ ಕೈಗಾರಿಕೆಗಳ ಕ್ಷೇತ್ರಗಳಲ್ಲಿ ಎನ್‌ಪಿಎ ಅಧಿಕವಿದೆ" ಎಂದು ತಿಳಿಸಿದ್ದಾರೆ (ಫೈನಾನ್ಷಿಯಲ್ ಎಕ್ಸ್‌ಪ್ರೆಸ್, ಸಂಚಿಕೆ : ೬-೩-೨೦೧೪, ಪುಟ ೮)

ವ್ಯಾಪಾರದಲ್ಲಿ ಏರುಪೇರುಗಳಾಗುವುದು ಸಹಜ. ಈ ಪ್ರಕ್ರಿಯೆ ಸಣ್ಣ ವ್ಯಾಪಾರಿ ಕ್ಷೇತ್ರವನ್ನೂ ಬಾಧಿಸುತ್ತದೆ. ದೊಡ್ಡ ವ್ಯಾಪಾರವೂ ಇದಕ್ಕೆ ಹೊರತಾಗಿಲ್ಲ. ಬ್ಯಾಂಕುಗಳು ಸಾಲ ನೀಡುವಾಗ ಹಲವು ವಿಧದ ಜಾಗರೂಕತಾ ಕ್ರಮಗಳನ್ನು ತೆಗೆದು ಕೊಳ್ಳುತ್ತವೆ. ಆದಾಗ್ಯೂ ಕೆಲವು ಸಾಲಗಳು ಮರುಪಾವತಿಯಾಗುವುದಿಲ್ಲ. ಬ್ಯಾಂಕುಗಳು ಮತ್ತು ಸಾಲಗಾರರ ತಪ್ಪು ವ್ಯಾವಹಾರಿಕ ನಿರ್ಧಾರಗಳಿಂದ ಸಾಲಗಳು ಚುಕ್ತಾ ಆಗದೇ ಇರುವುದುಂಟು. ಸಾಲಗಾರರು ತಮ್ಮ ಸ್ವಂತ ಬಳಕೆಯಾಗಿ ಸಾಲದ ಹಣವನ್ನು ಬಳಸಿಕೊಂಡು ಸಾಲ ಸುಸ್ತಿಯಾಗಿರಬಹುದು. ಸಾಲಗಾರರು ಬೇಕಂತಲೇ ಬ್ಯಾಂಕುಗಳಿಗೆ ಮೋಸ ಮಾಡಿ, ಸಾಲದ ಹಣವನ್ನು ಗುಳುಂ ಮಾಡಿದ ಅನೇಕ ಉದಾಹರಣೆಗಳಿವೆ. ಬ್ಯಾಂಕುಗಳ ಕೆಲವು ವರಿಷ್ಠ, ಭ್ರಷ್ಟ ಅಧಿಕಾರಿಗಳ ಜೊತೆ ಶಾಮೀಲಾಗಿ, ಸಾಲದ ಹಣವನ್ನು ದುರುಪಯೋಗಪಡಿಸಿಕೊಂಡ ಅನೇಕ ಸಂಗತಿಗಳೂ ಇವೆ. ಹೀಗೆ ಸಾಲಗಳು ಮರುಪಾವತಿಯಾಗದೆ ಇರುವುದರ ಹಿಂದೆ ಅನೇಕ ಕಾರಣಗಳು ಇರುತ್ತವೆ.

ಬ್ಯಾಂಕ್ ಕ್ಷೇತ್ರದಲ್ಲಿ ಏರುತ್ತಿರುವ ಎನ್‌ಪಿಎಗಳ ಬಗೆಗೆ ಅಖಿಲ ಭಾರತ ಬ್ಯಾಂಕ್ ನೌಕರರ ಸಂಘ (ಎಐಬಿಇಎ) ಅವಿರತವಾಗಿ ದನಿ ಎತ್ತುತ್ತ ಬಂದಿದೆ. ಕೇಂದ್ರ ಸರ್ಕಾರ ದುರುದ್ದೇಶಪೂರಿತ ಸಾಲಗಾರನ ವಿರುದ್ಧ ಕಠಿಣ ಕ್ರಮಗಳನ್ನು ಜಾರಿಗೊಳಿಸಬೇಕೆಂದು ಆಗ್ರಹಿಸುತ್ತಲೇ ಇದೆ. ದೊಡ್ಡ ದೊಡ್ಡ ಸಾಲಗಾರರ ಹೆಸರುಗಳು ಮತ್ತು ಅದರಿಂದ ಸಂದಾಯವಾಗಬೇಕಾದ ಹಣದ ವಿವರಗಳನ್ನು

ವ್ಯಾಪಾರದಲ್ಲಿ ಏರುಪೇರುಗಳಾಗುವುದು ಸಹಜ. ಈ ಪ್ರಕ್ರಿಯೆ ಸಣ್ಣ ವ್ಯಾಪಾರಿ ಕ್ಷೇತ್ರವನ್ನೂ ಬಾಧಿಸುತ್ತದೆ. ದೊಡ್ಡ ವ್ಯಾಪಾರವೂ ಇದಕ್ಕೆ ಹೊರತಾಗಿಲ್ಲ. ಬ್ಯಾಂಕುಗಳು ಸಾಲ ನೀಡುವಾಗ ಹಲವು ವಿಧದ ಜಾಗರೂಕತಾ ಕ್ರಮಗಳನ್ನು ತೆಗೆದುಕೊಳ್ಳುತ್ತವೆ. ಆದಾಗ್ಯೂ ಕೆಲವು ಸಾಲಗಳು ಮರುಪಾವತಿಯಾಗುವುದಿಲ್ಲ. ಬ್ಯಾಂಕುಗಳು ಮತ್ತು ಸಾಲಗಾರರ ತಪ್ಪು ವ್ಯಾವಹಾರಿಕ ನಿರ್ಧಾರಗಳಿಂದ ಸಾಲಗಳು ಚುಕ್ತಾ ಆಗದೇ ಇರುವುದುಂಟು. ಸಾಲಗಾರರು ತಮ್ಮ ಸ್ವಂತ ಬಳಕೆಯಾಗಿ ಸಾಲದ ಹಣವನ್ನು ಬಳಸಿಕೊಂಡು ಸಾಲ ಸುಸ್ತಿಯಾಗಿರಬಹುದು. ಸಾಲಗಾರರು ಬೇಕಂತಲೇ ಬ್ಯಾಂಕುಗಳಿಗೆ ಮೋಸ ಮಾಡಿ, ಸಾಲದ ಹಣವನ್ನು ಗುಳುಂ ಮಾಡಿದ ಅನೇಕ ಉದಾಹರಣೆಗಳಿವೆ. ಬ್ಯಾಂಕುಗಳ ಕೆಲವು ವರಿಷ್ಠ, ಭ್ರಷ್ಟ ಅಧಿಕಾರಿಗಳ ಜೊತೆ ಶಾಮೀಲಾಗಿ, ಸಾಲದ ಹಣವನ್ನು ದುರುಪಯೋಗಪಡಿಸಿಕೊಂಡ ಅನೇಕ ಸಂಗತಿಗಳೂ ಇವೆ. ಹೀಗೆ ಸಾಲಗಳು ಮರುಪಾವತಿಯಾಗದೆ ಇರುವುದರ ಹಿಂದೆ ಅನೇಕ ಕಾರಣಗಳು ಇರುತ್ತವೆ.

ಬಿಡುಗಡೆ ಮಾಡುತ್ತಲೇ ಇದೆ. ಪ್ರತಿಭಟನಾ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ. ಮುಷ್ಕರಗಳನ್ನೂ ಹೂಡಿದೆ. ಸಾಮಾನ್ಯ ಜನರಿಗೆ ಮತ್ತು ಗ್ರಾಹಕರಿಗೆ ಈ ವಿಷಯ ಮನವರಿಕೆ ಮಾಡಿಕೊಡುವ ನಿಟ್ಟಿನಲ್ಲಿ ಶ್ರಮಿಸಿದೆ. ಬ್ಯಾಂಕ್ ನೌಕರರ ವೇತನ, ಮತ್ತಿತರ ಸವಲತ್ತುಗಳನ್ನು ಬದಿಗಿಟ್ಟು ಇಡೀ ರಾಷ್ಟ್ರದ ಆರ್ಥಿಕ ಹಿತಾಸಕ್ತಿಗಾಗಿ ಹಲವಾರು ಬಾರಿ ಮುಷ್ಕರ ಹೂಡುತ್ತಲೇ ಬಂದಿರುವ ಈ ಸಂಸ್ಥೆಯ ಹೋರಾಟದ ಸಂಸ್ಕೃತಿ ಅತ್ಯಂತ ಪ್ರಶಂಸನೀಯ, ಅನನ್ಯ. ಈ ವಿಷಯದಲ್ಲಿ ಎಐಬಿಇಎಯದು ಒಂಟಿ ಹೋರಾಟ. ಇದೊಂದು ಬೇಜಾರಿನ ವಿಚಾರವೇ.

ಬ್ಯಾಂಕ್ ಕ್ಷೇತ್ರದಲ್ಲಿ, ಸುಮಾರು ೧೭ ವರ್ಷಗಳ ಹಿಂದೆ, ಬ್ಯಾಂಕ್ ನೌಕರ – ಅಧಿಕಾರಿ ಸಂಘಗಳ ಸಂಯುಕ್ತ ವೇದಿಕೆ (ಯುನೈಟೆಡ್ ಫೋರಂ ಆಫ್ ಬ್ಯಾಂಕ್ ಯೂನಿಯನ್ಸ್) ಅಸ್ತಿತ್ವಕ್ಕೆ ಬಂದಿತು. ಆ ಕಾಲಘಟ್ಟದಲ್ಲಿ, ಎಐಬಿಇಎನ ಪ್ರಧಾನ ಕಾರ್ಯದರ್ಶಿಯಾಗಿದ್ದ ಕಾ॥ ತಾರಕೇಶ್ವರ್ ಚಕ್ರವರ್ತಿ, ಕೇಂದ್ರ ಸರ್ಕಾರ ಅನುಷ್ಠಾನಗೊಳಿಸುತ್ತಿದ್ದ ಬ್ಯಾಂಕ್ ಸುಧಾರಣೆ(?)ಗಳು, ನೀತಿಗಳನ್ನು ಎದುರಿಸಲು ಜಂಟಿ ಹೋರಾಟ ಅವಶ್ಯವೆಂದು ಮನಗಂಡರು. ಅದರ ಫಲವಾಗಿ ಯು.ಎಫ್.ಬಿ.ಯು. ರೂಪುಗೊಂಡಿತು. ಎ.ಐ.ಬಿ.ಇ.ಎಗೆ ಇದ್ದ ಹಾಗೂ ಇರುವ ದೂರದರ್ಶಿತ್ವ, ಮುನ್ನೋಟಗಳಿಗೆ ಇದೊಂದು ನಿದರ್ಶನ. ಅಲ್ಲಿಯವರೆಗೂ, ಬ್ಯಾಂಕ್ ನೌಕರರು ಯಾವುದೇ ಸಂಘಕ್ಕೆ ಸೇರಿರಲಿ, ಅವರನ್ನೂ ಒಳಗೊಂಡು ಎಐಬಿಇಎ, ಎಲ್ಲ ನೌಕರರ ಸೇವಾ ಸೌಲಭ್ಯಗಳನ್ನು ಒದಗಿಸುವ ಏಕೈಕ ಸಂಘವಾಗಿತ್ತು. ಎಐಬಿಇಎಯು ಜನ್ಮತಳೆದ ನಂತರವೇ ಬ್ಯಾಂಕ್ ಕ್ಷೇತ್ರದ ಇತರ ನೌಕರ ಸಂಘಗಳಿಗೆ ಒಂದು ಅಸ್ತಿತ್ವ ದೊರಕಿತು ಎಂದರೆ ಅತಿಶಯೋಕ್ತಿ ಯಾಗುವುದಿಲ್ಲ. ವಿಷಯ ಹೀಗಿರಬೇಕಾದರೆ, ವೇತನ ಒಪ್ಪಂದದಂಥ ವಿಚಾರಗಳಿಗೆ ಯುಎಫ್‌ಬಿಯುನ ಎಲ್ಲ ಘಟಕಗಳು ಒಂದಾಗುತ್ತವೆ. ಆದರೆ ಬೆಲೆ ಏರಿಕೆ, ಕಾಯಿದೆ ಕ್ಷೇತ್ರದ ಸುಧಾರಣೆಗಳು ಇತ್ಯಾದಿ ವಿಷಯಗಳಲ್ಲಿ ಎಐಬಿಇಎ ಮತ್ತು ಬಿಇಎಫ್‌ಐ ಗಳನ್ನು (ಬ್ಯಾಂಕ್ ಎಂಪ್ಲಾಯೀಸ್ ಫೆಡರೇಶನ್ ಆಫ್ ಇಂಡಿಯಾ) ಹೊರತುಪಡಿಸಿ, ಇತರ ಸಂಘಗಳು ಸಕಾರಾತ್ಮಕವಾಗಿ ಸ್ಪಂದಿಸುತ್ತಿಲ್ಲ! ಇದು ಆ ಸಂಘಟನೆಗಳಿಗಿರುವ, ಅವುಗಳ ನಾಯಕರುಗಳಿಗಿರುವ ದುಡಿಯುವ ವರ್ಗದ ಪ್ರಜ್ಞೆಯ ಕೊರತೆಯನ್ನು ಎತ್ತಿ ತೋರಿಸುತ್ತದೆ!

ಅದೇನೇ ಇರಲಿ, ಇಷ್ಟೆಲ್ಲ ಒತ್ತಡ ಹಾಕಿದ್ದರೂ, ಹೋರಾಟಗಳನ್ನು ಮಾಡಿದ್ದರೂ, ಕೇಂದ್ರ ಸರ್ಕಾರ ಮತ್ತು ಭಾರತೀಯ ರಿಸರ್ವ್ ಬ್ಯಾಂಕ್‌ಗಳಿಗೆ ಏರುತ್ತಲೇ ಇರುವ ಅನುತ್ಪಾದಕ ಆಸ್ತಿಗಳನ್ನು ವಸೂಲು ಮಾಡಲು, ನಿಯಂತ್ರಿಸಲು ಸಾಧ್ಯವಾಗುತ್ತಿಲ್ಲ. ಈ ಪರಿಸ್ಥಿತಿಗೆ ಇಚ್ಛಾಶಕ್ತಿಯ ಕೊರತೆಯೂ ಒಂದು ಕಾರಣ. ಕೋಟಿಗಟ್ಟಲೆ ಸಾಲ ಬಾಕಿ ಇಟ್ಟು ಕೊಂಡಿರುವವರ ಪೈಕಿ ಪ್ರತಿಭಾನ್ವಿತ ರಾಜಕಾರಣಿಗಳೂ ಇದ್ದಾರೆ. ಇಂತಹ ದುರುದ್ದೇಶಪೂರಿತ ಸುಸ್ತಿದಾರರನ್ನು ಕ್ರಿಮಿನಲ್ ಅಪರಾಧಿಗಳೆಂದು ಪರಿಗಣಿಸಿ, ಅಂತಹವರು ಚುನಾವಣೆಗಳಲ್ಲಿ ಅಭ್ಯರ್ಥಿಗಳಾಗಿ ಸ್ಪರ್ಧಿಸದಂತೆ, ಸೂಕ್ತ ಕಾನೂನನ್ನು ಜಾರಿ ಮಾಡಬೇಕೆಂದು ಎಐಬಿಇಎಯ ನಿಲುಮೆ. ಆದರೆ ಈ ನಿಟ್ಟಿನಲ್ಲಿ, ಕಠಿಣ ಕ್ರಮಗಳು ಜಾರಿಯಾಗುವ ಸೂಚನೆಗಳೇ ಕಾಣಿಸುತ್ತಿಲ್ಲ.

ಅನುತ್ಪಾದಕ ಆಸ್ತಿಗಳಿಗೆ ಸಂಬಂಧಿಸಿದಂತೆ ಇತ್ತೀಚಿನ ಒಂದು ವಿದ್ಯಮಾನವನ್ನು ಗಮನಿಸೋಣ. ಇದೀಗ ಕೊಲ್ಕತ್ತ ಮೂಲದ ರಾಷ್ಟ್ರೀಕೃತ ಬ್ಯಾಂಕ್ ಆಗಿರುವ ಯುನೈಟೆಡ್ ಬ್ಯಾಂಕ್ ಸುದ್ದಿಯಲ್ಲಿದೆ; ಬ್ಯಾಂಕ್ ವಲಯದಲ್ಲಿ ಅದನ್ನು 'ಟೀ ಬ್ಯಾಂಕ್' ಎಂದೇ ಕರೆಯಲಾಗುತ್ತದೆ. ಏಕೆಂದರೆ, ಅದು ಟೀ ವ್ಯಾಪಾರಕ್ಕೆ ಹಣವನ್ನು ಒದಗಿಸುವ (ಸಾಲಗಳ ಮೂಲಕ) ದೀರ್ಘ ಇತಿಹಾಸವನ್ನು ಹೊಂದಿದೆ. ಪ್ರಸ್ತುತ ಈ ಬ್ಯಾಂಕಿನ ಕೆಟ್ಟ ಸಾಲಗಳು ಆತಂಕಕಾರಿ ಮಟ್ಟ ತಲುಪಿವೆ. ಆರು ತಿಂಗಳ ಅವಧಿಯಲ್ಲಿ (ಅಂದರೆ ಡಿಸೆಂಬರ್ ೨೦೧೩ ಕೊನೆಯಲ್ಲಿ), ಅದರ




ಅನುತ್ಪಾದಕ ಆಸ್ತಿ ರೂ. ೪೦೦೧ ಕೋಟಿಯಿಂದ ರೂ. ೮,೫೪೫ ಕೋಟಿಗೆ ಏರಿತು! ೩೧ – ೧೨ – ೨೦೧೩ರಲ್ಲಿ, ಈ ಬ್ಯಾಂಕಿನ ಒಟ್ಟು ಸಾಲಗಳ ಪೈಕಿ ಮರುಪಾವತಿಯಾಗದ ಸಾಲಗಳು ಶೇ. ೧೧ರಷ್ಟಿದ್ದವು. ರಾಷ್ಟ್ರೀಕೃತ ಬ್ಯಾಂಕುಗಳಲ್ಲೇ ಇದು ಅತ್ಯಧಿಕ ಮಟ್ಟದಲ್ಲಿದೆ. ಅಲ್ಲದೆ ಡಿಸೆಂಬರ್ ೨೦೧೩ರಲ್ಲಿ (ವರ್ಷದ ೩ನೇ ತ್ರೈಮಾಸಿಕದ ಅಂತ್ಯದಲ್ಲಿ ಈ ಬ್ಯಾಂಕ್ ರೂ. ೧೨೦೦ ಕೋಟಿಯಷ್ಟು ನಷ್ಟವನ್ನು ಅನುಭವಿಸಿದೆ. ಸಣ್ಣ ಮತ್ತು ಮಧ್ಯಮ ಕೈಗಾರಿಕಾ ವಲಯ ಮತ್ತು ಕೃಷಿ ರಂಗದ ಸಾಲಗಳ ಕ್ಷೇತ್ರದಲ್ಲಿ ಅನುತ್ಪಾದಕ ಆಸ್ತಿಗಳು ಹೆಚ್ಚಿವೆ ಎಂದು ಹೇಳಲಾಗುತ್ತಿದೆ. ಕಳೆದ ವರ್ಷ ಭಾರತೀಯ ರಿಸರ್ವ್ ಬ್ಯಾಂಕ್ ಎಂದಿನಂತೆ ಈ ಬ್ಯಾಂಕಿನ ಲೆಕ್ಕ ಪರಿಶೋಧನೆ (Audit) ಕೈಗೊಂಡಿತ್ತು. ಈಗ ಪುನಃ ಹೊಸದಾಗಿ ಈ ಪ್ರಕ್ರಿಯೆಯನ್ನು ಶುರುಮಾಡಿದೆ. ಈ ಗಂಭೀರ ಪರಿಸ್ಥಿತಿ ಮುಂದುವರಿದರೆ ಯುನೈಟೆಡ್ ಬ್ಯಾಂಕ್ ಆಫ್ ಇಂಡಿಯಾ ಸಾಲಗಳನ್ನು ಕೊಡಲು ಸಾಧ್ಯವಾಗುವುದಿಲ್ಲ. ಅಂತರರಾಷ್ಟ್ರೀಯ ಬ್ಯಾಂಕ್ ಮಾರ್ಚ್ ಬೇಸೆಲ್ ೩ರ ಬಂಡವಾಳ ನಿಬಂಧನೆಗಳ ಅನ್ವಯ ಕೇಂದ್ರ ಸರ್ಕಾರ ರೂ. ೧೦೦೦ ಕೋಟಿಯಷ್ಟು ಬಂಡವಾಳವನ್ನು ಈ ಬ್ಯಾಂಕಿಗೆ ಒದಗಿಸಬೇಕು. ಬಲ್ಲ ಮೂಲಗಳ ಪ್ರಕಾರ ಕೆಲವು ಷರತ್ತುಗಳಡಿ ಈ ಬಂಡವಾಳವನ್ನು ಸರ್ಕಾರವೇ ನೀಡಬಹುದು.

ಯುನೈಟೆಡ್ ಬ್ಯಾಂಕ್ ಆಫ್ ಇಂಡಿಯಾದ ಈ ದುಸ್ಥಿತಿಗೆ ಕಾರಣಗಳೇನು? ಕಾರಣಕರ್ತರಾರು? ಎಂಬಿತ್ಯಾದಿ ಪ್ರಶ್ನೆಗಳಿಗೆ ಸೂಕ್ತ ತನಿಖೆಗಳೇ ಉತ್ತರ ನೀಡಬೇಕು. ಈ ಮಧ್ಯೆ, ಇನ್ಫೋಸಿಸ್ ಸಂಸ್ಥೆ ತಯಾರಿಸಿದ ಫಿನಾಕಿಲ್ (Finacle) ಸಾಫ್ಟ್‌ವೇರ್ ಕೆಟ್ಟ ಸಾಲಗಳನ್ನು ಪರಿಗಣಿಸುವುದರಲ್ಲಿ ಸರಿಯಾಗಿ ಕಾರ್ಯ ನಿರ್ವಹಿಸಿಲ್ಲ ಎಂದು ಈ ಬ್ಯಾಂಕ್ ಆಪಾದಿಸಿದೆ. ಇದಕ್ಕೆ ಪ್ರತಿಕ್ರಿಯಿಸಿರುವ ಇನ್‌ಫೋಸಿಸ್ ಸಂಸ್ಥೆ, ಯುನೈಟೆಡ್ ಬ್ಯಾಂಕ್ ಆಫ್ ಇಂಡಿಯಾ ಇತ್ತೀಚೆಗೆ ಈ ಸಾಫ್ಟ್‌ವೇರನ್ನು ಮೇಲ್‌ಸ್ತರಕ್ಕೆ (Upgrade) ಏರಿಸಬೇಕೆಂದು ತಿಳಿಸಿದೆ. ಆಸ್ತಿಗಳ ವಿಂಗಡಣೆ ಮತ್ತು ಭಾರತ ರಿಸರ್ವ್ ಬ್ಯಾಂಕ್‌ನ ನಿಯಮಗಳ ಅನುತ್ಪಾದಕ ಆಸ್ತಿಗಳ ವರದಿ ಮಾಡುವಿಕೆ, ಇವುಗಳನ್ನು ಸರಿಯಾಗಿ ನಿಭಾಯಿಸುವುದರಲ್ಲಿ ಫಿನಾಕಲ್ ಸಾಫ್ಟ್‌ವೇರ್ ಸಮರ್ಥವಾಗಿದೆ ಎಂದು ಹೇಳಿಕೆ ನೀಡಿದೆ. ಉದ್ಯಮದ ಮೂಲಗಳ ಪ್ರಕಾರ ಭಾರತದ ಬ್ಯಾಂಕುಗಳ ಪೈಕಿ ಶೇ. ೬೦ರಷ್ಟು ಈ ಸಾಫ್ಟ್‌ವೇರನ್ನು (ಶುರುವಾದದ್ದು ೧೯೯೯ರಲ್ಲಿ) ಬಳಸುತ್ತಿವೆ. ವರ್ಷವೊಂದಕ್ಕೆ ಇದರಿಂದ ಸುಮಾರು ೩೦೦ ಮಿಲಿಯನ್ ಡಾಲರ್‌ಗಳ ಆದಾಯ ಬರುತ್ತದೆ ಎಂದೂ ಅವು ತಿಳಿಸುತ್ತವೆ.

(ಆಧಾರ: (೧) ಮಿಂಟ್ ಪತ್ರಿಕೆ – ಸಂಚಿಕೆ ೧೨ – ೨ – ೨೦೧೪ ಪುಟ ೫ (೨) ಫೈನಾನ್ಷಿಯಲ್ ಎಕ್ಸ್‌ಪ್ರೆಸ್ – ಸಂಚಿಕೆ ೧೫ – ೨ – ೨೦೧೪ ಪುಟ ೧೦)

ಇತ್ತೀಚೆಗೆ ಈ ಬ್ಯಾಂಕಿನ ಅಧ್ಯಕ್ಷೆ ಮತ್ತು ನಿರ್ವಾಹಕ ನಿರ್ದೇಶಕಿ ಅರ್ಚನ ಭಾರ್ಗವ ಸ್ವಯಂ ನಿವೃತ್ತಿ ಪಡೆದಿದ್ದಾರೆ. ಅವರು ವೈಯಕ್ತಿಕ ಕಾರಣಗಳನ್ನು ನೀಡಿ, ತಮ್ಮ ವೃತ್ತಿಗೆ ವಿದಾಯ ಹೇಳಿದ್ದಾರೆ. ಆದರೆ ಇದರ ಹಿಂದೆ, ಬೇರೆಯೇ ಕತೆ ಇರಬಹುದೆಂಬ ಮಾತು ಅಲ್ಲಲ್ಲಿ ಕೇಳಿಬರುತ್ತಿದೆ. ಎಕನಾಮಿಕ್ಸ್ ಟೈಮ್ಸ್‌ನ ೨೬ – ೨ – ೨೦೧೪ ಸಂಚಿಕೆಯ ಪುಟ ೧೪ರಲ್ಲಿ ಈ ವಿಷಯದ ಬಗೆಗೆ ಒಂದು ವರದಿಯಿದೆ. ಅದರ ಪ್ರಕಾರ, ಈ ಬ್ಯಾಂಕಿನ ಆಡಳಿತ ಮಂಡಳಿ ಅಸಮ್ಮತಿಯಿದ್ದರೂ ಒಬ್ಬ ಪ್ರಮುಖ, ದೊಡ್ಡ ಬಿಲ್ಡರ್‌ಗೆ ೧೦೦ ಕೋಟಿ ರೂ.ಗಳ ಸಾಲವನ್ನು ನೀಡಲಾಯಿತು. ಈ ಸಂಗತಿಯನ್ನು ಬ್ಯಾಂಕಿನ ೧೦ ಮಂದಿ ಜನರಲ್ ಮ್ಯಾನೇಜರರು (ಪ್ರಧಾನ ನಿರ್ವಾಹಕರು) ಬ್ಯಾಂಕಿನ ಸ್ವತಂತ್ರ ನಿರ್ದೇಶಕರ ಮೂಲಕ ಭಾರತೀಯ ರಿಸರ್ವ್ ಬ್ಯಾಂಕ್ ಮತ್ತು ವಿತ್ತ ಸಚಿವಾಲಯಕ್ಕೆ ತಿಳಿಸಿದರು. ಇದು ಒಂದು ದೂರಿನ ರೂಪದಲ್ಲಿತ್ತು. ಅರ್ಚನಾ ಅವರನ್ನು ಈ ಬ್ಯಾಂಕಿನ ಮುಖ್ಯಸ್ಥೆಯಾಗಿ ನೇಮಿಸಿದಾಗ, ಮೇಲಿನ ಎರಡು ಸಂಸ್ಥೆಗಳು, ಆಕೆ ಬ್ಯಾಂಕಿನ ಸಾಲಗಳ ವ್ಯವಹಾರಗಳ ಬಗೆಗೆ ನಿಗಾವಹಿಸಿ, ಸೂಕ್ತಕ್ರಮಗಳನ್ನು ಜಾರಿ ಮಾಡಿ, ಸ್ವಚ್ಛ

ಮಾಡುವರೆಂಬ ಆಶಯವನ್ನು ಹೊಂದಿದ್ದವು. ಆದರೆ ಆಕೆಯ ಆರ್ಥಿಕ ಮತ್ತು ವೈಯಕ್ತಿಕ ದುರ್ನಿರ್ವಹಣೆಯ ಬಗೆಗೆ ದೂರುಗಳು ಕೇಳಿಬಂದಾಗ, ಈ ಎರಡೂ ಸಂಸ್ಥೆಗಳು ಆಕೆಯ ಮೇಲಿಟ್ಟಿದ್ದ ಭರವಸೆಯನ್ನು ಕಳೆದುಕೊಂಡವು ಎಂದು ಸರ್ಕಾರದ ಉನ್ನತ ಅಧಿಕಾರಿಯೊಬ್ಬರು ತಿಳಿಸಿದ್ದಾರೆ. ಈ ಅಧಿಕಾರಿಯ ಪ್ರಕಾರ ಬ್ಯಾಂಕಿನ ಫಾರೆನ್‌ಸಿಕ್ ಲೆಕ್ಕ ಪರಿಶೋಧನೆ (Forensic Audit)ಯ ವರದಿ ಎರಡು ಮುಖ್ಯ ವಿಷಯಗಳ ಕುರಿತು ಬೆಳಕು ಚೆಲ್ಲಿದೆ. ಅವೆಂದರೆ :

೧) ಕೆಲವು ಸಾಲ ಲೆಕ್ಕ ಖಾತೆಗಳನ್ನು (Accounts) ಯಾವುದೇ ಕಾರ್ಯಸಾಧ್ಯತಾ ಅಧ್ಯಯನ (Viability Study) ಇಲ್ಲದೆ ಪುನರ‍್ರಚಿಸಲಾಗಿದೆ.

೨) ಕೆಲವು ಸಾಲ ಲೆಕ್ಕ ಖಾತೆಗಳು ವಿಶೇಷ ವಿನಾಯಿತಿಗೆ ಅನರ್ಹವಾಗಿದ್ದರೂ, ಅವುಗಳನ್ನು ಕೆಳಗಿನ ಹಂತದ ಪರಿಗಣನೆಗೆ ಒಳಪಡಿಸಿಲ್ಲ. ಅಂದರೆ ಡೌನ್‌ಗ್ರೇಡ್ ಮಾಡಿಲ್ಲ.

ಈ ಬ್ಯಾಂಕಿನ ಇಬ್ಬರು ಉನ್ನತ ಅಧಿಕಾರಿಗಳು ನೀಡಿರುವ ಮಾಹಿತಿಯ ಅನ್ವಯ ದೆಹಲಿಯ ಶಾಖೆಯೊಂದರಲ್ಲೇ ಸರಿಯಾದ ಸರಕುಗಳ ಸೂಕ್ತ ಆಧಾರವಿಲ್ಲದೆ, ಸುಮಾರು ೧೫೦ ಲೆಕ್ಕ ಖಾತೆಗಳಿಗೆ ರೂ. ೮೦೦ ಕೋಟಿ ಮೌಲ್ಯದ ಸಾಲವನ್ನು ಬಿಲ್ ಡಿಸ್ಕೌಂಟ್ ವ್ಯವಸ್ಥೆಯ ಮೂಲಕ ಜಮಾ ಮಾಡಲಾಗಿದೆ. ಈ ಲೆಕ್ಕ ಖಾತೆಗಳಲ್ಲಿ ಪ್ರಸ್ತುತ ಸುಮಾರು ರೂ. ೩೦೦ ಕೋಟಿ ಸುಸ್ತಿಯಾಗಿದೆ. (ಎಕನಾಮಿಕ್ಸ್ ಟೈಮ್ಸ್ – ಸಂಚಿಕೆ – ೨೪–೨–೨೦೧೪ ಪುಟ ೧)




ಇತ್ತೀಚಿನ ಸುದ್ದಿಯ ಪ್ರಕಾರ, ದಿ ಇನ್‌ಸ್ಟಿಟ್ಯೂಟ್ ಆಫ್ ಚಾರ್ಟರ್ಡ್ ಅಕೌಂಟೆಂಟ್ಸ್ ಆಫ್ ಇಂಡಿಯಾ (ICAI), ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾದಿಂದ ಈ ಬ್ಯಾಂಕಿನ ೩ ವರ್ಷಗಳ ಸಾಲದ ವಿವರಗಳನ್ನು ಕೇಳಿದೆ. ಬ್ಯಾಂಕಿನ ಲೆಕ್ಕ ಪರಿಶೋಧಕರು ಏನಾದರೂ ಅಂಕಿ – ಸಂಖ್ಯೆಗಳಲ್ಲಿ ಗೋಲ್‌ಮಾಲ್ ಮಾಡಿರುವರೇ ಎಂದು ಅರಿಯಲು ಈ ಸಂಸ್ಥೆ ಈ ಕ್ರಮಕ್ಕೆ ಮುಂದಾಗಿದೆ. (ಫೈನಾನ್ಷಿಯಲ್ ಎಕ್ಸ್‌ಪ್ರೆಸ್ – ಸಂಚಿಕೆ – ೬ – ೩ – ೨೦೧೪).

ಕೇಂದ್ರ ಅರ್ಥಮಂತ್ರಿ ಪಿ. ಚಿದಂಬರಂ ಅವರ ಪ್ರಕಾರ ಕಳೆದ ಎರಡು ತಿಂಗಳಲ್ಲಿ, ಈ ಬ್ಯಾಂಕ್ ಸುಮಾರು ರೂ. ೪೦೦ ಕೋಟಿ ಸಾಲದ ಹಣವನ್ನು ವಸೂಲು ಮಾಡಿದೆ. ರೂ. ೮೦೦ ಕೋಟಿ ಮೌಲ್ಯದ ಸಾಲ ಲೆಕ್ಕ ಖಾತೆಗಳನ್ನು ಮೇಲ್‌ಸ್ತರಕ್ಕೆ (upgrade) ಕೊಂಡೊಯ್ದಿದೆ. ಇವೆಲ್ಲದರಿಂದ, ಎನ್‌ಪಿಎ ಮೊತ್ತ ಸುಮಾರು ರೂ. ೧೨೦೦ ಕೋಟಿ ಕಡಿಮೆಯಾಗಿದೆ ಎಂದು ಅವರು ತಿಳಿಸಿದ್ದಾರೆ. (ಮಿಂಟ್ ಪತ್ರಿಕೆ – ಸಂಚಿಕೆ ೬ – ೩ – ೨೦೧೪ – ಪುಟ ೩).

ಹೀಗಿದೆ ಯುನೈಟೆಡ್ ಬ್ಯಾಂಕ್ ಆಫ್ ಇಂಡಿಯಾದ ಸಾಲಗಳ ಕಥೆ. ಇದು ಒಂದು ರಾಷ್ಟ್ರೀಕೃತ ಬ್ಯಾಂಕಿನ ವಿಚಾರವಷ್ಟೆ. ಉಳಿದವುಗಳಲ್ಲಿ ಎಷ್ಟು ಹುತ್ತಗಳಿವೆಯೋ? ಅವುಗಳಲ್ಲಿ ಯಾವ ಬಗೆಯ ಹಾವುಗಳಿವೆಯೋ? ಖಾಸಗಿ ರಂಗದ ಧನಲಕ್ಷ್ಮೀ ಬ್ಯಾಂಕ್ ತಹ ಸಾಲಗಳ ವಿಷಯದಲ್ಲಿ ಕಳವಳಕಾರಿ ಸ್ಥಾನವನ್ನು ಪಡೆದಿದೆ ಎಂದು ವಿತ್ತಪತ್ರಿಕೆಗಳು ವರದಿ ಮಾಡಿವೆ.

ಈಗಲಾದರೂ, ಕೇಂದ್ರ ಸರ್ಕಾರ ಅಥವಾ ಮುಂಬರುವ ಸರ್ಕಾರ ಆಮೂಲಾಗ್ರ ತನಿಖೆ ನಡೆಸಿ, ತಪ್ಪಿತಸ್ಥರ ಮೇಲೆ ಸರಿಯಾದ ದಂಡನಾ ಕ್ರಮವನ್ನು ಜರುಗಿಸೀತೇ? ಸಾರ್ವಜನಿಕರ ಹಣಕ್ಕೆ ಸೂಕ್ತವಾದ ರಕ್ಷಣಾ ವ್ಯವಸ್ಥೆಯನ್ನು ಜಾರಿಮಾಡೀತೇ?

**ಕೊಳಲೂರು ರಾಧೇಯ**
ಬೆಂಗಳೂರು



# ಬಾಲವಾಡಿಸುತಿದೆ ಕಾಲಡಿಗೆ ಬಿಸಿಲು

೧

**ನ**ಡೆದು ಹೋದಿರಿ ನೀವು
ಸುಡು ನೆಲದ ದಡದ ಕಡೆಗೆ
ತೂಗಿದವು ತೂಬಿನ ತಡಿಗೆ
ಹೊಡೆ ಬಾಗುವಷ್ಟು ಹೂವು

ಗುಡಿಕಟ್ಟೆ ನುಡಿ ಚಿತ್ರದ
ಸುಕ್ಕಾದ ತುಟಿಗಳಿಗೆ
ದಿಕ್ಕೆಟ್ಟ ನೆನಪುಗಳ
ಒಂದಿಷ್ಟು ಚಿಟ್ಟೆಗಳ ಬಿಡಿಸಿದಿರಿ

ಉರಿನಾಲಿಗೆ ದಾರಿ ತಿರುವಿಗೆ
ಅಡಗಿಸಿಟ್ಟಿರಿ ಬುಟ್ಟಿಯಷ್ಟು ನೋವ
ಬಯಲ ಬೆನ್ನಿಗೆ
ತಣ್ಣಸದ ಬೆರಗುಣಿಸಿ

ಹಗಲ ಇರುಳಿನ
ತೊಗಲ ನುಡಿಸಿದಿರಿ ಅಲ್ಲಮನ ಹಾಗೆ

ಮುಗಿಲ ಮುಂಬೆಳಕ ಎಳೆದು
ಚಾಪೆ ಚಪ್ಪರ ಹಾಕಿದಿರಿ ಕದಳಿಗೆ

ಬಿಸಿಲುಡುಗೆ ಉಟ್ಟು ಬೆಸಗೊಂಡ
ಬಿಸಿ ಬೆವರ ಹುಡುಗರ ತುಡಿ ಗೂಡಿಗೆ
ತಂದು ಸಾಕಿದಿರಿ 'ಆತ್ಮ ಪಕ್ಷಿ'ಯ

ಉತ್ತಿ ಬಿತ್ತಿದಿರಿ ಅಕ್ಷರ ಬೀಜ
ಮನುಜ ಮತ ಚೂರ್ಣ ಬೆರೆಸಿ
ಕೇಳಿದಿರಿ ನೆಲಕೆ ಬಲಗಿವಿ ಇಟ್ಟು
ಮಾಳದ ಒಳಗಹ್ವರದಲಿ ಹರಿವ ನಾದ

ಆಹಾಹಾ...!
ಕರಿಗೆರೆ ಮೋರೆಯಲಿ ನೆರಿಗೆ ಬಿಚ್ಚಿದಾಕಾಶ...

೨

ನೀವು ಹೊರಡುವ ದಿವಸ
ಗಿಲಕೆ ಆಡಿಸಿ ಕಲಕಿದಿರಿ ಕವಿದ ನೀರದ

ಮುಗಿಲ ಕುಡಿವ ಛಾತಿ ಇತ್ತು
ನೀವಾಡಿದ ಆ ಮಾತಿಗೆ...

'ಹೋಗಿ ಬರುವೆನು ನಾನೀಗ ದವಾಖಾನೆಗೆ
ಆ ಮ್ಯಾಕೆ ಜೋಡಿ ಜಮಖಾನೆ ಹರಡಿ
ಮಾಚಿ ಎಲೆ ಮಡಚಿ ಮಾಗಣಿ ಮಾತಾಡೋಣ...'

ಆ ಮಾತು ದಿಟವೆಂದು ನಂಬಿ
ಕಾಯುತಿರುವೆನು ಗುರುವೆ ನಿಮ್ಮ ಕರುಣೆಗೆ
ನೀವುಂಡ ನೋವಿನ ತಣಿಗೆ ಹಿಡಿದು

ಬಾಲವಾಡಿಸುತಿದೆ ಕಾಲಡಿಗೆ ಬಿಸಿಲು

*(ಪ್ರೊ॥ ಎ. ಎಸ್. ಹಿಪ್ಪರಗಿ ಅವರನ್ನು ಧ್ಯಾನಿಸಿ)*

**ಪ್ರೊ॥ ಶಂಕರ ಕಟಗಿ**
ನಂ. ೬೦, 'ಚಕೋರಿ', ಪ್ರಕೃತಿ ನಗರ, ಸೊಲ್ಲಾಪುರ ರಸ್ತೆ, ವಿಜಾಪುರ – ೫೮೬ ೧೦೩

# ನವಕರ್ನಾಟಕ ಕನ್ನಡ ಕಲಿಕೆ

ವಿದ್ಯಾರ್ಥಿಗಳಿಗೆ, ಶಿಕ್ಷಕರಿಗೆ ಮತ್ತು ಪೋಷಕರಿಗೆ ಅತ್ಯುಪಯುಕ್ತ ಕೈಪಿಡಿ (ಜನಪ್ರಿಯ 2ನೇ ಮುದ್ರಣ ಇದೀಗ ಲಭ್ಯ)



ಪ್ರೊ॥ ಜಿ. ವೆಂಕಟಸುಬ್ಬಯ್ಯ

ವ್ಯಾಕರಣವು ಒಂದು ವಿಸ್ತಾರವಾದ ಭಾಷಾಶಾಸ್ತ್ರ. ಇದರಲ್ಲಿ ಅನೇಕ ಅಂಗಗಳಿವೆ. ಅವೆಲ್ಲವೂ ಸೇರಿದರೆ ಮಾತ್ರ ವ್ಯಾಕರಣವಾಗುತ್ತದೆ. ಬಹುದಿನಗಳ ಕಾಲ ಕನ್ನಡದ ಬೋಧಕರಾಗಿ ಶಿಕ್ಷಣಕ್ಷೇತ್ರದಲ್ಲಿ ದುಡಿದ ಉತ್ತಮ ಉಪಾಧ್ಯಾಯರಾದ ಶ್ರೀ ಟಿ. ಎಸ್. ಗೋಪಾಲ್ ಅವರು ತಮ್ಮ ಅನುಭವದ ಸಾರವಾಗಿ ಈ ಪುಸ್ತಕಗಳನ್ನು ರಚಿಸಿದ್ದಾರೆ.

ವ್ಯಾಕರಣದ ಪ್ರತಿಯೊಂದು ಅಂಗವನ್ನೂ ಕುರಿತು ಬೇರೆಬೇರೆಯಾಗಿಯೇ ಪುಟ್ಟ ಪುಸ್ತಕಗಳನ್ನು ತಯಾರಿಸಿರುವುದರಿಂದ ಮನೆಯಲ್ಲಿ ಪೋಷಕರಿಗೂ ಇದು ಸಹಾಯಕವಾಗಿರುತ್ತದೆ. ಪಾಠ ಮಾಡುವಾಗ ಒಂದು ಭಾಗವನ್ನು ಮಾತ್ರ ಉಪಯೋಗಿಸಿಕೊಂಡರೆ ಉಪಾಧ್ಯಾಯರಿಗೂ ಅರಿವನ್ನು ನೀಡುತ್ತದೆ. ಶಿಕ್ಷಣ ಇಲಾಖೆಯು ಈ ಪುಸ್ತಕಗಳನ್ನು ಶಾಲೆಗಳಲ್ಲಿ ಉಪಯೋಗಕ್ಕೆ ತರಬೇಕು. ವ್ಯಾಕರಣವನ್ನು ಎಷ್ಟು ಸಂತೋಷದಾಯಕವಾಗಿ ಕಲಿಸಬಹುದು ಎಂಬುದಕ್ಕೆ ಈ ಪುಸ್ತಕಗಳೇ ದೃಷ್ಟಾಂತವಾಗಿವೆ. ಇವುಗಳ ಪ್ರಯೋಜನವು ಹೆಚ್ಚಿ ಕನ್ನಡ ಕಲಿಕೆ ಆನಂದದಾಯಕವಾಗಲಿ.

*– ಪ್ರೊ॥ ಜಿ. ವೆಂಕಟಸುಬ್ಬಯ್ಯ*



ಟಿ. ಎಸ್. ಗೋಪಾಲ್
(ಲೇಖಕರು)

- ನಾಮಪದ ₹30
- ಕ್ರಿಯಾಪದ ₹25
- ಸಮಾನಾರ್ಥ ಪದಕೋಶ ₹35
- ವಿರುದ್ಧಾರ್ಥ ಪದಕೋಶ ₹25
- ನಾನಾರ್ಥ ಪದಕೋಶ ₹40
- ತತ್ಸಮ–ತದ್ಭವ ಪದಕೋಶ ₹25
- ಕನ್ನಡ ನುಡಿಗಟ್ಟುಗಳು ₹25
- ಪತ್ರಲೇಖನ ₹25
- ಕನ್ನಡ ವ್ಯಾಕರಣ ಪದಕೋಶ ₹45
- ಕನ್ನಡವನ್ನು ತಪ್ಪಿಲ್ಲದೆ ಓದಿ ಬರೆಯುವುದು ಹೇಗೆ? ₹20

10 ಶೀರ್ಷಿಕೆಗಳ ಒಂದು ಸೆಟ್‌ನ ಬೆಲೆ ₹ 295. 'ಹೊಸತು' – 3 ವರ್ಷದ ಚಂದಾದಾರರಿಗೆ 20% ಸೋಡಿ (ನಿವ್ವಳ ₹ 236).
ಅಂಚೆ/ಕೊರಿಯರ್ ವೆಚ್ಚ (₹ 40) ಸೇರಿಸಿ ₹ 276 ಎಂ. ಓ/ಡಿ.ಡಿ. ಕಳಿಸಿ

ನವಕರ್ನಾಟಕದ ಎಲ್ಲ ಪುಸ್ತಕಗಳಿಗೂ Online ಮೂಲಕ ಬೇಡಿಕೆ ಸಲ್ಲಿಸಬಹುದು. www.navakarnataka.com ಗೆ ಭೇಟಿ ನೀಡಿ.



## ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್

11, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ 5159, ಕುಮಾರ ಪಾರ್ಕ್ ಪೂರ್ವ
ಬೆಂಗಳೂರು – 560 001. ಫೋನ್ : 30578022, 22203580 ಫ್ಯಾಕ್ಸ್ : 30578023
e-mail : navakarnataka@gmail.com URL : www.navakarnataka.com

ಶಾಖೆಗಳು : ಬೆಂಗಳೂರು ✆ 22251382 :: ಮಂಗಳೂರು ✆ 2441016 ✆ 2425161 :: ಮೈಸೂರು ✆ 2424094 :: ಗುಲ್ಬರ್ಗಾ ✆ 224302

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. Siddanagouda Patil

**HOSATHU** Kannada Monthly / APRIL 2014 / ₹ 15
RNI Regd. KARKAN / 1999 / 614. Karnataka Regd. KRNA/BGE/7/2012-14
Licenced to post without prepayment. WPP No.14.
Posted at MBC, Bangalore GPO-560001 on the 28th of every month. (No. of Pages 64)